# ಕಡಲಬಾಳು ಗ್ರಾಮ: ಸಾಂಸ್ಕೃತಿಕ ಸ್ಥಿತ್ಯಂತರ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಜಾನಪದ ಅಧ್ಯಯನ
ವಿಭಾಗಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
ನಾಗರಾಜ ತಂಬ್ರಹಳ್ಳಿ ಅಂಜಿನಪ್ಪ

ಮಾರ್ಗದರ್ಶಕರು
ಡಾ. ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೭



# ಕಡಲಬಾಳು ಗ್ರಾಮ: ಸಾಂಸ್ಕೃತಿಕ ಸ್ಥಿತ್ಯಂತರ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಸಲ್ಲಿಸಿದ ಜಾನಪದ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು

**ನಾಗರಾಜ ತಂಬ್ರಹಳ್ಳಿ ಅಂಜಿನಪ್ಪ**

ಮಾರ್ಗದರ್ಶಕರು

**ಡಾ. ಮಂಜುನಾಥ ಬೇವಿನಕಟ್ಟಿ**

ಪ್ರಾಧ್ಯಾಪಕರು



ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೧೭



# ಮಾರ್ಗದರ್ಶಕರ ದೃಢೀಕರಣ ಪತ್ರ

**ನಾಗರಾಜ ತಂಬ್ರಹಳ್ಳಿ ಅಂಜಿನಪ್ಪ** ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಕಡಲಬಾಳು ಗ್ರಾಮ: ಸಾಂಸ್ಕೃತಿಕ ಸ್ಥಿತ್ಯಂತರ** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಜಾನಪದ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ಮಂಜುನಾಥ ಬೇವಿನಕಟ್ಟಿ**
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: ೨೯/೪/೧೨

## ಸಂಶೋಧಕರ ಘೋಷಣಾ ಪತ್ರ

**ಕಡಲಬಾಳು ಗ್ರಾಮ: ಸಾಂಸ್ಕೃತಿಕ ಸ್ಥಿತ್ಯಂತರ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಜಾನಪದ ವಿಭಾಗದ ಪ್ರಾಧ್ಯಾಪಕರಾದ **ಡಾ.ಮಂಜುನಾಥ ಬೇವಿನಕಟ್ಟಿ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ನಾಗರಾಜ ತಂಬ್ರಹಳ್ಳಿ ಅಂಜಿನಪ್ಪ**
ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿ
**ಜಾನಪದ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ : 02/05/2017

# ಪರಿವಿಡಿ

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮಹತ್ವ ಮತ್ತು ಸ್ವರೂಪ

೧.೧. ಪ್ರಸ್ತಾವನೆ
೧.೨. ಅಧ್ಯಯನದ ಉದ್ದೇಶ
೧.೩. ಆಕರ ಸಾಮಗ್ರಿ
೧.೪. ಅಧ್ಯಯನ ಕ್ರಮ
೧.೫. ಅಧ್ಯಯನದ ವ್ಯಾಪ್ತಿ
೧.೬. ಇದುವರೆಗೂ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಮಹತ್ವ ಮತ್ತು ಸ್ವರೂಪ

## ೧.೧. ಪ್ರಸ್ತಾವನೆ

ಮಾನವ ಸಮುದಾಯಗಳಿಂದ ತಿಳಿಯುವುದೇನೆಂದರೆ ಮಾನವ ಸಂಘಜೀವಿ. ಮಾನವ ಸಂಸ್ಕೃತಿಯ ವ್ಯಾಪ್ತಿಯು ಬಹಳ ವಿಸ್ತರವಾದದ್ದು. ಅಲ್ಲದೆ ಮಾನವ ಸಂಸ್ಕೃತಿ ಬಹಳ ಅರ್ಥ ಪೂರ್ಣವಾದದ್ದು. ಅಂದರೆ ವ್ಯಕ್ತಿಯ ಸಾಮಾನ್ಯ ಜೀವನಕ್ಕೆ ಸಹಕಾರಿಯಾಗಿರುವಂತದ್ದು ಮತ್ತು ಜೀವನದ ಮೌಲ್ಯಗಳನ್ನೂ, ಸಾಮರಸ್ಯಗಳನ್ನೂ ಬೆಳೆಸುವುದಾಗಿದೆ. ಮಾನವ ಅಲೆಮಾರಿ ಜೀವನ ನಡೆಸುತ್ತಿದ್ದವನು ಕಾಲಾನಂತರ ಒಂದು ಕಡೆ ನೆಲೆಯೂರಲಾರಂಭಿಸಿದ. ನಂತರ ಕುಟುಂಬ, ಧರ್ಮ, ಸಮಾಜ ಮುಂತಾದ ಅಂಶಗಳು ಜನ್ಮ ತಾಳಿದವು.

ಭಾರತದ ಇತಿಹಾಸವು ತುಂಬಾ ಪ್ರಾಚೀನವಾದದ್ದು. ಅಂದಿನಿಂದ ಇಂದಿನವರೆಗೂ ಹಲವಾರು ಸಂಘರ್ಷದಿಂದಲೇ ಕೂಡಿದೆ. ಅನೇಕ ರೀತಿಯ ಧರ್ಮ-ಧರ್ಮಗಳ ನಡುವೆ, ಸಂಸ್ಕೃತಿ-ಸಂಸ್ಕೃತಿಗಳ ನಡುವೆ ಸಮುದಾಯ-ಸಮುದಾಯಗಳ ನಡುವೆ ಹೀಗೆ ವರ್ಣ-ವರ್ಗಗಳ ನಡುವೆ ಸಂಘರ್ಷದಿಂದಲೇ ಕೂಡಿರುವುದನ್ನು ಇತಿಹಾಸದುದ್ದಕ್ಕೂ ಕಾಣಬಹುದು. ಹಲವಾರು ದಾಖಲೆಗಳು ಸಿಗುತ್ತವೆ. ನಮ್ಮ ಸಂಪ್ರದಾಯದಲ್ಲಿ ಮಾತೃ ಪ್ರಧಾನ ಸಂಸ್ಕೃತಿಯಿಂದ ಪ್ರಾರಂಭವಾಗಿ ಪಿತೃಪ್ರಧಾನ ಸಂಸ್ಕೃತಿಯು ಆರ್ಯ-ದ್ರಾವಿಡರ ನಡುವಿನ ಸಂಘರ್ಷ ಉಳಿದುಕೊಂಡೇ ಬಂದಿದೆ. ಈ ಎರಡು ಸಂಸ್ಕೃತಿಗಳ ಸಮ್ಮಿಲನವಾಗಿ, ಹೊಸ ದ್ರಾವಿಡ ಸಂಸ್ಕೃತಿ ಉದಯವಾಗಿದ್ದು, ಅನಂತರ ಪಶುಪಾಲಕರು, ಮೂಲ ಕೃಷಿಕರ ಸಂಸ್ಕೃತಿಯನ್ನು ಅನುಸರಿಸಿದರು.

ಸಿಂಧೂನಾಗರಿಕತೆಯಲ್ಲಿ ದೊರೆತಿರುವ ಅನೇಕ ಕುರುಹುಗಳು ಸಾಕ್ಷಿಯಾಗಿವೆ. ಆರ್ಯರ ಆಗಮನದ ನಂತರ ಶಾಂತವಾಗಿ ಹೊಂದಾಣಿಕೆಯಿಂದ ಬದುಕುತ್ತಿದ್ದ ಮೂಲ ಕೃಷಿಕ ಮತ್ತು

ಪಶು-ಪಾಲಕರಲ್ಲಿ ವಿಷ ಬೀಜ ಬಿತ್ತಿ, ತನ್ನ ಉಳಿವಿಗಾಗಿ ಒಡೆದು ಆಳುವ ನೀತಿಯ ಮೂಲಕ ಕಲಹವನ್ನು ತಂದಿಟ್ಟರು. ಇವರಿಬ್ಬರಲ್ಲೂ ಕಲಹ ತಂದರು. ಇದುವರೆಗೂ ಸಮುದಾಯ ವ್ಯವಸ್ಥೆಯನ್ನು ತಂದು ಒಂದಾಗಿದ್ದ ದ್ರಾವಿಡರೇ ಎರಡಾಗಿ ಒಡೆದು ನೂರಾರು ಸಮುದಾಯಗಳಾಗಿರುವಂತೆ ಮಾಡಿದರು. ಅದು ಇಂದು ಪ್ರತಿಯೊಂದು ಹಳ್ಳಿ ಹಳ್ಳಿಯಲ್ಲೂ ಉಳಿದುಕೊಂಡು ಬಂದಿದೆ. ತನ್ನ ಆರ್ಯ ಸಂಸ್ಕೃತಿಯನ್ನು ಬಲವಂತವಾಗಿಯೇ ದ್ರಾವಿಡರ ಮೇಲೆ ಹೇರಿದೆ. ಅಮಾನವೀಯವಾಗಿ ಅನಾಗರಿಕತೆಯಿಂದ ಕೂಡಿದ್ದ ಮಾನವ ವಿರೋಧಿ ಆರ್ಯಸಂಸ್ಕೃತಿಯನ್ನು ವಿರೋಧಿಸಿ ಮಾನವೀಯ ಮೌಲ್ಯವನ್ನು ಬಿತ್ತರಿಸಿದೆ.

ಬೌದ್ಧಧರ್ಮದ ವಿರುದ್ಧ ಸೋತು ಸುಣ್ಣವಾಗಿದ್ದ ಆರ್ಯಸಂಸ್ಕೃತಿಯು ಅಳಿವಿ ನಂಚಿನಲ್ಲಿದ್ದ ವೈದಿಕ ಸಂಸ್ಕೃತಿಯ ಉಳಿವಿಗಾಗಿ ಬೌದ್ಧಧರ್ಮದ ಮಾನವನ ಮೌಲ್ಯಗಳನ್ನು ತನ್ನವಾಗಿಸಿಕೊಂಡು ತನ್ನ ಅಸ್ತಿತ್ವವನ್ನು ಸಹ ಕಾಪಾಡಿಕೊಂಡಿತು. ಹಂತ-ಹಂತವಾಗಿ ಪ್ರಾಬಲ್ಯವನ್ನು ಸಾಧಿಸಿದ ಹಿಂದೂ ಧರ್ಮ ಬುದ್ಧನ ಕಾಲಾನಂತರ ಮತ್ತೆ ತನ್ನದೆ ಆದಂತಹ ಪ್ರಾಬಲ್ಯ ಮರೆತು ತನ್ನ ಉಳಿವಿಗೆ ನಿರ್ಮೂಲನೆ ಮಾಡಿತು. ಒಂದು ಕಾಲದಲ್ಲಿ ಇಡೀ ಭರತ ಖಂಡವನ್ನು ವ್ಯಾಪಿಸಿದ್ಧ ಬೌದ್ಧಧರ್ಮವನ್ನು ನಾಮಾವಶೇಷಗೊಳಿಸಲು ಕೊನೆಗೂ ಸಾಧ್ಯವಾಗಲೇ ಇಲ್ಲ. ಅದು ಜನಪದರಲ್ಲಿ ಗ್ರಾಮದೇವತೆಗಳ ಆಚರಣೆಗಳ ತಾಂತ್ರಿಕ ಪಂಥವಾಗಿ ದೇಶದಲ್ಲಿನ ಪ್ರತಿ ಹಳ್ಳಿಗಳಲ್ಲೂ ಉಳಿದುಕೊಂಡು ಬಂದಿದೆ. ಇತಿಹಾಸವನ್ನು ಮರೆತವನ್ನು ಇತಿಹಾಸ ಸೃಷ್ಟಿಸಲಾರ ಎಂಬಂತೆ ಆಗಿದೆ.

"ಹಳ್ಳಿಗಳು ಮಾನವಿಕ ವಿಜ್ಞಾನಗಳನ್ನು ವಿಶೇಷವಾಗಿ ಆಕರ್ಷಿಸುವ ಅಧ್ಯಯನದ ವಸ್ತುವಾಗಿವೆ. ಭಾರತ ಮೂಲತಃ ಹಳ್ಳಿಗಳ ನಾಡು. ಅದರಲ್ಲೂ ಭಾರತೀಯ ಹಳ್ಳಿಗಳಿಗಂತೂ ಸಂಸ್ಕೃತಿ ಅಧ್ಯಯನದಲ್ಲಿ ಒಂದು ವಿಶಿಷ್ಟ ಮೌಲ್ಯವಿದೆ. ಒಂದು ಗ್ರಾಮದ ಅಧ್ಯಯನ ಸ್ಥಳೀಯ ನೆಲೆ ಹಾಗೂ ಸಾರ್ವತ್ರಿಕ ನೆಲೆ ಎರಡರಲ್ಲೂ ಮುಖ್ಯವಾಗುತ್ತದೆ. ಅದರ ಇತಿಹಾಸ, ಐತಿಹ್ಯ ಸ್ಥಳೀಯ ಮಹತ್ವ ಪಡೆದರೆ, ಅವರ ಆಚರಣೆ, ನಂಬಿಕೆ, ಸಂಪ್ರದಾಯಗಳಲ್ಲಿನ ಆಶಯಗಳು ಸಾರ್ವತ್ರಿಕ ಪ್ರಾಮುಖ್ಯತೆ ಮುಂತಾದವು ತೌಲನಿಕ ಅಧ್ಯಯನಕ್ಕೆ ನೆರವಾಗುತ್ತದೆ."[೧]

ಸಂಸ್ಕೃತಿಯು ಭವ್ಯ ಪರಂಪರೆಯನ್ನು ಗ್ರಾಮೀಣ ಸಂಸ್ಕೃತಿಯ ಸೊಬಗನ್ನು ತಿಳಿಸುತ್ತದೆ. ಜೊತೆಗೆ ಸಂಸ್ಕೃತಿಯ ವಿಭಿನ್ನ ಬಗೆಯ ಪರಿಕಲ್ಪನೆಯನ್ನು ಮತ್ತು ಜನಜೀವನ, ಸಮಾಜದ ಅನುಭವಗಳನ್ನು ತಿಳಿಸುತ್ತದೆ. ಇಂದಿಗೂ ಹಲವು ಧರ್ಮ ಸಮುದಾಯಗಳ ನಡುವೆ ಉಳಿದುಕೊಂಡು ಬಂದಿದೆ. ಒಂದು ರೀತಿಯಲ್ಲಿ ಯಂತ್ರ, ತಂತ್ರ, ಪಾಶ್ಚಾತ್ಯ ಸಂಸ್ಕೃತಿ ಹಾಗೂ ನಗರೀಕರಣ ಇತ್ಯಾದಿ ಪ್ರಭಾವಗಳಿಂದ ಭಾರತದಲ್ಲಿ ನಗರ ಸಮುದಾಯಗಳು ಗ್ರಾಮ

ಸಂಸ್ಕೃತಿಯನ್ನು ನೆಲಸಮ ಮಾಡುತ್ತವೆ. ಮುಂದಿನ ಪೀಳಿಗೆಯಲ್ಲಿ ನಮ್ಮ ಹಳ್ಳಿಗಳ ಸಂಸ್ಕೃತಿಯೂ ಕಣ್ಮರೆಯಾಗುವುದರಲ್ಲಿ ಸಂಶಯವೇ ಇಲ್ಲ.

ಸಂಸ್ಕೃತಿಯು ವ್ಯಕ್ತಿಯ ಮತ್ತು ಸಮಾಜದ ದೈನಂದಿನ ಬದುಕಿನಲ್ಲಿ ಅಂದರೆ ಅಚಾರ-ವಿಚಾರ, ಉಡುಗೆ-ತೊಡುಗೆ ವೈವಿಧ್ಯಮಯ ಪೂರ್ಣ ಚಟುವಟಿಕೆಗಳನ್ನು ಮನುಷ್ಯ ಸಮಾಜದ ವರ್ತನೆಗಳನ್ನು ವಿವರಿಸುವ ಒಂದು ಶಾಸ್ತ್ರವಾಗಿದೆ. ಇದರಿಂದ ವ್ಯಕ್ತಿಯು ಒಳ್ಳೆಯದನ್ನು ಉದಾತ್ತವಾದ ಮೌಲ್ಯಗಳನ್ನು ಕಲಿಯುತ್ತಾನೆ. ಸಂಸ್ಕೃತಿಯು ಸಾಮಾಜಿಕ ಪ್ರಕ್ರಿಯೆಯಾಗಿದ್ದು, ಸಮಾಜದ ಭೌಗೋಳಿಕ ಸನ್ನಿವೇಶ, ಸೀಮೆಯ ಸಂದರ್ಭಗಳನ್ನು ಅವಲಂಬಿಸಿರುತ್ತದೆ. ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಂಸ್ಕೃತಿಯು ವೈವಿಧ್ಯಮಯವಾಗಿರುತ್ತದೆ. ಅಲ್ಲಿಯ ಸಮುದಾಯದ ಭಾಷೆ, ಧರ್ಮ, ಸಾಮಾಜಿಕ ಪದ್ಧತಿ, ರೀತಿ-ನೀತಿ, ಅನುಕಂಪ, ಸಂಸ್ಕೃತಿಯ ವೈಶಿಷ್ಟ್ಯತೆಗಳನ್ನು ತಿಳಿಯುವ ಉದ್ದೇಶದಿಂದ ಮತ್ತು ಕಡಲಬಾಳು ಸಮುದಾಯದ ಸಾಂಸ್ಕೃತಿಕ ಅಂಶಗಳ ವೈಶಿಷ್ಟ್ಯತೆಯನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ.

"ಸಂಸ್ಕೃತಿಯು ಸಮಾಜದೊಡನೆ ಸಹಬಾಳ್ವೆಯ ಸೌಜನ್ಯದ ಮಾರ್ಗವಾಗಿದೆ. ಗ್ರಾಮದ ಜನರ ನೋವು-ನಲಿವು, ಕೆಲಸಕಾರ್ಯ ಪ್ರತಿಯೊಂದರಲ್ಲಿ ಕುಟುಂಬದ ಪಾತ್ರ ಬಹಳ ಹಿರಿದಾಗಿದೆ. ವ್ಯಕ್ತಿಯ ವಿಕಾಸಕ್ಕೆ ಕುಟುಂಬ ಬಹಳ ಪ್ರಧಾನವಾಗಿದೆ. ಹಾಗೇ ನಮ್ಮ ಉಡುಗೆ-ತೊಡುಗೆ, ನಡೆ-ನುಡಿ, ಆಚಾರ-ವಿಚಾರ, ಹಬ್ಬ-ಹರಿದಿನಗಳು ಈ ಎಲ್ಲಾ ಪ್ರಭಾವದಿಂದ ನಮ್ಮ ಸಂಸ್ಕೃತಿಯ ಶ್ರೀಮಂತಿಕೆ ತಿಳಿಯುತ್ತದೆ. ಗ್ರಾಮದ ಜೀವನವು ಕುಟುಂಬದ ಆಧಾರದ ಮೇಲೆ ನಿರ್ಧಾರವಾಗಿರುತ್ತದೆ. ಸಾಮಾನ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಕುಟುಂಬವು ಪಿತೃಪ್ರಧಾನವಾಗಿದೆ. ತಂದೆಯೇ ಕುಟುಂಬದ ಹಿರಿಯ ಯಜಮಾನ. ಎಲ್ಲರೂ ಆತನಿಗೆ ತಲೆಬಾಗಿ ನಡೆಯುವುದನ್ನು ಕಾಣಬಹುದು. ಕೆಲವು ಸಂದರ್ಭಗಳಲ್ಲಿ ಕುಟುಂಬದಲ್ಲಿ ಸ್ತ್ರೀಯ ಯಜಮಾನಿಕೆಯನ್ನು ಕಾಣಬಹುದು."[೨]

ಪ್ರತಿಯೊಂದು ಗ್ರಾಮ ಅಧ್ಯಯನಕ್ಕೆ ಜನಪದ ಕತೆ, ಗೀತೆ, ಲಾವಣಿ, ಗಾದೆ, ನಂಬಿಕೆ ಆಚರಣೆಗಳು ಮುಂತಾದ ಅಂಶಗಳನ್ನು ಗುರುತಿಸುವುದಾಗಿದೆ. ಅಂದರೆ ಕಡಲಬಾಳು ಗ್ರಾಮವು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿರಿಮೆಯನ್ನು ಹೊತ್ತು ನಿಂತ ಒಂದು ಪವಿತ್ರ ಧರ್ಮ ಕ್ಷೇತ್ರವಾಗಿದೆ. ಅಲ್ಲದೆ ಈ ಕಡಲಬಾಳು ಗ್ರಾಮವು ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿಯೇ ಒಂದು ಪವಿತ್ರ ಕ್ಷೇತ್ರವಾಗಿದೆ. ಯಾವುದೇ ಒಂದು ರಾಷ್ಟ್ರ, ರಾಜ್ಯ ಅಥವಾ ಗ್ರಾಮವು ಆಗಿರಲಿ ಅಲ್ಲಿನ ಜನರ ಸಂಸ್ಕೃತಿ, ಸಾಮಾಜಿಕ, ಧಾರ್ಮಿಕ ಜೀವನದ ಸಂದರ್ಭಗಳನ್ನು ಅಧ್ಯಯನ ಮಾಡುವಾಗ ಆದಿಕಾಲದಿಂದ ಆಧುನಿಕ ಕಾಲದವರೆಗೂ ಹಂತ-ಹಂತವಾಗಿ ನಡೆದು ಬಂದು, ಬದಲಾವಣೆ ಹೊಂದುವ ಅರಿವಿನ ಮೂಲಕ, ನಾವು ಮುಂದೆ ಹೇಗೆ ಬದುಕಬೇಕೆಂಬುದನ್ನು

ತಿಳಿಸುತ್ತದೆ. ಕಡಲಬಾಳು ಗ್ರಾಮದಲ್ಲಿನ ಧಾರ್ಮಿಕ ಆಚರಣೆಗಳು, ರಾಜಕೀಯ, ಸಾಮಾಜಿಕ, ಶೈಕ್ಷಣಿಕ ಹಾಗೂ ಜನಪದ ಸಾಹಿತ್ಯ ಮೂಲಕ ಈ ಅಧ್ಯಯನ ಮಾಡುವ ಉದ್ದೇಶವಾಗಿದೆ.

ಸಂಸ್ಕೃತಿ ಎಂದು ನಾವು ಸಮಾಜದ ವ್ಯವಹಾರದಲ್ಲಿ ಕಂಡುಕೊಂಡ ಸಂಪ್ರದಾಯ ಆಚಾರ ವಿಚಾರಗಳನ್ನು, ಆಹಾರ-ವಿಹಾರ, ಉಡುಗೆ-ತೊಡುಗೆಗಳನ್ನು ವೈವಿಧ್ಯಪೂರ್ಣ, ಚಟುವಟಿಕೆಗಳನ್ನು ಮನದಲ್ಲಿಟ್ಟುಕೊಂಡು ಮಾಡುತ್ತಿದೆ. ಸಂಸ್ಕೃತಿ ಸಾಮಾಜಿಕ ಪ್ರಕ್ರಿಯೆ. ಸಮಾಜವು ಭೌಗೋಳಿಕ ಸನ್ನಿವೇಶ ಸಮಯ ಸಂದರ್ಭಗಳನ್ನು ಪ್ರತಿಯೊಂದು ದೇಶದ ಸಂಸ್ಕೃತಿಯ ವೈವಿಧ್ಯಗಳನ್ನು ತಿಳಿಯಬೇಕಾದರೆ ಅಲ್ಲಿಯ ಸಮುದಾಯ, ಭಾಷೆ-ಧರ್ಮ, ಸಾಮಾಜಿಕ ಪದ್ಧತಿ, ರೀತಿ ಅನುಕಂಪ, ಕಟ್ಟು-ಪಾಡುಗಳು, ಸಹನೆ, ಸಹಬಾಳ್ವೆ ಸಾಂಸ್ಕೃತಿಕ ವಿಶಿಷ್ಟತೆಗಳಿಂದ ಕೂಡಿರುತ್ತದೆ. ಈ ದೃಷ್ಟಿಯಿಂದ ಕಡಲಬಾಳು ಗ್ರಾಮವನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡು ಅದರ ವ್ಯಾಪ್ತಿಯನ್ನು ಕಂಡುಕೊಳ್ಳುವ ಮೂಲಕ ಸಾಂಸ್ಕೃತಿಕ ವೈಶಿಷ್ಟ್ಯತೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಗ್ರಾಮ ಜೀವನದಲ್ಲಿ ಕುಟುಂಬದ ಪಾತ್ರ ಹಿರಿದಾದುದಾಗಿದೆ. "ವ್ಯಕ್ತಿಗಿಂತ ಕುಟುಂಬವೇ ಮುಖ್ಯ. ಏಕೆಂದರೆ ವ್ಯಕ್ತಿಯ ಹಿತಾಸಕ್ತಿಗಳು ಕುಟುಂಬಕ್ಕೆ ಅಧೀನವಾಗಿರುತ್ತವೆ. ಸಾಮಾನ್ಯವಾಗಿ ಇಲ್ಲಿನ ಕುಟುಂಬದಲ್ಲಿ ತಂದೆಯೇ ಕುಟುಂಬದ ಹಿರಿಯ ಯಜಮಾನ. ಎಲ್ಲರೂ ಆತನಿಗೆ ತಲೆಬಾಗಿ ನಡೆಯುವುದನ್ನು ಕಾಣಬಹುದು. ಕೆಲವು ಸಂದರ್ಭದಲ್ಲಿ ಕುಟುಂಬದಲ್ಲಿನ ಸ್ತ್ರೀಯ ಮಾತುಗಳು ಮುಖ್ಯವಾಗುತ್ತವೆ. ಅವರ ಅಭಿಪ್ರಾಯಗಳಿಗೂ ಮನ್ನಣೆ ಸಿಗುತ್ತದೆ."[೩]

## ೧.೨. ಅಧ್ಯಯನದ ಉದ್ದೇಶ

ಭಾರತದ ಗ್ರಾಮಗಳ ಬಗ್ಗೆ ಶಾಸ್ತ್ರೋಕ್ತವಾದ ಅಧ್ಯಯನ ಅಗತ್ಯವಿರುವಂತೆ ಬೆಳೆಯುತ್ತಿರುವ ಜನಪದರ ಸಂಸ್ಕೃತಿಯೂ ಬಹಳ ವಿಶಿಷ್ಟ ಪ್ರಧಾನವಾದದ್ದು. ಸಾಮಾಜಿಕ, ಭೌಗೋಳಿಕ, ಧಾರ್ಮಿಕ ಹಿನ್ನೆಲೆಯಲ್ಲಿ ಕಡಲಬಾಳು ಗ್ರಾಮವು ನಗರೀಕರಣದಿಂದ ಬದಲಾವಣೆ ಆಗಿರುವುದನ್ನು ಕಾಣಬಹುದಾಗಿದೆ. ಒಂದು ದೇಶದ ಸಂಸ್ಕೃತಿಯನ್ನು ಅರಿಯಬೇಕಾದರೆ ಅಲ್ಲಿಯ ಪರಂಪರೆಯು ಅತಿಮುಖ್ಯವಾಗಿರುತ್ತದೆ. ಅಂದರೆ ಮೌಖಿಕ ರೂಪದಲ್ಲಿ ಇದು ಕೂಡ ಸಮಸ್ಯೆಯಿಂದ ಕೂಡಿದ್ದರೂ, ಕೆಲವೊಂದು ಅಂಶಗಳು ಲಿಖಿತ ರೂಪದಲ್ಲಿ ದೊರೆಯುತ್ತ ಬಂದಿವೆ.

ಪ್ರಸ್ತುತ ಅಧ್ಯಯನವು ಕಡಲಬಾಳು ಗ್ರಾಮದ ಸಾಂಸ್ಕೃತಿಕ ಸಂಕಥನವಾಗಿದ್ದರೂ, ಇದು ತನ್ನದೆಯಾದ ಪರಂಪರೆಯನ್ನು ಹೊಂದಿದೆ. ಅಂದರೆ ಯಾವುದೇ ಒಂದು ಊರಿನ ಗ್ರಾಮೀಣ ಬದುಕು ಇಂದು ತನ್ನದೆಯಾದ ಮೂಲ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿಲ್ಲ. ಆದರೆ

ನಾಗರಿಕತೆಯ ಬದಲಾವಣೆಯಿಂದ ಹೆಚ್ಚು ಪ್ರಭಾವ ಬೀರುತ್ತ ಬಂದಿದೆ. ಇಂತಹ ಸಂದರ್ಭದಲ್ಲಿ ಹಬ್ಬ-ಹರಿದಿನಗಳು, ನಂಬಿಕೆ, ಆಚರಣೆಗಳು ಮುಂತಾದವು ಸಾಂಪ್ರದಾಯಿಕ ರೂಪದಲ್ಲಿ ನಾಗರಿಕತೆಯನ್ನು ಬೆಳೆಸುವುದನ್ನು ಕಾಣಬಹುದಾಗಿದೆ.

ಭಾರತವು ಹಳ್ಳಿಗಳ ನಾಡು ಆಗಿದ್ದರಿಂದ ಪ್ರಾಚೀನತೆಯನ್ನು ನಿಖರವಾಗಿ ಗುರುತಿಸುವುದು, ಖಚಿತವಾಗಿ ಹೇಳುವುದು ಕಷ್ಟ. ಆದರೆ ನಮಗೆ ದೊರೆತ ಕೆಲವೊಂದು ಮಾಹಿತಿಗಳ ಮೂಲಕ ಇಲ್ಲಿಯ ಅಧ್ಯಯನಗಳನ್ನು ಮಾಡಬಹುದಾಗಿದೆ. ಅಂದರೆ ಇಲ್ಲಿಯ ರಾಜಕೀಯ ಸ್ಥಿತಿಗತಿ ಧಾರ್ಮಿಕ ಸ್ಥಿತಿ, ಶೈಕ್ಷಣಿಕ ಸ್ಥಿತಿ ಹಾಗೂ ಕೃಷಿಕ್ಷೇತ್ರ ಮುಂತಾದ ಅಂಶಗಳನ್ನು ಗುರುತಿಸುವ ಪ್ರಯತ್ನ ಮಾಡಬಹುದಾಗಿದೆ. ಜೊತೆಗೆ ಹಿಂದಿನಿಂದ ಪ್ರಸ್ತುತದವರೆಗಿನ ನಡೆಯುವ ಸಂಗತಿಗಳನ್ನು ಗುರುತಿಸುವುದು ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

ಅಂದರೆ ಆಧುನಿಕತೆಯ ಪ್ರಭಾವವಿದ್ದರೂ ಅನೇಕ ವಿಶಿಷ್ಟವಾದ ಸಾಂಸ್ಕೃತಿಕ, ಧಾರ್ಮಿಕ, ವಿಚಾರಗಳನ್ನು ಕಾಪಾಡಿಕೊಂಡು ಬಂದಿವೆ. ಅಂದರೆ ಆಧುನಿಕತೆಯ ಪ್ರಭಾವದಿಂದ ಹಬ್ಬ-ಹರಿದಿನ, ಜಾತ್ರೆ, ಉತ್ಸವಗಳಲ್ಲಿ ತನ್ನದೆಯಾದ ವಿಶಿಷ್ಟತೆಯನ್ನು ಕಾಪಾಡಿಕೊಂಡು ಬಂದಿದೆ.

ಅಧ್ಯಯನದ ಮುಖ್ಯ ಉದ್ದೇಶ ಜಾಗತೀಕರಣ ಮತ್ತು ಆಧುನೀಕರಣದ ಪ್ರಭಾವದಿಂದಾಗಿ ಇತ್ತೀಚಿನ ದಿನಗಳಲ್ಲಿ ಗ್ರಾಮಗಳಲ್ಲಿ ಬದಲಾವಣೆ ಕಾಣುತ್ತೇವೆ. ಅದಕ್ಕೆ ಅನೇಕ ರೀತಿಯಾದ ಕಾರಣಗಳನ್ನು ಹುಡುಕಬಹುದು. ಪ್ರಸ್ತುತ ಹಳ್ಳಿಗಳ ಜೀವನ ಸ್ವಲ್ಪ ಮಟ್ಟಿಗೆ ಸುಧಾರಣೆ ಹೊಂದಿ ಜನರಲ್ಲಿ ಹೊಸಚೇತನ ಹುಟ್ಟಿ ಜನರ ನಿತ್ಯ ಬದುಕನ್ನು ಬದಲಾಯಿಸುತ್ತಿವೆಯಾದರೂ ಪ್ರಾಚೀನ ಕಾಲದಿಂದ ಜನಪದ ಸಾಹಿತ್ಯ, ಆಚರಣೆ-ಚಾರಿತ್ರಿಕ ಮಹತ್ವ ಪೂರ್ಣ ಅಂಶಗಳು ಮುಳುಗಿವೆ. ಪ್ರಸ್ತುತ ಅಧ್ಯಯನವು ಜಾಗತೀಕರಣದ ದಾಳಿಯಿಂದಾಗಿ ಕಡಲಬಾಳು ಪ್ರದೇಶವು ಪರಿವರ್ತನೆ ಹೊಂದಿ ನಗರ ಬೆಳವಣಿಗೆಯ ಕ್ರಮವನ್ನು ಅನುಸರಿಸುವುದರಿಂದ ಮುಂದಿನ ದಿನಮಾನಗಳಲ್ಲಿ ಪ್ರಸ್ತುತ ಪ್ರದೇಶಗಳ ಪಾರಂಪರಿಕ ಸಂಸ್ಕೃತಿಯನ್ನು ಕಟ್ಟಿಕೊಡುವುದು ಅತ್ಯಂತ ಜರೂರಾದ ಕೆಲಸವಾಗಿದೆ.

ಜನಪದ ಪ್ರಾಗೈತಿಹಾಸಿಕ ಜೀವನದ ಪರಂಪರಾಗತ ಸಂಗತಿಗಳಾದ ಜನಪದ ಕತೆ ಜನಪದಗೀತೆ, ಲಾವಣಿ, ಗಾದೆ, ನಂಬಿಕೆ ಆಚರಣೆ ಮುಂತಾದ ವಿವಿಧ ಪ್ರಕಾರಗಳ ಮೂಲಕ ಒಂದು ಗ್ರಾಮೀಣ ಸಮುದಾಯದ ಸಾಂಸ್ಕೃತಿಕ ಇತಿಹಾಸವನ್ನು, ನಿಕಟವಾದ ಸಂಬಂಧವನ್ನು ಗುರುತಿಸಬಹುದು. ಇವುಗಳಲ್ಲಿ ಅಡಕವಾಗಿರುವ ಜನರ ಬದುಕಿನ ಸಾಂಸ್ಕೃತಿಕತೆಯನ್ನು ಮೌಖಿಕ ಸಾಹಿತ್ಯವೂ ಆ ಕಾಲದ ಜನಜೀವನದ ಬದುಕಿನ ಕನ್ನಡಿಯಾಗಿರುತ್ತದೆ. ಸಾಮಾಜಿಕ,

ಧಾರ್ಮಿಕ ಜೀವನದ ಸಂದರ್ಭಗಳನ್ನು ಅಧ್ಯಯನ ಮಾಡುವಾಗ ಆದಿಕಾಲದಿಂದ ಆಧುನಿಕ ಕಾಲದವರೆಗೂ ಹಂತ- ಹಂತವಾಗಿ ಬದಲಾವಣೆ ಹೊಂದಿರುವ ಅಲ್ಲಿನ ಸಂಸ್ಕೃತಿ, ಇತಿಹಾಸದ ಬಗ್ಗೆ ಬೆಳೆದು ಬಂದ ಬಗೆ ತಿಳಿದಾಗ ಮಾತ್ರ ಮುಂದೆ ಹೀಗೆ ನಡೆಯಬೇಕೆಂಬುದು ಗೊತ್ತಾಗುವುದು.

ಇತ್ತೀಚೆಗೆ ಜನಪ್ರಿಯವಾಗುತ್ತಿರುವ ಅಧ್ಯಯನದ ಕೆಲವು ಕ್ರಮಗಳಲ್ಲಿ ಗ್ರಾಮಾಧ್ಯಯನಗಳು ಒಂದು. ಇತಿಹಾಸದಲ್ಲಿ ಸಂಸ್ಕೃತಿಗಳ ವಿವರಗಳು ನಮಗೆ ವಾಸ್ತವವಾಗಿ ದೊರೆಯುವುದಿಲ್ಲ ಎಂದ ಮೇಲೆ ಜಾನಪದ ಅಧ್ಯಯನದ ಅನಿವಾರ್ಯತೆಯನ್ನೇ ಮತ್ತು ಅಧ್ಯಯನದ ತೀವ್ರತೆಯನ್ನು ತಿಳಿಸುತ್ತದೆ. ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡುವ ಸದುದ್ದೇಶದಿಂದ ಅಧ್ಯಯನಕ್ಕೆ ಕಡಲಬಾಳು ಗ್ರಾಮದ ಸಂಕಥನವನ್ನು ಆಯ್ದುಕೊಂಡಿದ್ದೇನೆ. ಈ ಕಡಲಬಾಳು ಗ್ರಾಮ ಧಾರ್ಮಿಕ ಕೇಂದ್ರವಾಗಿರುವುದರಿಂದ ಇಲ್ಲಿನ ಗ್ರಾಮ ದೇವತೆಯ ಜಾತ್ರೆಯ ಬಗ್ಗೆ ಅಧ್ಯಯನಗಳಲ್ಲಿ ಅಲ್ಲಲ್ಲಿ ಪ್ರಸ್ತಾಪಗಳು ದೊರೆಯುತ್ತವೆ. ಆದರೆ ಸಮಗ್ರವಾದ ಅಧ್ಯಯನಗಳು ನಡೆಯದೇ ಇರುವುದು ಕಂಡುಬರುತ್ತದೆ. ಆ ಉದ್ದೇಶದಿಂದ ಕಡಲುಬಾಳು ಗ್ರಾಮಾಧ್ಯಯನವನ್ನು ಸಮಗ್ರವಾಗಿ ಕಟ್ಟಿಕೊಡುವುದಾಗಿದೆ.

ಜಾನಪದದ ಸೈದ್ಧಾಂತಿಕ ನಿಲುವುಗಳ ಮುಖೇನ ವಿಷಯವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಗ್ರಾಮದ ಮೂಲಕ ಕಾಲಕಾಲದಲ್ಲಿ ಮಾನವ ಬೆಳೆದುಬಂದ ಬಗೆ ಗೊತ್ತಾಗುತ್ತದೆ. ಗ್ರಾಮದ ಜೊತೆಗೆ ಮಾನವನ ಚರಿತ್ರೆ ಬೆಳೆದು ಬಂದದ್ದನ್ನು ತಿಳಿಯಬಹುದು. ಕಡಲಬಾಳು ಗ್ರಾಮದ ಚರಿತ್ರೆಯ ಜೊತೆಗೆ ಅಲ್ಲಿನ ಭೌಗೋಳಿಕ ಪರಿಸರ ದಟ್ಟವಾದ ಕಾಡು ಮತ್ತು ಅಲ್ಲಿನ ವೈಶಿಷ್ಟ್ಯತೆಯನ್ನು ತಿಳಿಸಲು ಪ್ರಮುಖವಾದಂತಹ ಪಾತ್ರವನ್ನು ಕಾಣಬಹುದಾಗಿದೆ. ಈ ಗ್ರಾಮದ ಮನುಷ್ಯನ ಉಡುಗೆ-ತೊಡುಗೆ, ಆಹಾರ-ವಿಹಾರ ಮತ್ತು ದೈವಗಳು, ಜಾತ್ರೆಗಳು, ಧಾರ್ಮಿಕ ಆಚರಣೆಗಳು ಇಂದಿಗೂ ಜೀವಂತವಾಗಿ ಉಳಿದುಕೊಂಡು ಬಂದಿರುವುದನ್ನು ಕಾಣುತ್ತೇವೆ.

### ೧.೩. ಆಕರ ಸಾಮಗ್ರಿ

ಅಧ್ಯಯನದಲ್ಲಿ ಆಕರ ಸಾಮಾಗ್ರಿಯು ಪ್ರಮುಖವಾದ ಪಾತ್ರವನ್ನು ನಿರ್ವಹಿಸುತ್ತದೆ. ಒಂದು ಪ್ರದೇಶದ ಸಾಂಸ್ಕೃತಿಕ ಚರಿತ್ರೆಯನ್ನು ತಿಳಿಯಲು ಅನೇಕ ಬಗೆಯ ಆಕರ ಸಾಮಾಗ್ರಿಗಳ ಮೊರೆ ಹೋಗುವುದು ಅನಿವಾರ್ಯ. ಒಂದು ನಾಡಿನ ಇತಿಹಾಸದ ರಚನೆಗೆ ಸಂಬಂಧಿಸಿದ ಮಾಹಿತಿಯನ್ನು ಮುಖ್ಯವಾಗಿ ಸಾಹಿತ್ಯಿಕ ಆಕರಗಳಾದ ಒಂದು ಮೌಖಿಕ ಸಾಹಿತ್ಯ, ಇನ್ನೊಂದು ಲಿಖಿತ ಸಾಹಿತ್ಯಗಳಾಗಿವೆ. ಪ್ರಾಚ್ಯವಸ್ತುಗಳಲ್ಲಿ ಶಾಸನ ಮತ್ತು ಸ್ಮಾರಕಗಳು ಸೇರ್ಪಡೆಯಾಗುತ್ತವೆ.

ಈ ಪೂರಕ ಮಾಹಿತಿಗಳನ್ನು ಬಳಸಿಕೊಂಡು ಕ್ಷೇತ್ರಕಾರ್ಯ ಮಾಹಿತಿಗಳೊಂದಿಗೆ ಸಮೀಕರಿಸಿ ಅಧ್ಯಯನ ಮಾಡಲಾಗಿದೆ.

### ೧.೪. ಅಧ್ಯಯನ ಕ್ರಮ

ಒಂದು ಪ್ರದೇಶದ ಸಾಂಸ್ಕೃತಿಕ ಅಧ್ಯಯನವನ್ನು ಮಾಡುವಾಗ ಅಲ್ಲಿ ಲಭ್ಯವಿರುವ ಸಾಹಿತ್ಯಿಕ ಮತ್ತು ಮೌಖಿಕ ಆಕರಗಳು ಮುಖ್ಯವಾಗುತ್ತವೆ. ಸಾಂಸ್ಕೃತಿಕ ಅಧ್ಯಯನದಲ್ಲಿ ಬಹುಮುಖ್ಯವಾದುದ್ದು ಕ್ಷೇತ್ರಕಾರ್ಯ. ಆ ಮೂಲಕ ಕಂಡು ಬಂದ ದೇವಾಲಯಗಳ ಅಧ್ಯಯನ ದೊಂದಿಗೆ ಅವುಗಳ ಭಾವಚಿತ್ರ ಸಂಗ್ರಹಿಸಲಾಯಿತು. ಸಂಗ್ರಹಿಸಿದ ವಿಷಯಗಳನ್ನು ಪಟ್ಟಿಕೆಗಳಲ್ಲಿ ದಾಖಲಿಸಲಾಯಿತು. ಕ್ಷೇತ್ರಕಾರ್ಯದ ಮೂಲಕ ಕಂಡು ಬಂದ ದೇವಾಲಯಗಳ ಜಾತ್ರೆ, ಉರುಸು, ಜೀವನಾ ವರ್ತನ ಆಚರಣೆ, ಹಲವು ವಿದ್ವಾಂಸರುಗಳನ್ನು ಸಂದರ್ಶಿಸಿ ದಾಖಲಿಸಿ ಕೊಂಡು ಇವೆಲ್ಲವುಗಳ ಆಧಾರದಿಂದ ಅಲ್ಲಿನ ಚಾರಿತ್ರಿಕ, ಸಾಂಸ್ಕೃತಿಕ ಚಿತ್ರಣವನ್ನು ಅರಿಯಲು ಸಾಧ್ಯವಾಯಿತು. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆಯೇ ಈ ಮಾದರಿಯಲ್ಲಿ ಮತ್ತು ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಪೂರಕವಾದ ಸಂಶೋಧನಾ ಮಹಾಪ್ರಬಂಧಗಳನ್ನು ಅಧ್ಯಯನ ಮಾಡಿ ಪೂರಕ ಮಾಹಿತಿಗಳನ್ನು ಪಡೆಯಲಾಯಿತು. ಅವುಗಳಲ್ಲಿ ಜಾನಪದೀಯ ಅಧ್ಯಯನಕ್ಕೆ ಸಂಬಂಧಪಟ್ಟ ಗ್ರಂಥಗಳು, ಕ್ಷೇತ್ರಕಾರ್ಯದ ಮೂಲಕ ಅಲ್ಲಿಯ ಧಾರ್ಮಿಕ, ರಾಜಕೀಯ ಚಿತ್ರಣಗಳನ್ನು ಅಧ್ಯಯನ ಮಾಡುವುದು ಜೊತೆಗೆ ಆಧಾರವನ್ನು ಸಂಗ್ರಹಿಸಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

### ೧.೫. ಅಧ್ಯಯನದ ವ್ಯಾಪ್ತಿ

ನಾವು ಯಾವುದೇ ಒಂದು ಅಧ್ಯಯನವನ್ನು ಕೈಗೊಳ್ಳಬೇಕಾದರೆ ಅದಕ್ಕೆ ಬಹಳ ಮುಖ್ಯವಾಗಿ ಕ್ಷೇತ್ರ ವ್ಯಾಪ್ತಿ ನಿಗದಿಪಡಿಸಿಕೊಳ್ಳಬೇಕು. ಆ ಮೂಲಕ ಅಧ್ಯಯನಕ್ಕೆ ಒಂದು ನಿರ್ದಿಷ್ಟ ಗುರಿಗಳು ಸಿಗುತ್ತವೆ. ಆಗ ಮಾತ್ರ ಪ್ರಸ್ತುತ ಅಧ್ಯಯನಕ್ಕೆ ನ್ಯಾಯ ಒದಗಿಸಲು ಸಾಧ್ಯವಾಗುತ್ತದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನ 'ಕಡಲಬಾಳು' ಗ್ರಾಮ ಸಮಗ್ರ ಅಧ್ಯಯನದ ಕ್ಷೇತ್ರವಾಗಿದೆ. ಒಟ್ಟಾರೆಯಾಗಿ "ಕಡಲಬಾಳು ಗ್ರಾಮದ ಸಾಮಾಜಿಕ ಸ್ಥಿತ್ಯಂತರಗಳು" ಎಂಬ ಶೀರ್ಷಿಕೆಯಡಿಯಲ್ಲಿ ಅಧ್ಯಯನದ ವ್ಯಾಪ್ತಿಯನ್ನು ಸೀಮಿತಗೊಳಿಸಿ ಕೊಂಡಿದೆ. ಹಾಗಾಗಿ ಪ್ರಸ್ತುತ ಪ್ರದೇಶವನ್ನು ಸಹ ವ್ಯವಸ್ಥಿತವಾಗಿ ಅಧ್ಯಯನ ಮಾಡಲು ಹಲವು ರೀತಿಯಾದ ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ.

ಪ್ರಸ್ತುತ ಮಹಾಪ್ರಬಂಧವು ಒಟ್ಟು ೮ ಅಧ್ಯಾಯಗಳನ್ನು ಒಳಗೊಂಡಿದ್ದು, ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ, ಅಧ್ಯಯನ ಕ್ರಮ, ಆಕರಗಳ ಸಾಮಗ್ರಿಗಳನ್ನು ಸ್ಪಷ್ಟಪಡಿಸಲಾಗಿದೆ.

ಎರಡನೆಯ ಅಧ್ಯಾಯವು ಕಡಲಬಾಳು ಗ್ರಾಮದ ಸ್ಥಳನಾಮ ನಿಷ್ಪತ್ತಿ, ಭೌಗೋಳಿಕ ಮತ್ತು ಐತಿಹಾಸಿಕತೆ ಸಂಗತಿಗಳನ್ನು ಒಳಗೊಂಡಿದೆ. ಈ ಕಡಲಬಾಳು ಗ್ರಾಮದ ಪ್ರಾಚೀನತೆ ಬಗ್ಗೆ ಚರ್ಚಿಸುವುದರ ಜೊತೆಗೆ ಪರಿಸರದ ವಾಯುಗುಣ, ಅರಣ್ಯ ಸಂಪತ್ತು, ಸಾರಿಗೆ ಸಂಪರ್ಕ, ಶಾಸನಗಳ ಹಿನ್ನೆಲೆಯಲ್ಲಿ ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಗ್ರಾಮದಲ್ಲಿನ ಸಮುದಾಯದ ಸಾಮಾಜಿಕ ಸ್ಥಿತಿಗತಿಯಲ್ಲಿ ಕುಟುಂಬ ಪದ್ಧತಿ, ವಸತಿ ವ್ಯವಸ್ಥೆ ಹಾಗೂ ಆರ್ಥಿಕ, ರಾಜಕೀಯ, ಧಾರ್ಮಿಕ ಸ್ಥಿತಿಯ ಹಿನ್ನೆಲೆಯನ್ನು ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಕಡಲಬಾಳು ಗ್ರಾಮದ ದೈವಗಳಾದ ಆಂಜನೇಯಸ್ವಾಮಿ, ಕಾಳಿಂಗದೇವಿ, ಬಸವೇಶ್ವರ ಮುಂತಾದ ದೇವರುಗಳ ಹಿನ್ನೆಲೆಯನ್ನು ಸಹ ವಿವರಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಕಡಲಬಾಳ ಗ್ರಾಮದ ಜನಪದ ಸಾಹಿತ್ಯದಲ್ಲಿನ ಕಥೆ, ಗಾದೆ, ಗೀತೆ, ಒಗಟುಗಳು ಎಂದು ವಿಂಗಡಿಸಿಕೊಳ್ಳುವ ಮೂಲಕ ಅಲ್ಲಿಯ ಜನಪದರ ಬದುಕಿನ ಸಾಂಸ್ಕೃತಿಕ ಜೀವನ ಚಿತ್ರಣವನ್ನು ವಿಶ್ಲೇಷಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಕಡಲಬಾಳ ಗ್ರಾಮದ ಆಚರಣೆಗಳೆಂದು ವಿಂಗಡಿಸಿಕೊಂಡಿದ್ದು, ಜೀವನಾವರ್ತನ ಆಚರಣೆಗಳು, ವಾರ್ಷಿಕಾವರ್ತನದ ಆಚರಣೆಗಳು ನಂಬಿಕೆ, ವಿಧಿ– ನಿಷೇಧ, ಸಂಪ್ರದಾಯ ಹಬ್ಬ–ಹರಕೆಗಳು ಅಲ್ಲಿನ ಜನರ ಜೀವನ ಸಂಸ್ಕೃತಿಯನ್ನು ತಿಳಿಸುವ ಹಾಗೂ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಇವುಗಳನ್ನು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಜನರ ಬದುಕು–ಬವಣೆಗಳನ್ನು ಚರ್ಚಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಕಡಲಬಾಳು ಗ್ರಾಮದ ಹಿನ್ನೆಲೆ ಪ್ರಸ್ತುತ ಸಂದರ್ಭದಲ್ಲಿ ಜಾಗತೀಕರಣ ಆಧುನೀಕರಣದೊಂದಿಗೆ ಹೇಗೆ ಹೊಂದಾಣಿಕೆ ಮಾಡಿಕೊಂಡಿದೆ ಎಂಬುದನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಎಂಟನೆಯ ಅಧ್ಯಾಯದಲ್ಲಿ ಕಡಲಬಾಳು ಗ್ರಾಮದ ಸ್ಥಿತ್ಯಂತರಗಳ ಅಧ್ಯಯನದಲ್ಲಿ ಕಂಡುಕೊಂಡಂತಹ ಫಲಿತಗಳನ್ನು ಕೊಡಲಾಗಿದೆ. ಹಾಗೆಯೇ ಉಪಸಂಹಾರ, ಅನುಬಂಧಗಳು, ವಕ್ತೃ ವಿವರಗಳು, ಛಾಯಾಚಿತ್ರಗಳು, ಸಾಂಸ್ಕೃತಿಕ ಪದಕೋಶ ಕೊಡಲಾಗಿದೆ.

ಹೀಗೆ ಈ ಮಹಾಪ್ರಬಂಧದ ರಚನೆಗೆ ಬೇಕಾಗಿರುವ ಪೂರಕ ಸಾಮಗ್ರಿಗಳನ್ನು ಇತರ ಗ್ರಾಮಧ್ಯಯನ ಮತ್ತು ಗ್ರಾಮ ದೇವತೆಗಳ ಅಧ್ಯಯನ ಕೃತಿಗಳಿಂದ, ಸ್ಥಳೀಯರಿಂದ, ವಿದ್ವಾಂಸರಿಂದ

ಕಡಲಬಾಳಿನ ಬಗೆಗೆ ಈಗಾಗಲೇ ಪ್ರಕಟವಾಗಿರುವ ಕೆಲವು ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಆ ವಿಷಯಕ್ಕೆ ಸಂಬಂಧಿಸಿದಂತೆ ಅಧ್ಯಯನಕ್ಕೆ ಪೂರಕವಾಗಿ ಪ್ರಾಸಂಗಿಕವಾಗಿ ವಿಷಯದ ಬಗ್ಗೆ ಸಮಗ್ರವಾದ ಚರ್ಚೆಯಾಗಿದೆ. ಈ ಸಂಶೋಧನೆ ಸಮಗ್ರ ಅಧ್ಯಯನದ ಪ್ರಯತ್ನವೇ ಹೊರತು ಸಂಪೂರ್ಣ ಅಧ್ಯಯನವಲ್ಲ ಎಂಬುದನ್ನು ಪ್ರಾಮಾಣಿಕವಾಗಿ ವಿನಯಪೂರ್ವಕವಾಗಿ ತಿಳಿಯಬಯಸುತ್ತೇನೆ.

## ೧.೬. ಇದುವರೆಗೂ ನಡೆದಿರುವ ಅಧ್ಯಯನದ ಸಮೀಕ್ಷೆ

ಕರ್ನಾಟಕದಲ್ಲಿ ಜಾನಪದ ಅಧ್ಯಯನಗಳು ತುಂಬಾನೇ ಗಂಭೀರವಾಗಿಯೇ ನಡೆಯುತ್ತಲಿದೆ. ಆದರೆ ಹೊರದೇಶಗಳಿಗೆ ಹೋಲಿಸಿದರೆ ಇಲ್ಲಿಯ ಕೆಲಸ ತುಂಬಾನೇ ಕಡಿಮೆ ಎಂದೇ ಹೇಳಬಹುದು. ಹಿಂದೆ ರಾಜ-ಮಹಾರಾಜರ ಮೂಲಕ ದೇಶವನ್ನು ಆಳುತ್ತಿದ್ದರು. ಆದರೆ ಇಂದು ಸಾಮಾನ್ಯ ಜನರ ಹಿನ್ನೆಲೆಯಲ್ಲಿ ನೈಜ ಭಾರತವನ್ನು ನೋಡುವ ಗ್ರಾಮಗಳು ಸಾಗುತ್ತವೆ. ಜಾನಪದ ನಾಶವಾಗುತ್ತದೆ. ಅದು ನಾಶವಾಗುವ ಮುನ್ನವೇ ಉಳಿಸಬೇಕು ಎಂದು ಜಾನಪದ ವಿದ್ವಾಂಸರ ಅಭಿರುಚಿಯನ್ನು ಆಸಕ್ತಿಯಿಂದಲೇ ಅಧ್ಯಯನಕ್ಕೆ ಒತ್ತು ನೀಡಿದೆ.

ಭಾರತೀಯ ಗ್ರಾಮಾಧ್ಯಯನಗಳ ಕುರಿತು 'ಇಕಾನಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ'ಯು ಪ್ರಕಟಿಸಿದ ಲೇಖನಗಳನ್ನು ಡಾ.ಎಂ.ಎಸ್.ಶ್ರೀನಿವಾಸ ಅವರು 'ಇಂಡಿಯನ್ ವಿಲೇಜಸ್' ಎಂಬ ಗ್ರಂಥರೂಪದಲ್ಲಿ ತಂದರು. ಅದೇ ಹೊತ್ತಿಗೆ ೧೯೫೫ರಲ್ಲಿ ಡಿ.ಎನ್.ಮಜುಮದಾರರು 'ರೂರಲ್ ಪ್ರೊಫಾಯಿಲ್ಸ್' ಎಂಬ ಗ್ರಂಥವನ್ನು ಸಂಪಾದಿಸಿದರು. ಅದರಲ್ಲಿ ಅನೇಕರು ಗ್ರಾಮಾಧ್ಯಯನ ಕುರಿತು ಲೇಖನಗಳನ್ನು ಬರೆದರು. ಡಾ.ದುಬೆ ಅವರು ಅದೇ ಸಂದರ್ಭದಲ್ಲಿ 'ಇಂಡಿಯನ್ ವಿಲೇಜ್', ಮೊರಿಸ್ ಒಪ್ಲರ್ ಅವರು ಬರೆದ 'ಎ ಸ್ಟಡಿ ಆಫ್ ಎ ವಿಲೇಜ್ ಇನ್ ನಾರ್ಥ್ ಇಂಡಿಯಾ' ಹಾಗೂ ಒಸ್ಕಾರ್ ಲೆವಿಸ್ ಅವರು ಬರೆದ 'ವಿಲೇಜ್ ಲೈಫ್ ಇನ್ ನಾರ್ಥರ್ನ್ ಇಂಡಿಯಾ' ಕೃತಿಗಳು ಮುಖ್ಯವಾದವುಗಳಾಗಿವೆ.

೧೯೫೫ರ ನಂತರ ಹಲವಾರು ಅಧ್ಯಯಯನಗಳು ನಡೆದವು. ಅವುಗಳಲ್ಲಿ ಮುಖ್ಯವಾದವುಗಳೆಂದರೆ, ಮಲಬಾರಿನ ಹಾಗೂ ಮಧ್ಯ ಭಾರತದ ಗ್ರಾಮಗಳ ಸ್ಥಿತಿಗತಿಗಳನ್ನು ವಿವರಿಸಿದ ಎಡ್ರಿಯನ್ ಮೇಯರ್, ಓರಿಸ್ಸಾದ ಗ್ರಾಮವನ್ನು ವಿವರಿಸಿದ ಬೈಲಿ, ಮಂಡ್ಯದ ಎರಡು ಹಳ್ಳಿಗಳ ಬಗೆಗೆ ಬರೆದ ಸ್ಕಾರ್ಲೆಟ್ ಎಪಿಸ್ಟೀನ್ ಇವರುಗಳ ಅಧ್ಯಯನಗಳು. ಹಾಗೆಯೇ ಭಾರತ ಸರಕಾರವು ಸಮುದಾಯ ವಿಕಾಸ ಯೋಜನೆ, ರಾಷ್ಟ್ರೀಯ ವಿಸ್ತರಣಾ ಯೋಜನೆ, ನೀರಾವರಿ ಯೋಜನೆ, ಹೊಸ ಸಾರಿಗೆ ಸಂಪರ್ಕ ವ್ಯವಸ್ಥೆ ಮುಂತಾದ ವಿಷಯಗಳನ್ನು ಸತತವಾಗಿ ಅಧ್ಯಯನ ಮಾಡುವ ಉದ್ದೇಶದಿಂದ ಕೃಷಿ ಆರ್ಥಿಕ ಸಂಶೋಧನಾ ಕೇಂದ್ರವನ್ನು

ಸ್ಥಾಪಿಸಿತು. ದಿಲ್ಲಿ, ಮದ್ರಾಸ್, ಪೂನಾ ಮತ್ತು ವಿಶ್ವಭಾರತಿ ವಿಶ್ವವಿದ್ಯಾಲಯಗಳಲ್ಲಿ ಇಂಥ ಕೇಂದ್ರಗಳಿದ್ದು, ಡಿಸೆಂಬರ್ ೧೯೬೭ರ ಹೊತ್ತಿಗೆ ಅವು ೩೬೨ ಗ್ರಾಮಗಳ ಸರ್ವೇಕ್ಷಣೆ ಮಾಡಿದವು. ಮೊದಲ ಮಹಾಯುದ್ಧದ ನಂತರ ಮಹಾತ್ಮಗಾಂಧೀಜಿ ಅವರ 'ಮರಳಿ ಹಳ್ಳಿಗೆ' ಚಳುವಳಿಯು ಸಹ ಬಹಳಷ್ಟು ಗ್ರಾಮಗಳ ಅಧ್ಯಯನಕ್ಕೆ ಕಾರಣವಾಯಿತು.

ಮ್ಯಾರಿಯಟ್‌ರು ಸಂಪಾದಿಸಿದ 'ವಿಲೇಜ್ ಇಂಡಿಯಾ' ಹಾಗೂ ಎಂ.ಎನ್.ಶ್ರೀನಿವಾಸ ಅವರು ಸಂಪಾದಿಸಿದ 'ಇಂಡಿಯಾಸ್ ವಿಲೇಜ್' ಗ್ರಂಥಗಳು ಭಾರತದ ಗ್ರಾಮಗಳ ಬಗೆಗೆ ಆಳವಾದ ಮಾಹಿತಿ ಹಾಗೂ ಒಳನೋಟಗಳನ್ನು ನೀಡುವ ಕೃತಿಗಳಾಗಿವೆ. ಪ್ರೊ.ಎಚ್.ವಿ.ನಾಗೇಶ್ ಅವರ 'ಗ್ರಾಮ ವ್ಯಾಸಂಗ', 'ಭಾರತೀಯ ಗ್ರಾಮ' ಹಾಗೂ 'ಗ್ರಾಮಾಂತರ' ಕೃತಿಗಳು ಪ್ರಮುಖವಾದವುಗಳಾಗಿವೆ. ಗ್ರಾಮಾಂತರ ಕೃತಿಯು ಭಾರತವನ್ನು ಒಳಗೊಂಡಂತೆ ಪ್ರಪಂಚದ ಹನ್ನೆರಡು ದೇಶಗಳಿಗೆ ಸೇರಿದ ಮೂವತ್ತು ಗ್ರಾಮಗಳನ್ನು ಅಧ್ಯಯನಕ್ಕೊಳಪಡಿಸಿ ಮಾಹಿತಿ ಸಂಗ್ರಹಿಸಿಕೊಟ್ಟಿದ್ದಾರೆ.

ಜಾನಪದದಲ್ಲಿಯೂ ಗ್ರಾಮ ಆದ್ಯಯನಗಳು ಇತ್ತೀಚೆಗೆ ಗಂಭೀರವಾಗಿಯೇ ನಡೆಯುತ್ತಿವೆ. ಹಿಂದೆ ಪ್ರಭುಗಳ, ರಾಜರುಗಳ ಮೂಲಕ ದೇಶವನ್ನು ಅಳೆಯುತ್ತಿದ್ದರು. ಇತ್ತೀಚೆಗೆ ಗ್ರಾಮಗಳಲ್ಲಿರುವ ಜನಗಳ ಹಿನ್ನೆಲೆಯಲ್ಲಿ ಭಾರತವನ್ನು ನೋಡುವ ಪ್ರಯತ್ನಗಳು ಆಗುತ್ತಿವೆ. ಈ ಹಿನ್ನೆಲೆಯಲ್ಲಿ ಆಸಕ್ತಿಯಿಂದ ಗ್ರಾಮಾಧ್ಯಯನಗಳಿಗೆ ಒತ್ತು ನೀಡಲಾಗುತ್ತಿದೆ. ಸ್ವಾತಂತ್ರ್ಯಪೂರ್ವದಲ್ಲಿ ಅರ್ಚಕ ಬಿ.ರಂಗಸ್ವಾಮಿ ಅವರ 'ಹುಟ್ಟಿದ ಹಳ್ಳಿ' ಕನ್ನಡದಲ್ಲಿ ಬಂದ ಮೊದಲ ಗ್ರಾಮಾಧ್ಯಯನ ಗ್ರಂಥ. ಒಂದು ಹಳ್ಳಿಯ ಸಾಮಾಜಿಕ, ಆರ್ಥಿಕ, ಧಾರ್ಮಿಕ ಜೀವನವನ್ನು ಉತ್ಸಾಹದಿಂದ ಚಿತ್ರಿಸಿದ್ದಾರೆ. ೨೦೦೧ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿದ ಈ ಗ್ರಂಥದಲ್ಲಿ ಜಾನಪದಕ್ಕೆ ಸಂಬಂಧಿಸಿದ ಹಲವಾರು ವಿಷಯಗಳನ್ನು ಒಳಗೊಂಡ ಒಂದು ಸಂಕಲನವೇ ಹುಟ್ಟಿದ ಹಳ್ಳಿ. ಬಂಡಿ ಹೊಳೆ ಸಣ್ಣಹಳ್ಳಿ. ನೂರೈವತ್ತೆರಡು ಮನೆಗಳು ಇದ್ದು ಜನಸಂಖ್ಯೆ ಸ್ವಲ್ಪ ಇರುವ ಇಲ್ಲಿ ಜನರು ಬಳಸುವಂತಹ ಗಾದೆಗಳು, ಕಥೆಗಳು, ಲಾವಣಿಗಳು, ಬಯಲಾಟ ಜನರ ನಡೆ-ನುಡಿ, ಹಬ್ಬ ಹರಿದಿನಗಳು ಮುಂತಾದವುಗಳ ಬಗ್ಗೆ ಈ ಒಂದು ಕೃತಿಯಲ್ಲಿ ನೋಡಬಹುದು. ಈ ಕೃತಿಯಲ್ಲಿ ಕೋಲಾಟದ ಪದ್ಯಗಳು, ದೇವರ ಪದಗಳು, ಬೀಸುವ ಪದಗಳು, ಈ ಕೃತಿಯಲ್ಲಿ ಬರುವ ದೊಡ್ಡಮ್ಮನ ಕಥೆಯಲ್ಲಿ ಕೆಳಜಾತಿ ಹುಡುಗನೊಬ್ಬ ಮೇಲುಜಾತಿಯ ಹುಡುಗಿಯನ್ನು ವಿವಾಹವಾಗುವುದು ನಂತರ ಆ ಹುಡುಗಿ ನಾನು ನಾಯಿ ಮುಟ್ಟಿದ ಮಡಿಕೆ ಎಂದು, ನನ್ನನ್ನು ಬೇರೆ ಜಾತಿಯವನು ವಿವಾಹವಾಗಿ ತನ್ನ ಕುಲವನ್ನೆ ಕೆಡಿಸಿದನೆಂದು ಅವಳು ಬೆಂಕಿಗೆ ಆಹುತಿಯಾಗಿ ಗಂಡನಿಗೆ ಶಾಪ ಕೊಡುವುದು, ಇವೆಲ್ಲ ಜಾತಿಪದ್ಧತಿಯನ್ನು ನಮ್ಮ ದೇಶದಲ್ಲಿ ಎಷ್ಟು ಕಟ್ಟುನಿಟ್ಟಾಗಿ ಅನುಸರಿಸುತ್ತಾರೆ. ಅಂತರ್ ಜಾತಿಯ ವಿವಾಹವನ್ನು ಹೇಗೆ ವಿರೋಧಿಸುತ್ತಾರೆ.

ಅಂತರ್ ಜಾತಿ ವಿವಾಹ ದೊಡ್ಡ ಅಪರಾಧ ಎನ್ನುವಂತೆ ನೋಡುತ್ತಾರೆ ಎಂದು ತಿಳಿಯಬಹುದು. ನಂತರ ಉತ್ತರ ದೇವಿ ಹಾಡಿನ ಮೂಲಕ ಹೆಣ್ಣು ತನ್ನ ಜೀವಿತಾವಧಿಯಲ್ಲಿ ಎಷ್ಟು ಸಂಕಷ್ಟಗಳನನ್ನು ಅನುಭವಿಸುತ್ತಾಳೆಂದು ಮತ್ತು ಗಂಡನನ್ನು ತೊರೆದು ಸಮಾಜದಲ್ಲಿ ಒಂಟಿಯಾಗಿ ಬದುಕಲು ಸಾಧ್ಯವಿಲ್ಲ. ಒಂದು ವೇಳೆ ಅವಳು ಒಂಟಿಯಾಗಿ ಇದ್ದರೆ ಅವಳನ್ನು ಸಮಾಜ ನೋಡುವ ದೃಷ್ಟಿಯೇ ಬೇರೆ ಎಂಬುದನ್ನು ತಿಳಿಯಬಹುದು. ಈ ಹಳ್ಳಿಯಲ್ಲಿ ನಡೆಯುವ ನ್ಯಾಯ ತೀರ್ಮಾನ ವೈಖರಿಯ ಬಗ್ಗೆ, ಮಳೆಗಳ ಪ್ರಕೃತಿ ಬದಲಾವಣೆ ಬಗ್ಗೆ ಒಟ್ಟಿನಲ್ಲಿ ಹಳ್ಳಿ ಬದುಕಿನ ಎಲ್ಲ ವಿಷಯಗಳನ್ನು ಕುರಿತು ಈ ಕೃತಿಯಲ್ಲಿ ತಿಳಿಸಿದ್ದಾರೆ.

'ಪಟ್ಟೋಲೆ ಪಳಮೆ' ನಡಿಕೇರಿಯಂಡ ಚಿಣ್ಣಪ್ಪ ಈ ಒಂದು ಕೃತಿಯಲ್ಲಿ ಕೊಡವರ ಜೀವನ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ನೀಡಿದ್ದಾರೆ. ಭೌಗೋಳಿಕ ಹಾಗೂ ಐತಿಹಾಸಿಕ ವಿಷಯದ ಬಗ್ಗೆ ಮತ್ತು ಕೊಡವರು ಆಚರಿಸುವ ಹಬ್ಬಗಳ ಬಗ್ಗೆ ಕೊಡವರ ದೈವಕ್ಕೆ ಸಂಬಂಧಿಸಿದ ಕಾವೇರಿ ಸಂಕ್ರಮಣ, ಕೈಲ್ ಮೂಹೂರ್ತ, ಹಬ್ಬಗಳ ಬಗ್ಗೆ ಕೊಡವರ ದೈವಕ್ಕೆ ಸಂಬಂಧಿಸಿದ ಹಾಡುಗಳಿವೆ. ನಂತರ ಇಲ್ಲಿಯ ಜನರು ಬಳಕೆ ಮಾಡುವಂತಹ ಗಾದೆ ಒಗಟು ಇಲ್ಲಿ ಅನುಸರಿಸುವ ಕಟ್ಟುಕಟ್ಟಳೆ, ಜಾತಿಪದ್ಧತಿ ಹೀಗೆ ಹಲವಾರು ವಿಷಯಗಳನ್ನು ಒಳಗೊಂಡಿದೆ. ಕೊಡವರ ಜೀವನದ ಬಹುಪಾಲು ವಿಷಯಗಳನ್ನು ಒಳಗೊಂಡಿರುವ ಈ ಕೃತಿ ಕೊಡವ ಸಂಸ್ಕೃತಿಯ ಚಿಕ್ಕ ವಿಶ್ವಕೋಶದಂತಿದೆ. ಜಾನಪದ ಅಧ್ಯಯನದ ದೃಷ್ಟಿಯಿಂದ ಇದು ಮಹತ್ವದ ಗ್ರಂಥವಾಗಿದೆ.

ಜಾನಪದೀಯ ಅಧ್ಯಯನಗಳ ಹಿನ್ನೆಲೆಯಲ್ಲಿ ಗ್ರಾಮಾಧ್ಯಯನಗಳು ನಡೆದಿವೆ, ನಡೆಯುತ್ತಿವೆ. ಸಮಾಜಶಾಸ್ತ್ರೀಯ ಹಿನ್ನಲೆಯಲ್ಲಿ ಅಧ್ಯಯನಗಳು ನಡೆಯುತ್ತ ಸಾಗಿವೆ. ಇತ್ತೀಚಿನ ಸಂದರ್ಭದಲ್ಲಿ ಗ್ರಾಮಾಧ್ಯಯನಗಳ ಮೂಲಕ ಜನ ಸಮಗ್ರವಾದ ಬದುಕನ್ನು ಕಟ್ಟಿಕೊಡುವ ಕೆಲಸವಾಗುತ್ತಿದೆ. ಆ ಕಾರಣದಿಂದ ಗ್ರಾಮಾಧ್ಯಯನಗಳು ಜಾನಪದೀಯವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ ಗಮನಾರ್ಹವಾದ ಅಧ್ಯಯನಗಳು ವಿಶ್ವವಿದ್ಯಾಲಯಗಳಲ್ಲಿ, ಎನ್.ಜಿ.ಓ.ಗಳಲ್ಲಿ, ಸರಕಾರದ ಮಟ್ಟದಲ್ಲಿ ಗ್ರಾಮಾಧ್ಯಯನಗಳು ನಡೆಯುತ್ತವೆ.

**ಅಡಿಟಿಪ್ಪಣಿಗಳು**

೧. ಶಾಂತವ್ವ ನಾಗಪ್ಪ ಲಕ್ಷ್ಮೇಶ್ವರ, ೨೦೧೩, ಯಮನೂರು ಗ್ರಾಮ: ಸಾಂಸ್ಕೃತಿಕ ಸಂಕಥನ, (ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ), ಪು.೧೭

೨. ಎಚ್. ಬಸಪ್ಪ, ೨೦೧೨, ನಮ್ಮೂರ ನಮ್ಮ ಜನ, ಎಸ್.ಸಿ.ಪರ್ವತಪ್ಪ, ಹಗರಿಬೊಮ್ಮನಹಳ್ಳಿ ಪು.೩

೩. ಪ್ರಹ್ಲಾದ ಆಚಾರ್ಯ, ೧೯೧೫, ಕಡಲಬಾಳು ರಾಯರ ಚರಿತ್ರೆ, ಜಗದಾನಿ ಪ್ರಕಾಶನ, ಹೊಸಪೇಟೆ, ಪು.೧೨

# ಅಧ್ಯಾಯ ಎರಡು

# ಕಡಲಬಾಳು ಗ್ರಾಮ ಭೌಗೋಳಿಕ ಮತ್ತು ಐತಿಹಾಸಿಕತೆ

೨.೧. ಸ್ಥಳನಾಮ ಮತ್ತು ಪದನಿಷ್ಪತ್ತಿ

೨.೨. ಭೌಗೋಳಿಕ ಲಕ್ಷಣಗಳು

೨.೩. ಸಾರಿಗೆ ವ್ಯವಸ್ಥೆ

೨.೪. ಚಾರಿತ್ರಿಕ ಮತ್ತು ಶಾಸನಶಾಸ್ತ್ರೀಯ ಹಿನ್ನೆಲೆ

೨.೫. ಐತಿಹ್ಯಗಳು

ಅಧ್ಯಾಯ ಎರಡು

# ಕಡಲಬಾಳು ಗ್ರಾಮ ಭೌಗೋಳಿಕ ಮತ್ತು ಐತಿಹಾಸಿಕತೆ

## ೨.೧. ಸ್ಥಳನಾಮ ಮತ್ತು ಪದನಿಷ್ಪತ್ತಿ

ಗ್ರಾಮ ನಾಮ ಅಥವಾ ಸ್ಥಳನಾಮಗಳ ಪರಂಪರೆ ಭಾರತದಲ್ಲಿ ಸಮೃದ್ಧವಾಗಿದೆ. ಇತರೆಲ್ಲಾ ಪರಂಪರೆಗಿಂತಲೂ ವಿಶಿಷ್ಟವಾದ ಪರಂಪರೆ ಇಲ್ಲಿದೆ. ಅಂದರೆ ಪ್ರತಿಯೊಂದು ಗ್ರಾಮವು ಒಂದು ನಿಜ ಸ್ವರೂಪ ಅರ್ಥಗುಣ ಹೊಂದಿರುತ್ತದೆ. ಆದರೆ ಕಾಲಾನಂತರದಲ್ಲಿ ಅದು ಜನರ ಮನಸ್ಸಿನಿಂದ ಕಳೆದುಕೊಂಡು ಬಿಟ್ಟಿರುತ್ತದೆ. ಹಾಗಾಗಿ ತನ್ನ ಊರಿನ ನಿಜ ಸ್ವರೂಪ ಮೂಲಾಂಶಗಳನ್ನು ತಿಳಿಯಬೇಕೆಂದರೆ ಆಳವಾದ ಅಧ್ಯಯನದಿಂದ ಮಾತ್ರ ಸಾಧ್ಯ. ತಾನು ನೆಲೆಸಿಕೊಂಡ ಸ್ಥಳಕ್ಕೂ ಒಂದು ನಿಜವಾದ ಹೆಸರಿನ ಅನಿವಾರ್ಯತೆಯಿದೆ ಎಂಬುದು ನಮಗೆ ಪ್ರಾಚೀನ ಕಾಲದಿಂದಲೂ ತಿಳಿಯುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ತನ್ನನ್ನು ಗುರುತಿಸಿಕೊಳ್ಳಲು ಹೆಸರು ಇಟ್ಟುಕೊಳ್ಳುವುದು ಸಹಜ. ಹಾಗೆಯೇ ವಾಸಿಸುವ ಸ್ಥಳಕ್ಕೂ ಒಂದು ನಿರ್ದಿಷ್ಟವಾದ ಹೆಸರು ಅನಿವಾರ್ಯ ಎಂಬುದು ನಮಗೆ ತಿಳಿಯುತ್ತದೆ.

ನಮ್ಮ ಪರಂಪರೆಯು ಹೇಗೆ ನಡೆದುಕೊಂಡು ಬಂದಿದೆ ಎಂದು ತಿಳಿಯುವುದು ಮುಖ್ಯವಾದುದು. ಅಲ್ಲದೆ ಸಾಧುಸಂತರು, ಪುಣ್ಯ ಪುರುಷರು ಜನ್ಮ ತಾಳಿದ ನಂತರ ಧರ್ಮ ಜಾಗೃತಿ ಮೂಡಿಸಿ ನಮ್ಮ ಪೂರ್ವಿಕರಿಗಿದ್ದ ಸಂಪನ್ನತೆ, ಸೌಂದರ್ಯ ಪ್ರಜ್ಞೆ, ಧಾರ್ಮಿಕ ದೃಷ್ಟಿ ಅಂದಿನ ಜನರ ವೃತ್ತಿ ನೈಸರ್ಗಿಕ ಸಂಪತ್ತು, ಭಾಷೆ, ಚರಿತ್ರೆ, ಮಾನವಶಾಸ್ತ್ರ ಮೊದಲಾದ ಅನೇಕ ವಿಷಯಗಳನ್ನು ತಿಳಿಯಲು ನಿಖರವಾಗಿದೆ ಎಂಬುದರ ಅರಿವಾಗುತ್ತದೆ.

"ಸ್ಥಳನಾಮಗಳ ಅಧ್ಯಯನದಿಂದ ಹಳ್ಳಿಗಳ ಏಳಿಗೆ, ಮಹಾಪುರುಷರ ಜೀವನ, ಜನರ ಅಭಿರುಚಿ ಸೃಜನಶೀಲತೆಯನ್ನು ಅರಿಯಬಹುದಾಗಿದೆ. ಹೆಸರೇ ಹೇಳುವಂತೆ ವ್ಯಕ್ತಿಗೊಂದು

ಹೆಸರು ಅನಿವಾರ್ಯ ಹೇಗೋ ಹಾಗೆಯೇ ಆತ ನೆಲೆಸಿದ ಸ್ಥಳಕ್ಕೂ ಒಂದು ನಾಮ ಅಥವಾ ಹೆಸರು ಅನಿವಾರ್ಯ. ಸ್ಥಳನಾಮ ತನ್ನ ನಿಜ ಅರ್ಥವನ್ನು ಕಳೆದುಕೊಂಡಿರುವುದರಿಂದ ಸಹಜವಾಗಿಯೇ ನಿಜ ಅರ್ಥವನ್ನು ಹುಡುಕುವಂತಹ ಕುತೂಹಲ ಕೆರಳುವುದು ಸಹಜವಾಗಿದೆ. ತಾನು ನೆಲೆಸಿದಂತಹ ನೆಲೆಗೊಂದು ಹೆಸರಿಡುವ ಪದ್ಧತಿ, ಪ್ರಕ್ರಿಯೆ ಇಂದು ನಿನ್ನೆಯದಲ್ಲ, ಅದು ಮನುಷ್ಯನಷ್ಟೆ ಪ್ರಾಚೀನವಾದದ್ದು. ಸ್ಥಳ ನಾಮಗಳಿಗೆ ಸಾಮಾನ್ಯ ನಾಮಗಳಿಗೆ ಕೊಡಬೇಕಾದ ಪ್ರಧಾನ್ಯಕ್ಕಿಂತ ಹೆಚ್ಚು ಪ್ರಾಮುಖ್ಯತೆಯನ್ನು ನೀಡಿದೆ. ತನ್ನ ಗರ್ಭದಲ್ಲಿ ಅಡಗಿಸಿಟ್ಟುಕೊಂಡಿದ್ದ ಸ್ಥಳನಾಮಗಳು ಕೇವಲ ಸ್ಥಳನಾಮಗಳಾಗಿ ಉಳಿಯದೆ ಮಾನವನ ಸಂಸ್ಕೃತಿಯ ಕುರುಹುಗಳಾಗಿ ಉಳಿದು ಸ್ಥಳ ನಾಮವಾಗಿದೆ. ಹಿಂದಿನಂತೆ ಹುಟ್ಟುತ್ತವೆ, ಈಗಲೂ ಹುಟ್ಟುತ್ತಲೇ ಬೆಳೆಯುತ್ತವೆ."[೧] ಅದರ ಅರ್ಥವನ್ನು ಗ್ರಹಿಸುವುದಾಗಿದೆ. ಸ್ಥಳ ನಾಮಗಳಿಗೆ ಸಾಮಾನ್ಯ ಹೆಸರುಗಳಿಗೆ ಕೊಡಬೇಕಾದ ಪ್ರಧಾನ್ಯಕ್ಕಿಂತ ಹೆಚ್ಚಾಗಿ ಪ್ರಾಮುಖ್ಯತೆಯನ್ನು ನೀಡಿದೆ. ನಮ್ಮ ಹಿರಿಯರ ವಿದ್ಯಾ ಸಂಪನ್ನತೆ, ಸೌಂದರ್ಯ ಪ್ರಜ್ಞೆ, ಧಾರ್ಮಿಕ ದೃಷ್ಟಿ, ಅಂದಿನ ಜನರ ವೃತ್ತಿ, ನೈಸರ್ಗಿಕವಾದಂತಹ ಸಂಪತ್ತು, ಭಾಷಾ ಚರಿತ್ರೆ, ಮಾನವಶಾಸ್ತ್ರದ ಬಗ್ಗೆ ಅನೇಕ ವಿಷಯಗಳನ್ನು ತನ್ನ ಗರ್ಭದಲ್ಲಿ ಅಡಗಿಸಿಟ್ಟು ಕೊಂಡಿವೆ. ಸ್ಥಳನಾಮಗಳಾಗಿ ಉಳಿಯದೆ, ಪೂರ್ವಿಕರ ಸಂಸ್ಕೃತಿಯ ಸಂಸ್ಕಾರದ ಕುರುಹುಗಳಾಗಿ ಉಳಿದಿವೆ. ಸ್ಥಳನಾಮಗಳು ಇರುವುದಿಲ್ಲ. ಊರುಗಳ ಹೆಸರು ಆಯಾ ಊರುಗಳಿಗೆ ತನ್ನದೆಯಾದ ಹೆಸರು ಬರಲು ಕಾರಣ.

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನ ಹೊಸಪೇಟೆ ಹರಿಹರ ಹೆದ್ದಾರಿ ಮಾರ್ಗದಿಂದ ಉತ್ತರಕ್ಕೆ ೪ ಕಿ.ಮಿ ದೂರದಲ್ಲಿರುವುದೇ ಈ ಕಡಲಬಾಳು ಗ್ರಾಮವಾಗಿದೆ. ಕಡಲಬಾಳು ಗ್ರಾಮದ ಪದ ನಿಷ್ಪತ್ತಿಗೂ ಪ್ರತಿಯೊಂದು ಗ್ರಾಮನಾಮಕ್ಕೆ ಇರುವ ಹಾಗೆ ಐತಿಹಾಸಿಕವಾದ ಪರಂಪರೆ, ಸಂಸ್ಕೃತಿ ಇದೆ. ಅಂತಹ ಪ್ರಮಾಣಪೂರ್ವ ದಾಖಲೆಗಳು ಇಲ್ಲವಾದ್ದರಿಂದ ಗ್ರಾಮನಾಮ ಐತಿಹಾಸಿಕ ಜನಪ್ರಿಯತೆ ಮುಂತಾದ ಅಂಶಗಳೇ ಪ್ರಮುಖ ಆಧಾರವಾಗಿವೆ. ಈ ಊರಿಗೆ ಕಡಲಬಾಳು ಎಂಬ ಹೆಸರು ಬರಲು ಕಾರಣ ಇಲ್ಲಿ ಪ್ರಸಿದ್ಧವಾದ ಆಂಜನೇಯನ ದೇವಸ್ಥಾನವೇ ಮೂಲ ಕಾರಣವಾಗಿದೆ.

ಆಂಜನೇಯನೇ ಕಡಲಿನಲ್ಲಿ ಬಾಳಿದವನಾಗಿದ್ದರಿಂದ ಈತನಿಗೆ ಕಡಲುಬಾಳಪ್ಪ ಎನ್ನುವ ಹೆಸರು ಜನಪ್ರಿಯವಾಗಿದೆ. ಈ ಮೂರ್ತಿಯ ವಿಗ್ರಹಗಳನ್ನು ಊರಿನಲ್ಲಿ ಸ್ಥಾಪಿಸಿದ ಮೇಲೆ ಈ ಊರಿಗೆ ಕಡಲಬಾಳು ಎಂಬ ಹೆಸರು ಬಂದಿತು. ಈತನ ಭಕ್ತರು ತಮ್ಮ ಮಕ್ಕಳಿಗೆ ಕಡಲಬಾಳಪ್ಪ ನೆಂದು ಹೆಸರಿಡುವ ರೂಢಿಯು ಇಂದಿಗೂ ನಡೆದಿದೆ. ಆಶ್ರಿತರನ್ನು ಪರಿಪಾಲಿಸುವ ಆಂಜನೇಯ ಸ್ವಾಮಿಯು ಶ್ರೀ ಕಡಲಬಾಳಪ್ಪನೆಂಬ ಹೆಸರಿನಿಂದ ಬಂದು ನೆಲೆಸಿದ್ದಾನೆ.

ಕಡಲಬಾಳು ಅಂದರೆ ಕಡಲ್ ಎಂದರೆ ಡಾಲು, ಬಾಳು ಎಂದರೆ ಖಡ್ಗವು. ಇವುಗಳನ್ನು ತಯಾರಿಸುವ ಕಮ್ಮಾರರು ಎಂದು ಹೇಳುತ್ತಾರೆ. ಹೀಗೆಯೇ ಕಡಲ್‌ಬಾಳ್ ಎಂದು ಜನಜನಿತವಾಗಿದೆ. ಈ ಊರಿಗೆ ಶರದಿಪುರ, ಕಡಲಪುರ ಎಂಬ ಉಲ್ಲೇಖಗಳಿವೆ.

ಪದ ನಿಷ್ಪತ್ತಿಗೆ ಸಂಬಂಧಿಸಿದಂತೆ ಇನ್ನೊಂದು ವಿಚಾರ ಹೀಗಿದೆ. ಪ್ರಹ್ಲಾದಾಚಾರ್ಯರು ಹೇಳುವಂತೆ: "ಈ ಗ್ರಾಮಕ್ಕೆ ಲಕ್ಷ್ಮೀಪುರವೆಂಬ ಹೆಸರಿತ್ತು. ಅದೇ ಹೆಸರಿನ ಶುದ್ಧ ಕರ್ನಾಟಕ ರಾಜರು ಪಾಳೆಯಗಾರರು ಎಂಬ ಅರ್ಥವನ್ನು ಹೇಳುವ ಕಡಲಬಾಳೇ ಕಡಲಬಾಳು ಎಂದಿದ್ದಾರೆ." ಸ್ಥಳನಾಮ ಅಧ್ಯಯನದ ಹಿನ್ನೆಲೆಯಲ್ಲಿ ಭಾಷಿಕವಾಗಿ ಆಲೋಚಿಸಿದಾಗ ಒಂದು ಸ್ಥಳೀಯ ಮರು ಹೇಳಿಕೆಯಾಗಿದೆ. ಕಡಲಬಾಳು ಎಂಬ ಅರ್ಥವಾಗಿದ್ದರೂ, ಪಂಡಿತರ ಅರ್ಥಕ್ಕೆ ಲಕ್ಷ್ಮೀ ಪುರ ಎಂಬುದು ಕಡಲೇಬಾಳೇ ಎಂದಾಗಿದೆ. ಆದರೆ ಇಲ್ಲಿ ಹಾಗೆ ಆಗಿಲ್ಲ. ಇದಲ್ಲದೇ ಐತಿಹಾಸಿಕವಾಗಿ ಬಾಳು ಎಂಬ ಶಬ್ದ ಗ್ರಾಮ, ಊರು, ವಸತಿ. ಈ ಅರ್ಥದಲ್ಲಿ ಅನೇಕ ಊರುಗಳ ಹೆಸರುಗಳಿದ್ದ ಅಂತ್ಯದಲ್ಲಿ ಇರುವುದು ಕಂಡುಬರುತ್ತದೆ. ಉದಾಹರಣೆಗೆ ಗೋಡುಬಾಳು ಗೋರುಬಾಳು, ತರವೆಬಾಳ ಮುಂತಾದ ಬಾಳ ಎಂಬ ಗ್ರಾಮ ಎಂಬರ್ಥದಲ್ಲಿಯೇ ಈ ಮೇಲಿನ ಹೆಸರನ್ನು ಉಪಯೋಗಿಸಲಾಗಿದೆ.

ಹೀಗೆ ಲಕ್ಷ್ಮೀಪುರ ಕಡಲಬಾಳು ಆಗಿದೆ. ಕಡಲಬಾಳು ಎಂಬ ಸ್ಥಳನಾಮ ಈ ಮೇಲಿನ ಎಲ್ಲ ಪರಿಹಾರಗಳನ್ನು ಹೊಂದಿದೆ. ಇದರ ನಿಜ ನಿಷ್ಪತ್ತಿ ಹೀಗಿದೆ. ಕಡಲ್-ಜಲವಾಡಿ ಬಾಳ-ಹಾಳ್-ಹಾಳು ಎಂಬ ರೂಪದಿಂದ ನಿಷ್ಪತ್ತಿಯಾಗಿದೆ. ಇದೊಂದು ಜಲವಾಡಿ ಗ್ರಾಮ ನಾಮವಾಗಿದೆ. ಬಾಳ ಎಂಬ ವರ್ಗೀಕರಣವು ಪ್ರಾಚೀನ ನೆಲೆಯನ್ನು ಹೇಳುತ್ತಿದೆ. ಇದು ಪಾಳ್ ರೂಪದಿಂದ ಬಂದಿದೆ. ಭೌಗೋಳಿಕವಾಗಿ ಈ ಪ್ರದೇಶ ನದಿಯ ಹತ್ತಿರವಿರುವುದರಿಂದ, ಆ ಒಂದು ಕಾರಣಕ್ಕೆ ಜಲವಾಡಿ ಸ್ಥಳನಾಮವೆಂದು ಹೇಳಬಹುದಾಗಿದೆ"[೨]

## ೨.೨. ಭೌಗೋಳಿಕ ಲಕ್ಷಣಗಳು

ಕಡಲಬಾಳು ಗ್ರಾಮವು ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಪ್ರಸಿದ್ಧಿಯಾಗಿದ್ದು, ಚಾರಿತ್ರಿಕ ವಾಗಿ, ಭೌಗೋಳಿಕವಾಗಿ, ರಾಜಕೀಯವಾಗಿ ತನ್ನ ಛಾಪನ್ನು ಮೂಡಿಸಿಕೊಂಡಿದೆ. ಅನೇಕ ಧಾರ್ಮಿಕ ಕ್ಷೇತ್ರಗಳಲ್ಲಿ ಇದು ಒಂದಾಗಿದೆ.

ನದಿ: ಕಡಲಬಾಳು ತುಂಗಭದ್ರಾ ದಂಡೆಯ ಉಪನದಿಯ ಚಿಕ್ಕ ಹಗರಿ ಎಂಬ ಹಳ್ಳವಿದೆ. ಇದು ಬಲದಂಡೆಯ ಮೇಲಿದೆ. ತುಂಗಭದ್ರಾ ನದಿ ಹಳ್ಳದ ದಡದಲ್ಲಿದೆ. ಈ ಕೇಂದ್ರವು ಬಳ್ಳಾರಿ ಸೀಮೆಯ ಬಯಲು ನಾಡಿನ ಗ್ರಾಮವಾಗಿದ್ದ ಹವಾಗುಣದಲ್ಲಿ ಭಿನ್ನತೆಯನ್ನು ಕಾಣಬಹುದಾಗಿದೆ. ಬೇಸಿಗೆಯಲ್ಲಿ ಅಧಿಕವಾದ ಬಿಸಿಲು ಒಣಹವೆಯಿಂದ ಕೂಡಿರುತ್ತದೆ.

ಚಳಿಗಾಲದಲ್ಲಿ ಚಳಿಯಿಂದಲೇ ಕೂಡಿರುತ್ತದೆ. ಗ್ರಾಮದಲ್ಲಿ ಕೆಂಪು ಮತ್ತು ಕಪ್ಪು ಮಣ್ಣಿನ ಭೂಮಿಗಳಿದ್ದು, ಗ್ರಾಮದ ಉತ್ತರ ಮತ್ತು ದಕ್ಷಿಣ ದಿಕ್ಕಿಗೆ ಬಹುಪಾಲು ಕೆಂಪು ಅಂದರೆ ಮಸಾರಿ ಭೂಮಿಯಿದೆ. ಗ್ರಾಮದ ಪಶ್ಚಿಮ ದಿಕ್ಕಿಗೆ ಕಪ್ಪು ಭೂಮಿಯಿದೆ. ಕಪ್ಪು ಮಣ್ಣಿನಲ್ಲಿ ಹೆಸರು, ಈರುಳ್ಳಿ, ಮೆಣಸಿನಕಾಯಿ, ಬಿಳಿಜೋಳ, ಹತ್ತಿ, ಗೆಜ್ಜೆ ಶೇಂಗಾ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಕೆಂಪು ಅಂದರೆ ಮಸಾರಿ ಭೂಮಿಯಲ್ಲಿ ಹೈಬ್ರೀಡ್ ಜೋಳ, ದೊಡ್ಡ ಜೋಳ, ತೊಗರಿ, ಮಡಿಕೆ, ಹುರುಳಿ, ರಾಗಿ, ಸಜ್ಜೆ, ಬಿಳಿಶೇಂಗಾ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಹಿಂದಿನ ಕಾಲಘಟ್ಟದಲ್ಲಿ ಮಣ್ಣಿನಲ್ಲಿ ಎಲ್ಲಾ ಬೆಳೆಗಳನ್ನು ಬೆಳೆಯುತ್ತಿದ್ದರು. ಅಂದು ಮಾನವನ ಆಸೆ, ಆಕಾಂಕ್ಷೆಗಳು ಪರಿಮಿತವಾಗಿದ್ದವು. ಹಾಗಾಗಿ ಜೋಳ, ತೊಗರಿ, ಮಡಿಕೆ, ಶೇಂಗಾ ಮುಂತಾದ ಮಿಶ್ರ ಬೆಳೆ ಬೆಳೆಯುತ್ತಿದ್ದರು. ಆದರೆ ಇಂದು ಜನಸಂಖ್ಯೆಯ ಹೆಚ್ಚಳದಿಂದ ಆಹಾರ ಪದಾರ್ಥಗಳಲ್ಲಿ ಆದ ನಾವೀನ್ಯತೆಯಿಂದ ಹಾಗೂ ಸರಕಾರ ಪಡಿತರ ಅಕ್ಕಿ ಸರಬರಾಜು ಮಾಡುತ್ತಿರುವುದರಿಂದ ಸಂಪೂರ್ಣ ವಾಣಿಜ್ಯ ಬೆಳೆಗಳಾದ ಹೆಸರು, ಶೇಂಗಾ, ಸೂರ್ಯಕಾಂತಿ ಮುಂತಾದ ಲಾಭದಾಯಕ ಬೆಳೆ ಬೆಳೆಯುತ್ತಾರೆ. ಗ್ರಾಮದಲ್ಲಿ ಈವರೆಗೆ ಮಳೆಯಾಶ್ರಿತ ಸಾವಯವ ಕೃಷಿ ರೂಢಿಯಲ್ಲಿತ್ತು. ಆದರೆ ಇಂದು ಬೋರ್‌ವೆಲ್ ಮೂಲಕ ಅಗತ್ಯ ನೀರಾವರಿ ಹಾಗೂ ಲಾಭದಾಯಕ ಕೃಷಿಗಾಗಿ ರಾಸಾಯನಿಕ ಕೃಷಿಗೆ ಗ್ರಾಮದ ರೈತರು ಮಾರು ಹೋಗಿದ್ದಾರೆ. ಇದರಿಂದ ಗ್ರಾಮದ ಭೂಮಿ ಶಾಶ್ವತವಾಗಿ ಸತ್ವಹೀನವಾಗುವ ಸಾಧ್ಯತೆ ಹೆಚ್ಚು ಇದೆ. "ಮೂರು ನಿಮಿಷದ ಸುಖಕ್ಕಾಗಿ ನೂರು ವರ್ಷದ ಹಾನಿ" ಎಂಬಂತಾಗಿದೆ. ಸಹಜವಾಗಿ ಸಾವಯವ ಕೃಷಿಯಲ್ಲಿದ್ದ ರೈತನಿಗೆ ಸರಕಾರ ಒಂದು ಕಾಲದಲ್ಲಿ ರಾಸಾಯನಿಕ ಕೃಷಿಯ ರುಚಿ ತೋರಿಸಿತು. ನಂತರದ ಕಾಲಘಟ್ಟದಲ್ಲಿ ಅದರ ದುಷ್ಪರಿಣಾಮ ಅರಿತು ಸಾವಯವ ಕೃಷಿಯ ಬೋಧನೆ ಮಾಡುತ್ತಿರುವುದು ರೈತರೊಂದಿಗೆ ಆಡುವ ಚಲ್ಲಾಟವೆಂದು ಹೇಳಬಹುದು. ಆದರೂ ಗ್ರಾಮದಲ್ಲಿ ಹನುಮಂತಪ್ಪ, ಅಂಜಿನಪ್ಪ, ತಿರುಪತ್ಯಪ್ಪ, ನಿಂಗಪ್ಪ ಅವರಂತಹ ಕೆಲವು ರೈತರು ಇಂದಿಗೂ ಸಾವಯವ ಕೃಷಿಯಲ್ಲಿ ತೊಡಗಿದ್ದಾರೆ.

ಮಳೆಗಾಲದಲ್ಲಂತು ಮಳೆ ಬಂದರು ಬಂದಿಲ್ಲವೆಂಬಂತೆಯೇ ಗೋಚರಿಸುತ್ತದೆ. ನೀರಾವರಿ ಸೌಲಭ್ಯ ಇಲ್ಲ, ಇದ್ದರೂ ಕಡಿಮೆ ಪ್ರಮಾಣದಲ್ಲಿರುತ್ತದೆ.

**ಮಣ್ಣಿನ ಸ್ವರೂಪ:** ಬಳ್ಳಾರಿ ಸೀಮೆಯ ಬಹುಭಾಗದ ಮಣ್ಣಿನ ಸ್ವರೂಪವನ್ನು ಗಮನಿಸಿದಾಗ ಕಪ್ಪು ಮಿಶ್ರಿತ ಮೆಕ್ಕಲು ಕೆಂಪು ಮಣ್ಣು ಹೊಂದಿರುತ್ತದೆ. ಈ ರೀತಿ ಇದ್ದ ಭೂಮಿಯಲ್ಲಿ ಬಿತ್ತನೆ ಮಾಡಿದರೆ ಅಷ್ಟಕಷ್ಟೆ ಬೆಳೆ ಬರಬಹುದು ಬಾರದೇನು ಇರಬಹುದು. ನೀರಿಲ್ಲದಿದ್ದರೆ ಉತ್ತಮವಾದ ಬೆಳೆಯು ತುಂಬಾನೇ ಕಷ್ಟಕರವಾಗಿದೆ.

**ಪ್ರಾಣಿ ಪಕ್ಷಿಗಳು:** ಮನುಷ್ಯ ಸಮಾಜ ಜೀವಿಯಾಗಿದ್ದರಿಂದ ಇತರೆ ಪ್ರಾಣಿ ಪಕ್ಷಿಗಳಿಗೆ ಹೆಚ್ಚು ಆದ್ಯತೆಯನ್ನು ನೀಡಿದ್ದರೂ, ಕಡಿಮೆ ಪ್ರಮಾಣದಲ್ಲಿ ಆದ್ಯತೆ ನೀಡಿದ್ದಾನೆ. ಕಡಿಮೆ ಪ್ರಮಾಣದಲ್ಲಿ ಉತ್ತಮ ಕೃಷಿ ಚಟುವಟಿಕೆ ಎಮ್ಮೆ, ಆಕಳು, ಹಸು, ಎತ್ತು, ಕುರಿ, ಆಡುಗಳು ಹೈನುಗಾರಿಕೆಗೆ, ಬೆಕ್ಕು, ನಾಯಿಗಳನ್ನು ಮನೆ ಕಾವಲಿಗೆ ಉಪಯೋಗಿಸಿದ್ದಾರೆ. ಭಾರತೀಯ ಸಂಸ್ಕೃತಿಯ ಪರಂಪರೆಯಲ್ಲಿ ಹಸುವಿಗೆ ವಿಶೇಷ ಸ್ಥಾನವನ್ನು ನೀಡಿದ್ದಾರೆ. ಏಕೆಂದರೆ ಈ ಹಸುವಿನಲ್ಲಿ ದೇವಾನು ದೇವತೆಗಳು ಅಡಗಿಕೊಂಡಿದ್ದಾರೆ ಎಂಬ ಭಾವನೆ ಈಗಲೂ ಬೇರೂರಿರುವುದರಿಂದಲೇ. ನಾವು ಮನೆಯಲ್ಲಿ ಗೃಹಪ್ರವೇಶ, ದೇವಸ್ಥಾನದ ಪ್ರವೇಶ ಮಾಡುವ ಮುನ್ನ ಹಸುವಿಗೆ ವಿಶೇಷವಾದಂತಹ ಮಹತ್ವವನ್ನು ನೀಡುತ್ತೇವೆ. ಅಷ್ಟೇ ಅಲ್ಲದೆ ಗಿಳಿ, ಕೋತಿ, ಕಾಗೆ, ಗುಬ್ಬಿ ಇತ್ಯಾದಿ ಪ್ರಾಣಿಸಂಕುಲಗಳು ಕಂಡುಬರುತ್ತವೆ. ಇತ್ತೀಚೆಗೆ ಮನುಷ್ಯನ ದುರಾಸೆಯಿಂದ ಪ್ರಾಣಿ ಪಕ್ಷಿಗಳ ಸಂಕುಲ ಪ್ರಮಾಣ ಕಡಿಮೆಯಾಗಿದೆ ಅಂತ ಹೇಳಿದರೆ ತಪ್ಪೇನಲ್ಲ.

**ಓಣಿಗಳು:** ಭಾರತದೇಶ ಹಳ್ಳಿಗಳ ಗ್ರಾಮವಾಗಿದ್ದರು ಎಲ್ಲಾ ಊರುಗಳಲ್ಲಿ ಓಣಿಗಳು ಇರುವುದು ಸಹಜವಾಗಿದೆ. ಇಲ್ಲಿ ಒಟ್ಟು ಐದು ಓಣಿಗಳಿವೆ. ಈ ವಾರ್ಡ್/ ಓಣಿಯಲ್ಲಿ ವಾಸಿಸುವಂತಹ ಸಮುದಾಯಕ್ಕೆ ಅನುಗುಣವಾಗಿ ಓಣಿಗಳಿಗೆ ಹೆಸರುಗಳನ್ನು ಇಡಲಾಗಿದೆ. ಅವುಗಳೆಂದರೆ ಕಾಳಿಕ ಓಣಿ, ಸೊಟ್ಟಪ್ಪರ ಓಣಿ, ಮುಸ್ಲಿಂರ ಓಣಿ, ಪಾದಗಟ್ಟಿ ಓಣಿ, ಚಲುವಾದಿ ಓಣಿ, ಮಾದಿಗರ ಓಣಿ ಹೀಗೆ ಓಣಿಗಳನ್ನು ಗುರುತಿಸಲಾಗಿದೆ.

**ಮಳೆ:** ಮೊದಲೇ ಹೇಳುವುದಾದರೆ ಬಳ್ಳಾರಿ ಬಯಲು ಸೀಮೆಯ ನಾಡಾಗಿರುವುದರಿಂದ ಮಳೆ ಅತೀ ಕಡಿಮೆ ಬೀಳುತ್ತದೆ. ಒಂದು ಕಡೆ ತುಂಗಭದ್ರಾ ನದಿ ಹರಿಯುತ್ತಿದ್ದರೂ, ಇದು ಕೆಲವೇ ಕೆಲವು ಪ್ರದೇಶಗಳಲ್ಲಿ ಸೀಮಿತವಾಗಿದೆ. ಇದರಿಂದ ಬಳ್ಳಾರಿ ಜಿಲ್ಲೆಯ ಬಹುಭಾಗವು ಒಣ ಬೇಸಾಯದಿಂದ ಆವೃತ್ತಗೊಂಡಿದೆ. ಇದರಿಂದ ಆರ್ಥಿಕ ಸ್ಥಿತಿ ಅಷ್ಟೊಂದು ಹೇಳಿಕೊಳ್ಳಲಾಗದ ರೀತಿಯಲ್ಲಿದೆ.

**ಜಲಸಂಪತ್ತು:** ಕಡಲಬಾಳು ಗ್ರಾಮ ತುಂಗಾಭದ್ರ ನದಿಯ ತೀರದಲ್ಲಿದ್ದರೂ ಅದು ಕೆಲವು ಗ್ರಾಮಗಳಿಗೆ ಮಾತ್ರ ಸೀಮಿತವಾಗಿದೆ. ಉದಾಹರಣೆಗೆ; ಹಗರಿಬೊಮ್ಮನಹಳ್ಳಿ, ಅಡವಿ ಆನಂದೇವನಹಳ್ಳಿ, ಬಾಚಿಕೊಂಡನಹಳ್ಳಿ, ಅಂಕಸಮುದ್ರ, ನಾರಾಯಣ ದೇವರಕೆರೆ ಈ ಗ್ರಾಮಗಳಿಗೆ ಮಾತ್ರ ಸೀಮಿತ. ಆದರೆ ಈ ಕಡಲಬಾಳು ಗ್ರಾಮಕ್ಕೆ ಯಾವುದೇ ರೀತಿ ಪ್ರಯೋಜನಕಾರಿಯಾಗಿಲ್ಲ. ಈ ಹಿಂದೆ ದೊಡ್ಡ-ದೊಡ್ಡ ನದಿಗಳು ಹರಿದು ಬಂದವು ಎಂಬ ಮಾತು ಇದ್ದರೂ, ಅದು ಈಗ ಬರೀ ಕನಸಿನ ಮಾತಾಗಿದೆ. ಈ ಗ್ರಾಮದಲ್ಲಿ ನೀರಿನ ಮಟ್ಟವೂ ಅತೀ ಕಡಿಮೆಯಾಗಿರುವುದು

ಅಷ್ಟೆಯಲ್ಲ, ಇರುವ ಬೋರ್‌ವೆಲ್‌ಗಳ ನೀರು ಕಡಿಮೆಯಾಗುತ್ತಿದೆ. ಇದರಿಂದ ಕೃಷಿ ಚಟುವಟಿಕೆ ಅತೀ ಶೋಚನೀಯವಾಗಿದೆ ಎಂದು ಹೇಳಬಹುದು.[೩]

**ಸ್ವಾಭಾವಿಕ ಸಸ್ಯವರ್ಗ:** ಬಳ್ಳಾರಿ ಸೀಮೆ ಹೆಸರೇ ಹೇಳುವಂತೆ ಬಯಲು ಸೀಮೆ. ಇಲ್ಲಿ ಅಷ್ಟೊಂದು ಹೇಳಿ ಕೊಳ್ಳುವಂತಹ ಸ್ವಾಭಾವಿಕ ಸಸ್ಯವರ್ಗ ಕಂಡು ಬರುವುದಿಲ್ಲ. ಕಡಲಬಾಳು ಗ್ರಾಮದಲ್ಲಿ ದಟ್ಟವಾದ ಬಹು ಸಸ್ಯವರ್ಗವು ಕಂಡುಬರುವುದಿಲ್ಲ. ಬಳ್ಳಾರಿ ಸೀಮೆಯ ಬಹು ಭಾಗವು ಉಷ್ಣವಲಯಕ್ಕೆ ಸೇರಿದ್ದು, ಈ ಗ್ರಾಮವು ಅದೇ ಹವಾಗುಣ ಹೊಂದಿದೆ. ಇಲ್ಲಿ ನೀರಿನ ಆಶ್ರಯ ಇಲ್ಲದಿದ್ದರಿಂದ ಜಾಲಿಯ ಮರ, ಬೇವಿನ ಮರ, ಹುಣಿಸೆ ಮರ ಇತ್ಯಾದಿ ಹಲವು ರೀತಿಯ ಮರಗಳು ಕಂಡುಬರುತ್ತವೆ.

**ಗುಡಿ ಕೈಗಾರಿಕೆಗಳು:** ಕಡಲುಬಾಳು ಗ್ರಾಮದಲ್ಲಿ ಹೇಳಿಕೊಳ್ಳುವಂತಹ ದೊಡ್ಡ ಪ್ರಮಾಣದಲ್ಲಿ ಕೈಗಾರಿಕೆಗಳು ಇಲ್ಲವಾದ್ದರಿಂದ, ಮನೆಗೆಲಸಕ್ಕೆ ಬೇಕಾದಂತಹ ಕಟ್ಟಿಗೆ ಕೆಲಸವನ್ನು ಮಾಡುವಂತಹ ಬಡಗಿ ಕಮ್ಮಾರರ ೪-೫ ಕುಟುಂಬಗಳು ಇವೆ. ಇನ್ನೂ ಕೆಲವರು ಅಡುಗೆ ಮಾಡುವವರು ಇದ್ದಾರೆ. ರೊಟ್ಟಿ ಮಾಡುವವರು ಇದ್ದಾರೆ. ಆದರೆ ಈ ಭಾಗಕ್ಕೆ ಅಷ್ಟು ಪ್ರಾಧಾನ್ಯತೆ ಇರುವುದಿಲ್ಲ. ಏಕೆಂದರೆ ಪಕ್ಕದ ೪. ಕಿ.ಮಿ ದೂರದಲ್ಲಿ ಮಾರುಕಟ್ಟೆ ಇರುವುದರಿಂದ ಇವರ ಸ್ಥಿತಿ ಅತ್ಯಂತ ಚಿಂತಾಜನಕವಾಗಿದೆ.[೪]

**ಉಷ್ಣತೆ:** ಬಳ್ಳಾರಿ ಸೀಮೆಗೆ ಸಂಬಂಧಿಸಿದಂತೆ ಹೇಳುವುದಾದರೆ, ಅತೀ ಉಷ್ಣತೆ ಹೊಂದಿರುವ ಅಂಕಿ-ಅಂಶಗಳಿವೆ. ಇದು ಬಹುಮಟ್ಟಿಗೆ ಬಳ್ಳಾರಿ ಜಿಲ್ಲೆಯ ಪ್ರತಿಯೊಂದು ಗ್ರಾಮಕ್ಕೂ ಅನ್ವಯಿಸುತ್ತದೆ ಎಂದು ಹೇಳಬಹುದು.

**ಬೆಳೆಗಳು:** ಪುರಾತನ ಕಾಲದಿಂದಲೂ ನಮಗೆ ತಿಳಿದು ಬರುವುದೇನೆಂದರೆ, ಬೇಟೆ ಮತ್ತು ಕೃಷಿಯೇ ಜೀವನದ ಆಧಾರವಾಗಿವೆ. ಕೃಷಿ ಅತೀ ಪ್ರಾಚೀನವಾಗಿದ್ದು, ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕಡಲಬಾಳು ಗ್ರಾಮವು ಕೆಂಪು ಮಿಶ್ರಿತ, ಕಪ್ಪು ಮಿಶ್ರಿತ ಭೂ ಪ್ರದೇಶವಾಗಿದ್ದು, ಮಳೆಯನ್ನು ಆಧರಿಸಿ ಕೃಷಿಯನ್ನು ತಮ್ಮ ಜೀವನದ ಮೂಲ ಉದ್ಯೋಗವಾಗಿಸಿಕೊಂಡಿದ್ದಾರೆ. ಈ ಒಂದು ಭಾಗದಲ್ಲಿ ಕಡಲೆ, ಹುರುಳಿ, ಹೆಸರು, ತೊಗರಿ, ಅಲಸಂದಿ ಅಲ್ಲದೆ ನೀರಾವರಿ ಸೌಲಭ್ಯವಿರುವವರು ಮೆಣಸಿನಕಾಯಿ, ಹತ್ತಿ, ಮೆಕ್ಕೆಜೋಳ ಮುಂತಾದ ವಾಣಿಜ್ಯ ಬೆಳೆ ಬೆಳೆಯುತ್ತಾರೆ.

## ೨.೩. ಸಾರಿಗೆ ವ್ಯವಸ್ಥೆ

ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ವಸ್ತುಗಳನ್ನು ಕೊಂಡೊಯ್ಯಲು ಪ್ರಾಚೀನ ಕಾಲದಲ್ಲಿ ಕುದುರೆಗಾಡಿ, ಎತ್ತಿನಗಾಡಿ ಬಳಸುತ್ತಿದ್ದರು. ಇಂದಿನ ಯಾಂತ್ರಿಕ ಯುಗದಲ್ಲಿ

ವಿವಿಧ ವಾಹನಗಳನ್ನು ಬಳಸಿಕೊಂಡಿದ್ದಾನೆ. ೧೯೨೪ರಲ್ಲಿ ಮೊದಲ ಬಾರಿಗೆ ಬಸವನಗೌಡರಿಂದ ಬಸ್ಸಿನ ಸಂಚಾರ ಪ್ರಾರಂಭವಾಗಿ ಪಕ್ಕದಲ್ಲಿ ಹರಿಹರ–ಹೊಸಪೇಟೆ ಮಾರ್ಗವಾಗಿ ಅನೇಕ ಬಸ್ಸಿನ ಸೌಕರ್ಯಗಳು ಪ್ರಾರಂಭವಾದವು. ಕಡಲಬಾಳು ಗ್ರಾಮದಿಂದ ದೂರದ ಊರಿನಲ್ಲಿ ಅಂದರೆ ಹೊಸಪೇಟೆಯ ಬಹುಭಾಗ ಜನರು, ಹರಪನಹಳ್ಳಿಯ ಭಾಗದ ಜನರು, ಹಡಗಲಿಯ ಭಾಗದ ಜನರು ಇಲ್ಲಿರುವ ಆಂಜನೇಯ ದೇವಸ್ಥಾನಕ್ಕೆ ಬರುತ್ತಾರೆ. ಅದು ವಿಶೇಷವಾಗಿ ಅಮವಾಸ್ಯೆ ದಿನದಂದು ಬಂದು ತಮಗೆ ಇಷ್ಟವಾದ ದೇವರ ಆರಾಧನೆಯನ್ನು ಭಾವೈಕ್ಯತೆಯಿಂದ ಪೂಜೆ ಮಾಡುತ್ತಾರೆ. ಅಲ್ಲದೇ ಅನೇಕರು ಹರಕೆ ಹೊತ್ತುಕೊಂಡು ಹೋಗುತ್ತಾರೆ. ಬಂದ ಭಕ್ತಾದಿಗಳು ಉಳಿದುಕೊಳ್ಳಲು ಒಂದು ದೊಡ್ಡದಾದ ಸಮುದಾಯ ಭವನವನ್ನು ಶಾಸಕರ ಅನುದಾನದಡಿಯಲ್ಲಿ ನಿರ್ಮಿಸಿದ್ದು, ಇದು ಭಕ್ತಾದಿಗಳಿಗೆ ಉಳಿದುಕೊಳ್ಳಲು ತುಂಬಾನೆ ಸಹಕಾರಿಯಾಗಿದೆ.

## ೨.೪. ಚಾರಿತ್ರಿಕ ಮತ್ತು ಶಾಸನ ಶಾಸ್ತ್ರೀಯ ಹಿನ್ನೆಲೆ

ಚಾರಿತ್ರಿಕ ಶಾಸ್ತ್ರೀಯ ಹಿನ್ನೆಲೆಯಲ್ಲಿ ಕಡಲಬಾಳು ಗ್ರಾಮವನ್ನು ಒಮ್ಮೆ ಪುನರಾವಲೋಕನ ಮಾಡಿ ನೋಡಿದಾಗ ಇದು ತನ್ನದೆಯಾದ ವಿಶಿಷ್ಟ ಪಾತ್ರವನ್ನು ಒಳಗೊಂಡಿರುತ್ತದೆ. ಅಂದರೆ ಈ ಗ್ರಾಮವು ಸುಮಾರು ೨೦೦ ವರ್ಷಗಳ ಹಿಂದೆ ಈ ಭಾಗವು ಬಹುತೇಕವಾಗಿ ಹರಪನಹಳ್ಳಿಯ ಭಾಸ್ಕರ ನಾಯಕತ್ವದಲ್ಲಿ ಆಳ್ವಿಕೆಯು ಪ್ರಾರಂಭವಾಗಿ ಮತ್ತು ಇವರಲ್ಲಿ ಪ್ರಸಿದ್ಧನಾದ ಶೇಖರನಾಯ್ಕನು ತನ್ನ ಆಳ್ವಿಕೆಗೆ ಒಳಪಡಿಸಿಕೊಳ್ಳುತ್ತಾ ಎಲ್ಲ ಪ್ರದೇಶಗಳನ್ನು ತನ್ನೆಡೆಗೆ ಸೇರಿಸಿಕೊಳ್ಳುತ್ತಾನೆ. ಜೊತೆಗೆ ತನ್ನ ರಾಜಧಾನಿಗೆ ಸೇರಿಸಿಕೊಳ್ಳುತ್ತಾನೆ. ಅಲ್ಲದೆ ಚಾರಿತ್ರಿಕ ಹಿನ್ನೆಲೆಗೆ ಸಂಬಂಧಿಸಿದಂತೆ 'ವೀರಗಲ್ಲು' ಕಾಣಬಹುದಾಗಿದೆ. ವೀರಗಲ್ಲು ಎಂಬುದು ಪರಾಕ್ರಮಿ, ಶಕ್ತಿ ಪುರುಷ ಮುಂತಾದ ದೈಹಿಕ ಗುಣಗಳನ್ನು ಸೂಚಿಸುವ ಗುಣವಾಗಿ ಬಂದಿದೆ. ವೀರ ಸತ್ತರೆ ಅವರ ಸ್ಮರಣೆಗೆ ಸ್ಮಾರಕಗಳನ್ನು ನಿರ್ಮಿಸುವುದು ಸಾಮಾನ್ಯ. ಆದರೆ ಶತ್ರುಗಳೊಡನೆ ಹೋರಾಡಿ ಶತ್ರುಗಳೊಂದಿಗೆ ಕಾದಾಡಿ ವೀರಯೋಧ ಸತ್ತರೆ ಅವನ ಸ್ಮಾರಣಾರ್ಥವಾಗಿ ವೀರಗಲ್ಲು ಸ್ಥಾಪಿಸುತ್ತಾರೆ. ಜೊತೆಗೆ ಪೂಜಿಸುವ ವಿಧಾನ ಕೂಡ ಈಗಲೂ ಇದೆ. ೨೦೦ ವರ್ಷಗಳ ಹಿಂದಿನ ಕರ್ನಾಟಕದಲ್ಲಿ ರಾಜಕೀಯ ವ್ಯವಸ್ಥೆಯಲ್ಲಿ ಈ ಭಾಗವು ಹರಪನಹಳ್ಳಿಯ ಭಾಸ್ಕರ ನಾಯಕನ ಆಡಳಿತಕ್ಕೆ ಸೇರಿತ್ತು. ಈ ನಾಯಕರಲ್ಲಿಯೇ ಪ್ರಸಿದ್ಧರಾದ ಶೇಖರ ನಾಯ್ಕ ಅನೇಕ ನಗರ ಪ್ರದೇಶಗಳನ್ನು ತನ್ನ ರಾಜಧಾನಿಯಲ್ಲಿ ಸೇರಿಸಿಕೊಂಡಿದ್ದಾನೆ ಆತನಿಗೆ ಮಕ್ಕಳಿಲ್ಲದ್ದರಿಂದ ಮಡದಿ ಸೋಮಾಜಿ ಬಸಪ್ಪ ನಾಯಕನ ಒಪ್ಪಿಗೆ ತೆಗೆದುಕೊಂಡು ೧೭೭೯ನಲ್ಲಿ ಪಟ್ಟಕಟ್ಟಿದಳು. ಈ ನಾಯಕನು ಹರಪನಹಳ್ಳಿಗಿಂತಲೂ ನಾರಾಯಣ ದೇವರ ಕೆರೆಯಲ್ಲೆ ಹೆಚ್ಚು ವಾಸವಾಗಿದ್ದು, ಈ ನಾಯಕನು

ತನ್ನ ಕೈಯಲ್ಲಿರುವ ಪ್ರದೇಶ ಆಡಳಿತವು ಸುಭದ್ರವಾಗಿರುವುದಕ್ಕಾಗಿ ಅಲ್ಲಲ್ಲಿ ಆಯಾಕಟ್ಟಿನ ಪ್ರದೇಶದಲ್ಲಿ ತನ್ನ ಕೈ ಕೆಳಗೆ ವಿಶ್ವಾಸಕ್ಕೆ ಪಾತ್ರರಾದವರಂತಹ ಉಪನಾಯಕರನ್ನು ನೇಮಕ ಮಾಡಿದ್ದನು. ಅದೇ ರೀತಿ ನಾರಾಯಣ ದೇವರ ಕೆರೆಯ ಕಡಲಬಾಳು ಗ್ರಾಮದಲ್ಲಿ ಹಲವು ಬ್ರಾಹ್ಮಣರನ್ನು ನೇಮಿಸಿದರು.

ಈ ಮುಖಂಡನೇ ಮುಂದೆ ೨೦ ಹಳ್ಳಿಗೆ ಜಹಂಗೀರನಾದ. ವಿಜಯ ನಗರ ಸಾಮ್ರಾಜ್ಯದ ರಾಜ-ಗುರುಗಳಾದ ವ್ಯಾಸರಾಸ ೧೬ನೇ ಶತಮಾನದಲ್ಲಿ ಉತ್ತರದಲ್ಲಿ ಧರ್ಮವಿರುವಂತೆ ದೇಶದ ನಾನಾ ಭಾಗದಲ್ಲಿ ಸುಮಾರು ೭೩೨ ಪ್ರಾಣದೇವರನ್ನು ಪ್ರತಿಷ್ಠಾಪನೆ ಮಾಡಿದರು. ದೇವಸ್ಥಾನ ಅದೊಂದು ಸಂಸ್ಥೆ. ಜನರ ಏಕರೂಪತೆ, ಭಾವೈಕ್ಯತೆಗೆ ಅದೊಂದು ಸಾಧನವಾಗಿದೆ. ಎಂತಲೂ ಹೇಳಬಹುದಾಗಿದೆ.

ಚರಿತ್ರೆಯಲ್ಲಿ ಸಹಜವಾದ ಸಾವು ಮನುಷ್ಯನನ್ನು ಕಾಡಿರುವುದಕ್ಕಿಂತಲೂ ಬಾಳಿನ ಯಾತ್ರೆಯನ್ನು ಪೂರ್ಣಗೊಳಿಸದೆ ಬೇರೆ ಬೇರೆ ಕಾರಣಗಳಿಗೆ ತಮ್ಮ ಪ್ರಾಣವನ್ನು ಅರ್ಪಿಸಿದವರ ಬಗ್ಗೆ ಹೆಚ್ಚು ಪ್ರೀತಿ ಗೌರವ, ಆದರ, ಅಭಿಮಾನ ಮತ್ತು ಭಯಗಳು ಸೃಷ್ಟಿಯಾಗಿವೆ. ಸಾವಿನ ಬಗ್ಗೆ ಮತ್ತು ಸಾವಿನ ನಂತರದ ಜೀವನದ ಬಗ್ಗೆ ಅನೇಕ ರೀತಿಯ ಕಲ್ಪನೆಗಳು ಬೆಳೆದುಬಂದಿವೆ. ಇವೆಲ್ಲ ಬಹುಶಃ ಮನುಷ್ಯ ಭೀತಿಯಿಂದ ಪಾರಾಗಲಿಕ್ಕೆ ಅಥವಾ ತಮ್ಮವರ ಬಗ್ಗೆ ತಮಗಿರುವ ಪ್ರೀತಿ ಆದರಗಳನ್ನು ವ್ಯಕ್ತಪಡಿಸಲು ಮಾಡಿಕೊಂಡ ಉಪಾಯ ಅಥವಾ ಪರಿಹಾರ ಮಾರ್ಗ ಅಥವಾ ಪ್ರತಿಷ್ಠೆಯು ಇರಬಹುದೆನಿಸುತ್ತದೆ.

'ವೀರ'ಎಂಬ ಪದ ವ್ಯಕ್ತಿಯ ಪರಾಕ್ರಮ, ಶಕ್ತಿ, ಪೌರುಷ ಮುಂತಾದ ದೈಹಿಕ ಗುಣಗಳನ್ನು ಸೂಚಿಸುವ ಗುಣವಾಚಕವಾಗಿ ಬಳಕೆಯಲ್ಲಿದೆ. 'ವೀರ' ಎಂಬುದಕ್ಕೆ 'ಬೀರ' ಎಂಬ ತದ್ಭವ ರೂಪವೂ ಬಳಕೆಯಲ್ಲಿದೆ. ವ್ಯಕ್ತಿಗಳು ಸತ್ತರೆ ಅವರ ಸ್ಮರಣೆಗೆ ಸ್ಮಾರಕಗಳನ್ನು ನಿರ್ಮಿಸುವುದು ಸಾಮಾನ್ಯ. ಆದರೆ ಯುದ್ಧಗಳಲ್ಲಿ ಹೋರಾಡಿ ಮಡಿದ ವೀರನಿಗೆ, ರಾಜನಿಗೆ ಕೀರ್ತಿಯನ್ನು ತಂದುಕೊಟ್ಟು ವೀರಮರಣವನ್ನಪ್ಪಿದವರಿಗೆ, ಶತ್ರುಗಳೊಡನೆ ಕಾದಾಡಿ ಸತ್ತ ವೀರ ಯೋಧರ ಸ್ಮರಣಾರ್ಥವಾಗಿ ವೀರಗಲ್ಲುಗಳನ್ನು ನೆಡುವ ಸಂಪ್ರದಾಯ ಚರಿತ್ರೆಯಲ್ಲಿ ಕಂಡುಬರುತ್ತದೆ. ಹೀಗೆ ಮಾಡುವುದರಿಂದ ಸತ್ತ ಆ ವ್ಯಕ್ತಿಗೆ ಗೌರವ ಸೂಚಿಸುವುದಷ್ಟೇ ಅಲ್ಲ. ಅವನು ಮೆರೆದ ವೀರತ್ವಕ್ಕಾಗಿ ಅಭಿಮಾನ ತಳೆಯುವುದು ಆ ವ್ಯಕ್ತಿಯ ಬಗ್ಗೆ ಭಕ್ತಿಭಾವಗಳನ್ನು ಬೆಳೆಸಿಕೊಂಡು ಪೂಜಿಸುವುದು ಕೂಡ ಕಂಡುಬರುತ್ತದೆ.

ಸಾಮಾನ್ಯವಾಗಿ ಶಾಸನ, ವೀರಗಲ್ಲುಗಳು ಜನರ ಗಮನ ಸೆಳೆಯುವುದಕ್ಕೆ ಮತ್ತು ಅವುಗಳ ಬಗ್ಗೆ ಜನರಲ್ಲಿ ಭಾವನಾತ್ಮಕವಾದ ಸಂಬಂಧವನ್ನು ನೇಯುವ ದೃಷ್ಟಿಯಿಂದ

ಜನಸಂಚಾರವಿರುವ ಸ್ಥಳಗಳಲ್ಲಿ ಘಟನೆಗಳಿಗೆ ಸಂಬಂಧವಿರುವ ಸ್ಥಳಗಳಲ್ಲೇ ಸ್ಥಾಪಿಸುತ್ತಾರೆ. ಒಂದು ಸಾರಿ ಜನರ ಗಮನಕ್ಕೆ ಬಂದರೆ ನಂತರದಲ್ಲಿ ಅವು ಜನರ ಆಸ್ತಿಯಾಗಿ ಮಾರ್ಪಾಡುತ್ತವೆ. ಜನರ ಬದುಕಿನೊಂದಿಗೆ ಉಳಿದುಬಿಡುತ್ತವೆ. ಕಾಲಾಂತರದಲ್ಲಿ ಬೇರೆ ಬೇರೆ ನಂಬಿಕೆಗಳಿಗೆ, ಕಲ್ಪನೆಗಳಿಗೆ ಎಡೆಮಾಡಿಕೊಡುತ್ತವೆ. ಅನೇಕಬಾರಿ ಅವುಗಳ ಅಸ್ತಿತ್ವವನ್ನು ಉಳಿಸಿಕೊಳ್ಳಲು ಕಷ್ಟಪಡಬೇಕಾಗುತ್ತದೆ. ಈ ಕಾರಣದಿಂದಾಗಿ ಇವುಗಳನ್ನು ರಸ್ತೆಯ ಬದಿಯಲ್ಲಿ ಮರಗಳ ಕೆಳಗೆ, ಹಾಳು ಮಂಟಪಗಳ ಬಳಿ, ಗುಡಿಯ ಅಕ್ಕ-ಪಕ್ಕ ನಿರ್ಮಿತವಾದ ಸಾರ್ವಜನಿಕ ಸ್ಥಳಗಳಲ್ಲಿ ಕಂಡುಬರುತ್ತವೆ.

"ಸಾಮಾನ್ಯವಾಗಿ ಶಿಲ್ಪಿಗಳಿರುವ ವೀರಗಲ್ಲುಗಳಲ್ಲಿ ಯುದ್ಧದಲ್ಲಿ ಮಡಿದ ಹೋರಾಟ ಶಿಲ್ಪವಿದ್ದು, ಆನಂತರ ಹೋರಾಟದಲ್ಲಿ ಸತ್ತ ವೀರರನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುವುದು. ಮೂರನೆಯ ಹಂತದಲ್ಲಿ ವೀರನು ಸ್ವರ್ಗವಾಸಿಯಾಗಿರುವ ಶಿಲ್ಪಗಳನ್ನು ಹಂತ ಹಂತವಾಗಿ ಖಂಡಿರಿಸಲಾಗಿದೆ. ಈ ರೀತಿಯ ಶಿಲ್ಪದ ವಿವರಗಳು ವೀರಗಲ್ಲಿನ ತಳಭಾಗದಲ್ಲಿ ಆರಂಭವಾಗಿ ಮೇಲಕ್ಕೆ ಹೋಗುತ್ತವೆ. ಭೂಲೋಕದಲ್ಲಿ ಯುದ್ಧ ನಡೆಯುವುದು, ಭೂಲೋಕದ ಮೇಲೆ ಸ್ವರ್ಗ ಇರುವುದು. ಅದರಿಂದ ಭೂಲೋಕದ ಮೇಲಿರುವ ಸ್ವರ್ಗಕ್ಕೆ ವೀರನು ಹೋಗುತ್ತಾನೆ ಎಂಬ ನಂಬಿಕೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸುವ ಸಲುವಾಗಿ ಈ ವಿಧಾನವನ್ನು ಅನುಸರಿಸಲು ಕಾರಣವೆಂದು ಆರ್.ಶೇಷಶಾಸ್ತ್ರಿಯವರು ಅಭಿಪ್ರಾಯಪಟ್ಟಿದ್ದಾರೆ."[೫]

ಬಿಲ್ಲು ಹಿಡಿದು ಯುದ್ಧಕ್ಕೆ ಹೊರಟ ವೀರರು ತಲೆಯೆತ್ತಿ ವೀರಗಚ್ಚೆಯನ್ನು ಧರಿಸಿ ಮುನ್ನುಗುವ ಚಿತ್ರಗಳು ಸಾಮಾನ್ಯ. ಖಡ್ಗ ಅಥವಾ ಗುರಾಣಿಗಳನ್ನು ಹಿಡಿದು ಯುದ್ಧ ಮಾಡುವ ವೀರಗಲ್ಲಿನ ಶಿಲ್ಪಗಳು ಈ ಪ್ರದೇಶದಲ್ಲಿ ಕಂಡುಬಂದಿದೆ.

### ೨.೫. ಐತಿಹ್ಯಗಳು

ಕಡಲಬಾಳು ಗ್ರಾಮದ ಅಧ್ಯಯನದಲ್ಲಿ ಈ ಐತಿಹ್ಯಗಳ ಪಾತ್ರವು ಪ್ರಮುಖವಾಗಿದೆ. ಹಾಗೆಯೇ ವಾಸ್ತವವಾಗಿ ನಡೆದಿದೆ ಎಂದು ನಂಬಿಕೊಂಡು ಬಂದಿರುವ ಹಾಗೇ ಅಗತ್ಯತೆಯ ಆಧಾರವೊಂದನ್ನು ಅದರ ಮೂಲ ಸ್ವರೂಪದಲ್ಲಿಯೇ ಒದಗಿಸಿ ಅಸಾಮಾನ್ಯ ಘಟನೆಯೊಂದರ ಸುತ್ತಲೂ ಹೆಣೆದಿರುವಂತಹ ಕಥೆಯಾಗಿದೆ. ಐತಿಹಾಸಿಕ ಹಿನ್ನೆಲೆಯು ರೂಪಾಂತರಗೊಂಡಿದೆ. ಐತಿಹ್ಯ ಎಂದರೆ ಕೆಲವು ಸ್ಥಳ, ವ್ಯಕ್ತಿಯ ಬಗ್ಗೆ ಅವರು ನಂಬಿದಂತಹ ನಂಬಿಕೆ. ಧಾರ್ಮಿಕತೆ ಸಾಮಾಜಿಕ ಅಂಶಗಳು ಅವರ ಘಟನೆಗಳಿಗೆ ಸಂಬಂಧಿಸಿವೆ. ಕಡಲಬಾಳು ಗ್ರಾಮದ ಪರಿಸರದಲ್ಲೂ ಇಂತಹ ನಿಗೂಢ ಸತ್ಯಗಳನ್ನು ಗರ್ಭದಲ್ಲಿ ಹುದುಗಿಸಿಕೊಂಡು ಜನರನ್ನು ಸಾಂಕೇತಿಕವಾಗಿ

ರೂಪುಗೊಂಡಿವೆ. ಜನರಲ್ಲಿ ಅಪಾರವಾದಂತಹ ನಂಬಿಕೆಯ ಮೇರೆಗೆ ಈ ಪರಂಪರಾನುಗತವಾಗಿ ಹರಿದು ಬಂದಿರುವ ಪುರಾಣ ಐತಿಹ್ಯಗಳು ನಮ್ಮ ಸಂಸ್ಕೃತಿಯನ್ನು ಸಂಸ್ಕಾರವನ್ನು ಪ್ರತಿ ಬಿಂಬಿಸುವವು. ಅಷ್ಟೇ ಅಲ್ಲದೆ ಮಾನವರು ತಮ್ಮ ಬದುಕಿನ ಸುತ್ತ ಒಂದು ವಾಸ್ತವಿಕವೆಂಬಂತೆ ಕತೆಯನ್ನು ಕಟ್ಟಿಕೊಂಡು ತಾವು ಸಾಮಾನ್ಯ ಮನುಷ್ಯರಿಗಿಂತ ಭಿನ್ನ ಎಂದು ತಮ್ಮದೇ ಶಕ್ತಿ–ಸಾಮರ್ಥ್ಯದ ಪ್ರದರ್ಶನದಿಂದ ಜನರನ್ನು ಮಾನಸಿಕವಾಗಿಯೇ ಮರಳು ಮಾಡುತ್ತವೆ. ಎಂದೋ ಮುಗಿದು ಹೋದಂತಹ ಘಟನೆಗಳಾಗಿದ್ದರೂ, ಜನರಿಗೆ ಭಯ–ಶಕ್ತಿಯನ್ನು ಸಹ ಮೂಡಿಸುತ್ತವೆ. ಬದುಕಿನ ವಾಸ್ತವಿಕತೆ ಸ್ಥಳೀಯವಾಗಿ ಸಂಚಾರಿ ಸ್ಥಳೀಯ ದೇವತೆಗಳಾಗಿ ಮೂಡಿ ಪ್ರಸಿದ್ಧಿಗೆ ಬಂದಿವೆ.

ಬಹಳ ಶತಮಾನಗಳ ಹಿಂದೆ ಕಡಲಬಾಳು ಗ್ರಾಮದಲ್ಲಿ ಆಂಜನೇಯ ನೆಲೆಗೊಳ್ಳಲು, ಆಂಜನೇಯ ಪೂಜೆ ಮಾಡುವ ಪೂಜಾರು ಮನೆತನದ ಪೂರ್ವಿಕರಿಂದ ಕೇಳಿ ಬಂದ ಐತಿಹ್ಯ ಹೀಗಿದೆ. ಕಡಲಬಾಳು ಗ್ರಾಮ ಮೂಲತಃ ಈಗಿರುವ ಸ್ಥಳದಲ್ಲಿ ಇರಲಿಲ್ಲ. ಈಗಿರುವ ಸ್ಥಳದಿಂದ ಉತ್ತರಕ್ಕೆ ಒಂದು ಕಿಲೋಮೀಟರ್ ದೂರದಲ್ಲಿ ಬಾಚಿಗೊಂಡನಹಳ್ಳಿ ರಸ್ತೆಯ ಪಕ್ಕದ ಸಣಗುಡ್ಡ(ರಾಮದೇವರಗುಡ್ಡ)ದ ಹತ್ತಿರ ಇತ್ತು. ಈ ಗ್ರಾಮಕ್ಕೆ ರಾಮಪುರ ಎಂಬ ಹೆಸರು ಇತ್ತು. ಆಗ ಅಲ್ಲಿ ಕೆಲವಾರು ಮನೆಗಳು ಮಾತ್ರ ಇದ್ದವು. ಅಲ್ಲಿ ಊರು ಇತ್ತು ಅನ್ನುವುದಕ್ಕೆ ಹೊಲದಲ್ಲಿ ಕೆಲಸ ಮಡುವಾಗ ಮನೆಯಲ್ಲಿ ಉಪಯೋಗಿಸುವ ಕೆಲವು ವಸ್ತುಗಳು ಸಿಕ್ಕಿದಂತಹ ನಿದರ್ಶನಗಳು ಇವೆ. ಒಮ್ಮೆ ಚರ್ಮದ ಹಲಗೆಗಳನ್ನು ಧರಿಸಿದ ಬಾಲಕರಿಬ್ಬರು ದೇಶಾಂತರವಾಗಿ ಬಂದು ಊರೆಲ್ಲಾ ಅಲೆದಾಡಿದರು. ಯಾರು ಇವರ ಬಗ್ಗೆ ನೀವು ಯಾರು ಎಂದು ವಿಚಾರಿಸಲಿಲ್ಲ. ಭಿಕ್ಷಾಟನೆಗೆ ಬಂದವರು ಇರಬಹುದೆಂದು ತಿಳಿದುಕೊಂಡಿದ್ದರು. ಈ ಬಾಲಕರು ಮೂರು–ನಾಲ್ಕು ದಿವಸ ಊರೆಲ್ಲಾ ಅಲೆದಾಡಿದರೂ ಯಾರು ಇವರ ಬಗ್ಗೆ ನೀವು ಯಾರು ಎಂದು ವಿಚಾರಿಸಲಿಲ್ಲ. ತೊಟ್ಟು ನೀರು ಆಹಾರ ಸೇವಿಸದಿರುವುದನ್ನು ಕಾಣುತ್ತಾರೆ.

ಊರಿನ ಜನರು ಗಮನಿಸಿದರು. ಊರಿನ ಕೆಲವು ಹಿರಿಯರೆಲ್ಲ ಕೆಲವು ಜನತೆಗೆ ನೀವೇನಾದರೂ ಕುಡಿಯಲಿಕ್ಕೆ ಮತ್ತು ತಿನ್ನಲಿಕ್ಕೆ ಏನಾದರೂ ಕೊಟ್ಟಿದ್ದೀರಾ? ಆ ಬಾಲಕರು ಯಾರ ಮನೆಗಾದರೂ ಭಿಕ್ಷೆಗೆ ಬಂದಿದ್ದರೇ? ಎಂದು ವಿಚಾರಿಸಿದಾಗ ಎಲ್ಲರಿಂದ ನಾವು ಏನನ್ನು ಕೊಟ್ಟಿಲ್ಲ, ಬಾಲಕರು ಯಾರ ಮನೆಗೂ ಭಿಕ್ಷೆಗೆ ಬಂದಿಲ್ಲ. ಎಂಬ ಉತ್ತರ ಬಂತು ಇದರಿಂದ ಇಡೀ ಗ್ರಾಮವೇ ಬೆರಗಾಯಿತು. ನೋಡಲು ಚಿಕ್ಕ ಬಾಲಕರಿದ್ದಾರೆ. ಮೂರು–ನಾಲ್ಕು ದಿನಸ ಏನನ್ನು ತಿಂದಿಲ್ಲ. ನೀರನ್ನು ಕುಡಿದಿಲ್ಲ. ಆದರೂ ಸಹ ಇವರ ಮುಖದಲ್ಲಿ

ಕಳೆಗುಂದಿಲ್ಲ. ಹಸಿವೆ ಎಂಬುದೇ ಇವರಿಗೆ ಗೊತ್ತಿಲ್ಲವೆಂದ ಮೇಲೆ ಈ ಬಾಲಕರು ಯಾರು ಎಂಬುದನ್ನು ತಿಳಿದುಕೊಳ್ಳಬೇಕು. ಇಡೀ ಗ್ರಾಮದ ಜನತೆ ಒಂದು ಕಡೆ ಸಭೆ ಸೇರಿ ಆ ಬಾಲಕರನ್ನು ವಿಚಾರಿಸಿದಾಗ ಅವರು ಮಾತನಾಡದೇ, ಹಾಗೆಯೇ ನೆಲದ ಕಡೆ ನೋಡುತ್ತಾ ನಿಂತಿದ್ದರು.

ಅದರಲ್ಲಿ ಒಬ್ಬ ಬಾಲಕ ಅಲ್ಲೇ ಪಕ್ಕದಲ್ಲಿ ಹಸುವಿನ ಹಾಲು ಕರೆಯುತ್ತಿದ್ದ ಹೆಣ್ಣು ಮಗಳನ್ನು ದಿಟ್ಟಿಸಿ ನೋಡುತ್ತಿದ್ದನು. ಆಗ ಹಿರಿಯರಲ್ಲೊಬ್ಬರು ಹಾಲು ಕುಡಿಯುತ್ತೀರಾ? ಎಂದು ಕೇಳಿದಾಗ ಬಾಲಕರಿಬ್ಬರೂ ತಲೆಬಾಗಿದರು. ಕರೆದ ಹಾಲನ್ನು ತಂಬಿಗೆಯಲ್ಲಿ ಹಾಕಿ ಕೊಡಲಿಕ್ಕೆ ಹೋದಾಗ ಕೈಯಲ್ಲಿ ತೆಗೆದುಕೊಳ್ಳದೆ, ನೆಲದಲ್ಲಿ ಮಣ್ಣಿನಿಂದ ದೋಣಿ ಮಾಡಿ ಅದರಲ್ಲಿ ಹಾಲನ್ನು ಹಾಕಲು ಕೈಸನ್ನೆ ಮಾಡಿ ತೋರಿಸಿದರು. ಅವರು ಹೇಳಿದಂತೆ ನೆಲದಲ್ಲಿ ದೋಣಿ ಮಾಡಿ ಹಾಲು ಹಾಕಿದರು. ಆ ಬಾಲಕರು ಸಹ ಅದಕ್ಕೆ ಒಪ್ಪಿದರು. ಅವರು ಕಟ್ಟಿಕೊಂಡಿದ್ದ ಹಲಗೆಗಳನ್ನು ಒಂದು ಮರಕ್ಕೆ ನೇತುಹಾಕಿದರು. ಮೂರ್ತಿ ಸ್ಥಾಪಿಸಿದ ಜಾಗದಲ್ಲಿ ಮೊದಲು ಊರು ಇರಲಿಲ್ಲ. ಆ ಪ್ರದೇಶ ಗಿಡ-ಮರಗಳಿಂದ ಆವೃತ್ತವಾಗಿತ್ತು. ಮೂರ್ತಿ ಸ್ಥಾಪಿಸಿದ ಆ ಬಾಲಕರಿಬ್ಬರು ಆಂಜನೇಯನ ಪೂಜೆ ಮಾಡಲು ಖಾಯಂಯಾಗಿ ನೇಮಕವಾದ್ದರಿಂದ ಆ ಬಾಲಕರಿಗೆ ಅದೇ ಊರಿನಲ್ಲಿ ಕನ್ಯೆಗಳನ್ನು ತೆಗೆದು ಲಗ್ನ ಮಾಡಿದರು. ಹೀಗೆ ಆಂಜನೇಯನ ನಿತ್ಯ ಪೂಜೆ ಆ ಬಾಲಕರಿಂದಲೇ ಪ್ರಾರಂಭವಾದುದ್ದರಿಂದ ಅವರಿಗೆ ಪೂಜಾರು ಮನೆತನದವರು ಎಂದು ಈಗಲೂ ಕರೆಯುತ್ತಾರೆ. ಈಗ ಊರಿನಲ್ಲಿ ಆಂಜನೇಯನ ಪೂಜೆ ಮಾಡುತ್ತಿರುವ ಪೂಜಾರರ ವಂಶ ಆ ಬಾಲಕರಿಂದಲೇ ಬೆಳೆದು ಬಂದಿದೆ.

ಈಗಲೂ ಪೂಜಾರು ಮನೆತನದವರ ಮೊದಲನೆಯ ಮಗನ ಮದುವೆ ಸಂದರ್ಭದಲ್ಲಿ ರಕ್ತಭೂತ, ಹಾಲಭೂತ ಹಲಗೆಗಳನ್ನು ಉತ್ಸವದಿಂದ ಹೊರಡಿಸುತ್ತಾರೆ. ಆಗ ಅದರ ಪೈಕಿ ಇಬ್ಬರು ಹಿರಿಯರು ಸ್ನಾನಮಾಡಿ ಹೊಸ ಬಟ್ಟೆಯನ್ನು ತೊಟ್ಟುಕೊಳ್ಳುತ್ತಾರೆ. ಹಾಲಭೂತ ಹೆಸರಿನ ಹಲಗೆಯನ್ನು ಕೊರಳಲ್ಲಿ ಕಟ್ಟಿಕೊಂಡು ಆ ಎರಡು ಹಲಗೆಗಳಿಗೂ ಹೊಸ ಬಟ್ಟೆಯನ್ನು ಹೊದಿಸಿರುತ್ತಾರೆ. ನಂತರ ಅವರಿಬ್ಬರನ್ನು ವಾದ್ಯಗಳ ಸಮೇತ ಮೆರವಣಿಗೆಯಲ್ಲಿ ಊರಿನೊಳಗೆ ಕರೆದುಕೊಂಡು ಬರುತ್ತಾರೆ. ಈ ಹಲಗೆಗಳನ್ನು ಕಟ್ಟಿಕೊಂಡ ನಂತರ ಇಬ್ಬರ ಮೇಲೆ ದೇವರ ಆವೇಶವಾಗಿ ಅವರನ್ನು ಹಿಡಿಯುವುದೇ ಕಷ್ಟ. ಈ ಪದ್ಧತಿ ಪುರಾತನ ಕಾಲದಿಂದ ಇಂದಿಗೂ ನಡೆದುಕೊಂಡು ಬಂದಿದೆ. ಈ ಹಲಗೆಗಳು ಆಂಜನೇಯನ ಪೂಜಾರು ವಂಶಜರ ಹಿರಿಯರ ಮನೆತನದಲ್ಲಿ ಇಂದಿಗೂ ಇವೆ. ಅವು ಅವರ ಮನೆತನದ ಇತರೆ ದೇವರಗಳೊಡನೆಯೇ ಪೂಜೆಗೊಳ್ಳತ್ತವೆ.

**ಅಡಿಟಿಪ್ಪಣಿಗಳು**

೧. ಬಸವರಾಜ ಬಿ.ಎಸ್., ೨೦೧೪, **ಕಬ್ಬಾಳ: ಸಂಕಥನ**, ಪು.೭-೧೨

೨. ಪ್ರಹ್ಲಾದ ಆಚಾರ್ಯ, ೧೯೧೫, **ಕಡಲಬಾಳು ರಾಯರ ಚರಿತ್ರೆ**, ಪು.೮

೩. ಅದೇ, ಪು.೧೩

೪. ಅದೇ, ಪು.೨೩

೫. ಜಲಜಾ ಗಂಗೂರ, **ಶ್ರೀ ರಾಘವೇಂದ್ರ ಭಕ್ತಿ ಕುಸುಮಾಂಜಲಿ**. ಪು.೨೨

## ಅಧ್ಯಾಯ ಮೂರು

# ಕಡಲಬಾಳು ಗ್ರಾಮದ ಸಾಮಾಜಿಕ ಆರ್ಥಿಕ, ರಾಜಕೀಯ, ಧಾರ್ಮಿಕ ಹಾಗೂ ಶೈಕ್ಷಣಿಕ ಸ್ಥಿತಿಗತಿಗಳು

೩.೧. ಸಾಮಾಜಿಕ ಸ್ಥಿತಿಗತಿ
೩.೨. ಆರ್ಥಿಕ ಸ್ಥಿತಿಗತಿ
೩.೩. ರಾಜಕೀಯ ಸ್ಥಿತಿಗತಿ
೩.೪. ಧಾರ್ಮಿಕ ಸ್ಥಿತಿಗತಿ
೩.೫. ಶೈಕ್ಷಣಿಕ ಸ್ಥಿತಿಗತಿ

ಅಧ್ಯಾಯ ಮೂರು

# ಕಡಲಬಾಳು ಗ್ರಾಮದ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಹಾಗೂ ಶೈಕ್ಷಣಿಕ ಸ್ಥಿತಿಗತಿಗಳು

## ೩.೧. ಸಾಮಾಜಿಕ ಸ್ಥಿತಿಗತಿಗಳು

ಗ್ರಾಮೀಣರು ಪ್ರಾಚೀನ ಕಾಲದಿಂದಲೂ ನಡೆಸಿಕೊಂಡು ಬಂದಂತಹ ಆಚಾರ-ವಿಚಾರ, ಉಡುಗೆ-ತೊಡುಗೆ ಸಾಂಪ್ರದಾಯಿಕ ಅಂಶಗಳು ಅಗರವಾಗಿರುತ್ತವೆ. ಇಂತಹ ಅನನ್ಯವಾದ ಸಂಸ್ಕೃತಿಯ ಶ್ರೀಮಂತಿಕೆಯನ್ನು ಹೊಂದಿದಂತಹ ಗ್ರಾಮಗಳು ಆಧುನಿಕ ಸಂದರ್ಭದಲ್ಲಿ ನಗರೀಕರಣ, ಜಾಗತೀಕರಣಗಳ ಪ್ರಭಾವದಿಂದ ತಮ್ಮ ಮೂಲ ಸಂಸ್ಕೃತಿಗಳನ್ನು ಕಳೆದುಕೊಳ್ಳುತ್ತವೆ. ಇಂತಹ ಆತಂಕಕಾರಿ ಸಂದರ್ಭದಲ್ಲಿ ನಮ್ಮ ಗ್ರಾಮಗಳು ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸುವ ಮತ್ತು ಬೆಳೆಸುವ ನಿಟ್ಟಿನಲ್ಲಿ ಅಧ್ಯಯನಗಳು ನಡೆಯಬೇಕಾಗಿದೆ. ಆ ದೃಷ್ಟಿಯಿಂದ ಕಡಲಬಾಳು ಗ್ರಾಮದ ಅಧ್ಯಯನ ಕೂಡ ಮಹತ್ವವಾಗುತ್ತದೆ. ಯಾವುದೇ ಒಂದು ಸಮಾಜ ಅಥವಾ ಸಮುದಾಯ ಬೆಳೆಯಬೇಕಾದರೆ ಗ್ರಾಮ ಎನ್ನುವುದು ಅತಿ ಮುಖ್ಯ ಪಾತ್ರ ನಿರ್ವಹಿಸುತ್ತದೆ.

ಗ್ರಾಮವೆಂದರೆ ನಾವು ಬೆಳೆದ ತೊಟ್ಟಿಲು. ಗ್ರಾಮ ಎಂದಿನಿಂದಲೂ ನಮಗೆ ಆಹಾರ ಮತ್ತು ಕಚ್ಚಾ ವಸ್ತುಗಳನ್ನು ಕೊಟ್ಟು ಪೋಷಿಸುತ್ತ ಬಂದಿದೆ. ಜೊತೆಗೆ ನಗರಗಳಿಗೆ ಆಹಾರವನ್ನು ಮಾತ್ರವಲ್ಲ ಜನಸಂಖ್ಯೆಯನ್ನು ಕೊಡುತ್ತಾ ಬಂದಿದೆ. ಹೀಗೆ ನಗರಗಳು ಬೆಳೆಯುವಂತೆ ಮಾಡಿವೆ. ವಿಶ್ವದ ನೈಸರ್ಗಿಕ ಸಂಪತ್ತನ್ನು ಕಾಪಾಡುವುದು ಗ್ರಾಮದ ಪ್ರಮುಖ ಪಾತ್ರವಾಗಿದೆ. ಹೀಗೆ ಗ್ರಾಮವು ದೇಶವನ್ನು ಸದೃಢಗೊಳಿಸುವಲ್ಲಿ ಅಥವಾ ಸಂಪದ್ಭರಿತಗೊಳಿಸುವಲ್ಲಿ ದೇಶದ ಸರ್ವತೋಮುಖ ಬೆಳವಣಿಗೆಯಲ್ಲಿ ಬಹುಪಾಲು ಹೊಂದಿರುವುದರಿಂದ ಗ್ರಾಮದ ಪಾತ್ರ ಬಹಳ ಹಿರಿದಾಗಿದೆ ಎಂಬುದು ನಮಗೆ ತಿಳಿಯುತ್ತದೆ.

ಅಂದರೆ ಅಲ್ಲಲ್ಲಿ ನೆಲೆ ನಿಂತ ಜನಸಮೂಹಗಳೇ ಹಳ್ಳಿಗಳಾಗಿ ಪರಿಣಮಿಸಿದವು. ಅಲ್ಲಿ ಕುಟುಂಬ, ಸಮಾಜ, ಧರ್ಮ ಮುಂತಾದ ಸಂಸ್ಥೆಗಳು ಜನ್ಮ ತಾಳಿದವು. ಇದು ಒಂದು ರೀತಿಯಲ್ಲಿ ಸಾಮಾಜಿಕ ಸ್ವರೂಪವನ್ನು ಹೊಂದಿರುತ್ತದೆ ಎಂಬುದು ಗ್ರಾಮಗಳ ಅಧ್ಯಯನದಿಂದ ತಿಳಿದುಬರುತ್ತದೆ.

**ವಸತಿ ವ್ಯವಸ್ಥೆ:** ಕಡಲಬಾಳು ಗ್ರಾಮವು ಕೇಂದ್ರೀಕೃತ ಲಕ್ಷಣವನ್ನು ಹೊಂದಿದ್ದು, ಊರಿನ ಸುತ್ತಲೂ ಹೊಲ, ಗದ್ದೆ, ತೋಟಗಳಿಂದ ಕೂಡಿದೆ. ಗ್ರಾಮದಲ್ಲಿನ ಮನೆಗಳನ್ನು ಒಂದರ ಪಕ್ಕದಲ್ಲಿ ಒಂದನ್ನು ವ್ಯವಸ್ಥಿತವಾಗಿ ಕಟ್ಟಲಾಗಿದೆ. ತುಂಗಭದ್ರಾ ನದಿ ಪೂರ್ವ ದಿಕ್ಕಿನಿಂದ ಪಶ್ಚಿಮಾಭಿಮುಖವಾಗಿ ಹರಿಯುತ್ತದೆ. ಸೂರ್ಯನ ಉದಯ ಸಮಯದಲ್ಲಿ ಮತ್ತು ಸೂರ್ಯಾಸ್ತಮ ಸಮಯದಲ್ಲಿ ಬೀದಿಗಳು ಸೂರ್ಯನ ಕಿರಣಗಳಿಂದ ಕಂಗೊಳಿಸುತ್ತವೆ. ಇಲ್ಲಿನ ಮನೆಗಳು ಕಲ್ಲು ಮಣ್ಣುಗಳಿಂದ ಮಾಡಿದ ಮನೆಗಳಾಗಿವೆ. ಇಲ್ಲಿನ ಮೂಲ ಹಳೆಯ ಮನೆಗಳು ಮೇಲು ಮುದ್ದೆಯ ಮನೆಗಳಾಗಿದ್ದು, ತುಂಬಾ ಹಳೆಯದಾಗಿವೆ.

ಸೀಮೆ ಹೆಂಚಿನ ಮನೆಗಳನ್ನು ಇತ್ತೀಚಿಗೆ ಹೆಚ್ಚಿನದಾಗಿ ನಿರ್ಮಿಸಿಕೊಂಡಿದ್ದಾರೆ. ಹೆಚ್ಚು ನಾಡಹಂಚು ನಿರ್ಮಾಣ ಮಾಡಿ ಇತ್ತೀಚೆಗೆ ಸೀಮೆಯ ಹಂಚುಗಳು ಸಾಮಾನ್ಯವಾಗಿ ಬಳಕೆಯಾಗುತ್ತವೆ. ನಾಡಹಂಚುಗಳು ಹೆಚ್ಚು ಗಟ್ಟಿಯಾಗಿಲ್ಲದ ಕಾರಣ, ಬೇಗ ಹಾಳಾಗುವುದರಿಂದ ಅವುಗಳ ಬಳಕೆ ಕ್ರಮೇಣ ಕಡಿಮೆಯಾಗಿ ಮಂಗಳೂರು ಹೆಂಚು ಎಂದೇ ಕರೆಯಲಾಗುವ ಸೀಮೆ ಹಂಚುಗಳ ಮನೆಗಳ ನಿರ್ಮಾಣ ಕಳೆದ ಹದಿನೈದು ಇಪ್ಪತ್ತು ವರ್ಷಗಳಿಂದ ಬಳಕೆ ಯಲ್ಲಿದೆ.

ಈ ಮನೆಗಳು ಹಿಂದೆ ಮತ್ತು ಮುಂದೆ ಅಂದರೆ ಬೀದಿಯ ಕಡೆ ಮತ್ತು ಮನೆ ಹಿಂದೆ ಹಿತ್ತಲ ಕಡೆ ಎರಡೂ ಕಡೆ ಇಳಿಜಾರಿನಿಂದ ಕೂಡಿರುತ್ತವೆ. ಮನೆಯ ಮಧ್ಯದ ಗೋಡೆ ಎತ್ತರವಾಗಿದ್ದು, ಹಿತ್ತಲ ಮತ್ತು ಬೀದಿಯ ಕಡೆ ಹಂತ ಹಂತವಾಗಿ ವಾಟಕೊಟ್ಟು ಇಳಿಜಾರು ಮಾಡಿರುತ್ತಾರೆ. ಮುಂದೆ ಬೀದಿಯ ಕಡೆ ಹತ್ತಿರ ಜಾಗದಲ್ಲಿ ಪಡಶಾಲೆಯನ್ನು ಮಾಡಿ ಹಂಚಿನ ಸೂರಿಗೆ ನಾಲ್ಕು ಕಂಬಗಳನ್ನು ಕೊಟ್ಟು ನಿಲ್ಲಿಸುವುದು. ಹಾಗೆಯೇ ಮನೆಯ ಗೋಡೆಗಳನ್ನು ಸಿಮೆಂಟಿನಲ್ಲಿ ಪ್ಲಾಸ್ಟಿಂಗ್ ಮಾಡಿ, ಮನೆಗಳಿಗೂ ಸುಣ್ಣ ಬಣ್ಣ ಬಳಿಯುತ್ತಾರೆ. ಮನೆಯ ಒಳಗೆ ದೇವರ ಮನೆ ಒಂದು ವಿಶೇಷವಾದ ಕೋಣೆ ಇರುತ್ತದೆ. ಇನ್ನೂ ವಿಶಾಲವಾದ ಹಜಾರವಿದ್ದು, ದೇವರ ಮನೆ ಕೆಲವು ಮನೆಗಳಲ್ಲಿ ಪ್ರತ್ಯೇಕವಾಗಿರುತ್ತದೆ. ಬಹುತೇಕ ಮನೆಗಳಲ್ಲಿ ಹಜಾರದ ಒಂದು ಮೂಲೆಯಲ್ಲಿ ಇಟ್ಟುಕೊಂಡಿರುತ್ತಾರೆ. ಹಿಂದೆ ಮಣ್ಣಿನ ಗೋಡೆಗಳಿಂದಲೇ ಮನೆಗಳನ್ನು ಕಟ್ಟುತ್ತಿದ್ದರು. ಬಿದಿರಿನ ಬೊಂಬುಗಳನ್ನು ಉಪಯೋಗಿಸಿ ಮೇಲ್ಛಾವಣಿಗೆ ಇಳಿಬಿಟ್ಟು

ಅದರ ಮೇಲೆ ಕಾಡಿನಲ್ಲಿ ಸಿಗುತ್ತಿದ್ದ ಹಂಚಿ ಹುಲ್ಲು ಅಥವಾ ನಾಡ ಹುಲ್ಲನ್ನು ಕುಯ್ದು ತಂದು ದಟ್ಟವಾಗಿ ಜೋಡಿಸಿ ಕಟ್ಟುತ್ತಿದ್ದರು. ನಂತರ ಗರಿಗಳನ್ನು ಹೆಣೆದು ಒಂದರ ಪಕ್ಕದಲ್ಲಿ ಒಂದನ್ನು ಜೋಡಿಸಿ ನೀರು ಒಳಗೆ ಸುರಿಯದಂತೆ ಇಳಿಜಾರಾಗಿ ಕಟ್ಟುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಅಂತಹ ಒಂದು ಮನೆಯೂ ಕಾಣಸಿಗುವುದಿಲ್ಲ.

ಇತ್ತೀಚಿನ ದಿನಗಳಲ್ಲಿ ಆಧುನೀಕರಣ, ನಗರೀಕರಣದ ಪ್ರಭಾವದಿಂದ ಇಲ್ಲಿನ ವಸತಿ ವ್ಯವಸ್ಥೆಯಲ್ಲಿ ಬದಲಾವಣೆಗಳುಂಟಾಗಿವೆ. ಮಣ್ಣಿನ ಗೋಡೆಗಳಿಗೆ ಬದಲಾಗಿ ಸಿಮೆಂಟ್‌ನಿಂದ ಕಟ್ಟಿದ ಗೋಡೆಗಳು ನಾಟಿ ಇಟ್ಟಿಗೆಗೆ ಬದಲಾಗಿ ಯಂತ್ರದಿಂದ ಅಚ್ಚಾದ ಇಟ್ಟಿಗೆಗಳ ಉಪಯೋಗವೇ ಹೆಚ್ಚಾಗಿದೆ. ನಾಡಹಂಚುಗಳು ಮತ್ತು ಸೀಮೆ ಹಂಚುಗಳಿಗೆ ಬದಲಾಗಿ ಸಿಮೆಂಟ್‌ನಿಂದ ಮಾಡಿದ ಸೀಟುಗಳನ್ನು(ತಗಡು) ಮನೆಯ ಮೇಲ್ಚಾವಣಿಗೆ ಬಳಸುವುದು ಸಾಮಾನ್ಯವಾಗಿದೆ. ಕಾರಣ ಇದು ಬೇರೆ ಸೀಮೆಹಂಚುಗಳಿಗಿಂತ ಕಡಿಮೆ ಖರ್ಚು ಮತ್ತು ಬಾಳಿಕೆ ಬರುತ್ತದೆ ಹಾಗೂ ಕೆಲಸವು ಕಡಿಮೆಯಾಗುತ್ತದೆ.

ಆರ್ಥಿಕವಾಗಿ ಸದೃಢವಾದ ಕುಟುಂಬಗಳು ತಮ್ಮ ವಾಸದ ಮನೆಗಳನ್ನು ಆಧುನಿಕವಾದ ನಗರವಾಸಿಗಳಂತೆ ತಾರಸಿ(ಬಿಲ್ಡಿಂಗ್) ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಇದು ಇಲ್ಲಿರುವ ಎಲ್ಲಾ ಸಮುದಾಯದ ಜನರಲ್ಲೂ ಸಾಮಾನ್ಯವಾಗಿದೆ. ಈ ಮನೆಗಳಲ್ಲಿ ಎಲ್ಲವೂ ಸುಸಜ್ಜಿತವಾದ ವ್ಯವಸ್ಥೆಯನ್ನು ಮಾಡಿಕೊಳ್ಳಲಾಗಿದೆ. ಅಡುಗೆ ಮನೆ, ದೇವರ ಕೋಣೆ, ಪ್ರತ್ಯೇಕ ಮಲಗುವ ಕೋಣೆಗಳು, ಶೌಚಾಲಯಗಳು ವಿಶಾಲವಾದ ಹಜಾರಗಳನ್ನು ವ್ಯವಸ್ಥಿತವಾಗಿ ನಿರ್ಮಿಸಿದ್ದಾರೆ.

ಗ್ರಾಮಪಂಚಾಯಿತಿ ಮತ್ತು ಗ್ರಾಮ ನೈರ್ಮಲ್ಯದ ವತಿಯಿಂದ ಗ್ರಾಮದ ಎಲ್ಲಾ ಮನೆಗಳಿಗೂ ಸುಲಭ ಶೌಚಾಲಯದ ವ್ಯವಸ್ಥೆಯನ್ನು ಒದಗಿಸಿದ್ದರೂ, ಅರ್ಧದಷ್ಟು ಜನರು ಬಯಲು ಶೌಚಾಲಯವನ್ನು ಆಶ್ರಯಿಸುತ್ತಾರೆ. ಕರ್ನಾಟಕ ಸರ್ಕಾರ ಸುವರ್ಣ ಗ್ರಾಮ ಯೋಜನೆಯಡಿಯಲ್ಲಿ, ಗ್ರಾಮ ಪಂಚಾಯಿತಿ ಮೂಲಕ ಬಸವ ವಸತಿ ಯೋಜನೆ(೨೦೧೧-೧೨ನೆಯ ಸಾಲಿನಲ್ಲಿ) ವಸತಿ ನಿರ್ಮಿಸಲು ಅನುದಾನ ನೀಡುತ್ತಿದೆ. ಇದನ್ನು ಎಲ್ಲಾ ಸಮುದಾಯ ಜನರಿಗೂ ನೀಡಲಾಗುತ್ತದೆ ಮತ್ತು ೨೦೧೨-೧೩ನೆಯ ಸಾಲಿನಿಂದ ೨೫ ಸಾವಿರ ರೂಪಾಯಿಗಳನ್ನು ನೀಡಲಾಗುತ್ತದೆ.

ಇಂದಿರಾ ಆವಾಸ ಯೋಜನೆಯಲ್ಲಿ ಪರಿಶಿಷ್ಟ ಸಮುದಾಯ ಮತ್ತು ಪರಿಶಿಷ್ಟ ಪಂಗಡದವರಿಗೆ ೫೦ ಸಾವಿರ ರೂಪಾಯಿಗಳ ಅನುದಾನ ನೀಡಲಾಗುತ್ತಿದ್ದು, ಈ ಯೋಜನೆ ಅಡಿಯಲ್ಲಿ ಎಲ್ಲಾ ಮನೆಗಳಿಗೂ ಸಿಮೆಂಟಿನ ಶೀಟುಗಳಿಂದ ಮತ್ತು ಸೀಮೆ ಹಂಚಿನಿಂದ ನಿರ್ಮಾಣ ಮಾಡಿದ ಮನೆಗಳೇ ಹೆಚ್ಚಾಗಿವೆ. ಸುಮಾರು ೮೦ರಷ್ಟು ಮನೆಗಳು ಸೀಮೆ ಹೆಂಚು

ಮತ್ತು ಸಿಮೆಂಟಿನ ಶೀಟುಗಳಿಂದ ಕಟ್ಟುವ ಮನೆಗಳಾಗಿವೆ. ಗ್ರಾಮದಲ್ಲಿ ಒಟ್ಟು ೭೧೪ ಮನೆಗಳಿವೆ.

ಹಿಂದಿನ ಕಾಲದಲ್ಲಿ ಒಂದೊಂದು ಸಮುದಾಯದ ಜನರು ಒಂದೊಂದು ಪ್ರತ್ಯೇಕ ಬೀದಿಗಳಲ್ಲಿ ವಾಸಿಸುತ್ತಿದ್ದರು. ಆದರೆ ಇಂದು ಅಂತಹ ಪರಿಸ್ಥಿತಿ ಬದಲಾಗಿದೆ. ಪರಿಶಿಷ್ಟರು ಊರ ಹೊರಗೆ ಅವರ ಬೀದಿಗಳಲ್ಲಿರುತ್ತಿದ್ದರು. ಈಗ ಎಲ್ಲಾ ಮನೆಗಳು ಅಕ್ಕಪಕ್ಕದಲ್ಲಿ ನಿರ್ಮಾಣಗೊಂಡಿವೆ. ಇದು ಬದಲಾವಣೆಯತ್ತ ಸಾಗುತ್ತಿರುವ ಸೂಚನೆಯಾಗಿದೆ.

ಹಿಂದೆ ಮನೆಗಳಲ್ಲಿ ಕೃಷಿ ಮಾಡಲು ಅವಶ್ಯವಿರುವ ಸಾಕು ಪ್ರಾಣಿಗಳಾದ ಹಸು, ಎಮ್ಮೆ, ಕುರಿ, ಆಡು, ಎತ್ತುಗಳು ಮುಂತಾದವುಗಳೆಲ್ಲವು ತಮ್ಮ ಮನೆಯಲ್ಲಿ ಒಂದು ಕಡೆ ವ್ಯವಸ್ಥಿತವಾಗಿ ಕಟ್ಟಲಾಗುತ್ತದೆ. ಅವುಗಳಿಗೆ ಕೊಟ್ಟಿಗೆಯನ್ನು ಮಾಡಿ ಮನೆಯೊಳಗೆ ಗಾಳಿ, ಬಿಸಿಲುಗಳಿಂದ ರಕ್ಷಿಸುವಂತೆ ನೋಡಿಕೊಳ್ಳುತ್ತಿದ್ದರು. ಇದಕ್ಕೆ ಇನ್ನೂ ಒಂದು ಕಾರಣ ಎಂದರೆ ಇಲ್ಲಿನ ಜನಗಳು ತಮ್ಮ ಪ್ರತಿನಿತ್ಯದ ಕೆಲಸಗಳಿಗೆ ಹೋಗುವ ಮುನ್ನ ಹಸುಗಳ ಮುಖ ನೋಡುವುದು, ತದ ನಂತರವೇ ದಿನನಿತ್ಯದ ಕೆಲಸ ಪ್ರಾರಂಭವಾಗುತ್ತಿತ್ತು. ಹೀಗೆ ಇಲ್ಲಿನ ಜನರಲ್ಲಿ ಜಾನುವಾರುಗಳಲ್ಲಿ ಸಂಬಂಧ ಅನ್ಯೋನ್ಯವಾಗಿತ್ತು. ಈ ಸಂಪ್ರದಾಯ ಇಂದಿಗೂ ಉಳಿದು ಬಂದಿದ್ದು, ಇತ್ತೀಚಿನ ದಿನಗಳಲ್ಲಿ ದನಗಳ ಸಂಖ್ಯೆ ಕಡಿಮೆಯಾಗಿ ಈ ಸಂಪ್ರದಾಯದಲ್ಲಿ ಬದಲಾವಣೆಗಳು ಕಂಡುಬರುತ್ತವೆ. ಒಟ್ಟಾರೆಯಾಗಿ ಕಡಲಬಾಳು ಗ್ರಾಮದಲ್ಲಿ ಎಲ್ಲಾ ರೀತಿಯ, ಎಲ್ಲಾ ವಿಧದ ಮನೆಗಳು ಕಂಡುಬರುತ್ತವೆ.

**ಕಡಲಬಾಳು ಗ್ರಾಮದ ಸಮುದಾಯ ವ್ಯವಸ್ಥೆ :** ಗ್ರಾಮದ ಭೌಗೋಳಿಕ ಹಿನ್ನೆಲೆಯಲ್ಲಿ ಇರುವಂತೆ ಹಲವಾರು ಮತಪಂಥಗಳ ವಿವಿಧ ವರ್ಗಗಳ ಜನರು ಇದ್ದಾರೆ. ಭಾರತೀಯ ಸಾಂಸ್ಕೃತಿಕ ಪರಂಪರೆಯ ಹಿನ್ನೆಲೆಯಲ್ಲಿ ಸಮುದಾಯವು ಸಾಮಾಜಿಕ, ಆರ್ಥಿಕತೆ ಮೊದಲಾದ ಅಂಶಗಳ ಜೊತೆಗೆ ಕಲೆ, ಸಾಹಿತ್ಯ ಸಾಂಸ್ಕೃತಿಕ ಅಂಶಗಳಿಂದ ವಿಶೇಷತೆಯನ್ನು ಹೊಂದಿದೆ. ಕಡಲಬಾಳು ಗ್ರಾಮದಲ್ಲಿ ಬಹುತೇಕವಾಗಿ ಬ್ರಾಹ್ಮಣರು, ಲಿಂಗಾಯಿತರು, ಮುಸ್ಲಿಂಮರು, ವಾಲ್ಮೀಕಿ, ಬಡಿಗೇರ, ಮಾದಿಗರು, ಹಡಪದರು, ಅಕ್ಕಸಾಲಿಗರು, ತಳವಾರ ಸಮುದಾಯದ ಜನರು ಹೆಚ್ಚಾಗಿ ಕಂಡುಬರುತ್ತಾರೆ. ಈ ಸಮುದಾಯಗಳಲ್ಲಿನ ಸಮುದಾಯಪದ್ಧತಿ ಹಿಂದೂ ಸಮಾಜದ ಒಂದುವಿಶಿಷ್ಟ ಲಕ್ಷಣವಾಗಿದೆ. ಸಮುದಾಯಗಳಲ್ಲಿ ಜಾತಿ ಎಂಬುದು ವೃತ್ತಿ ಆಧಾರವಾಗಿರುತ್ತದೆ. ಉಡುಗೆ-ತೊಡುಗೆ, ಆಹಾರಪದ್ಧತಿ, ಧಾರ್ಮಿಕ ವಿಚಾರ, ಆಚರಣೆಗಳು ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುತ್ತವೆ. ತಾವು ಇತರರಿಗಿಂತ ಬೇರೆ ಎಂಬ ಭಾವನೆ ಪ್ರತಿ ಸಮುದಾಯದಲ್ಲೂ ಇರುತ್ತದೆ. ಇದರಂತೆ ಬಳ್ಳಾರಿಯ ಹಗರಿಬೊಮ್ಮನಹಳ್ಳಿ ತಾಲೂಕಿನ

ಕಡಲಬಾಳು ಗ್ರಾಮದ ಈ ಅನೇಕ ಸಮುದಾಯಗಳಲ್ಲಿ ಸಮುದಾಯ ವ್ಯವಸ್ಥೆಯನ್ನು ಕಾಣಬಹುದಾಗಿದೆ.

**ವಾಲ್ಮೀಕಿ ಅಥವಾ ನಾಯಕ:** ಇಲ್ಲಿ ೧೬೦ ಮನೆಗಳನ್ನು ಹೊಂದಿರುವ ವಾಲ್ಮೀಕಿ ಸಮುದಾಯದವರು ವಾಸಿಸುತ್ತಿದ್ದಾರೆ. ಇವರ ಮೂಲವೃತ್ತಿ ಬೇಟೆಯಾಗಿದ್ದು, ಈಗ ಕೃಷಿ ಮಾಡುವುದರ ಜೊತೆಗೆ ಕೃಷಿ ಕೂಲಿ ಕಾರ್ಮಿಕರಾಗಿದ್ದಾರೆ. ಇವರ ಆರಾಧ್ಯದೈವ ಕಡಲಬಾಳು ಆಂಜನೇಯನಾಗಿದ್ದಾನೆ ಹಾಗೂ ಮನೆಯ ದೇವರು ಕೂಡ ಆಂಜನೇಯನಾಗಿರುತ್ತಾನೆ.

**ಅಗಸರು:** ಈ ಊರಿನಲ್ಲಿ ೨೦ ಕುಟುಂಬಗಳಿವೆ. ಮಡಿವಾಳ, ದೋಬಿ ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಇವರ ಪ್ರಮುಖ ಕೆಲಸವೆಂದರೆ ಬಟ್ಟೆಯನ್ನು ಸ್ವಚ್ಚತೆ ಮಾಡುವುದು. ಕೆಲವರು ಕೃಷಿ ಹಾಗೂ ಇತರೆ ಉದ್ಯೋಗಗಳಲ್ಲಿ ತೊಡಗಿಸಿಕೊಂಡಿರುತ್ತಾರೆ. ಜೊತೆಗೆ ಇಸ್ತ್ರಿ ಕೆಲಸವನ್ನು ಮಾಡುತ್ತಾರೆ. ಅಲ್ಲದೇ ಬೇರೆ-ಬೇರೆ ಸಮುದಾಯದ ಹಾಗೂ ಧರ್ಮಗಳ ದೈವಗಳ ಕಾರ್ಯಕ್ರಮಗಳ ಮೆರವಣಿಗೆ ಸಂದರ್ಭದಲ್ಲಿ ಬಟ್ಟೆ ಹಾಸುವ ಕೆಲಸಕಾರ್ಯ ಪ್ರಮುಖವಾಗಿದೆ. ಇವರ ಸಮುದಾಯದಲ್ಲಿ ಅನೇಕ ಬೆಡಗುಗಳು ಇದ್ದರೂ ಸಹ ಒಂದೇ ಬೆಡಗಿನಲ್ಲಿ ವಿವಾಹವಾಗುವುದಿಲ್ಲ. ಬ್ರಾಹ್ಮಣ ಅಥವಾ ಜಂಗಮ ಪುರೋಹಿತರು ಮದುವೆ ನೆರವೇರಿಸುತ್ತಾರೆ. ಸಾಮಾನ್ಯವಾಗಿ ಇವರಲ್ಲಿ ವಿಧವಾ ವಿವಾಹಕ್ಕೆ ಅವಕಾಶವಿಲ್ಲ. ಅಗಸರನ್ನು ಪ್ರಮುಖವಾಗಿ ಎರಡು ವರ್ಗಗಳಾಗಿ ವಿಂಗಡಿಸಲಾಗಿದೆ.

೧. ಲಿಂಗ ಧರಿಸುವ ಅಗಸರು

೨. ಲಿಂಗ ಧರಿಸದೇ ಇರುವ ಅಗಸರು

ವಾಸ್ತವವಾಗಿ ಲಿಂಗವನ್ನು ಧರಿಸದವರೇ ಶ್ರೇಷ್ಠ ಎಂಬ ಭಾವನೆ ಇತ್ತು. ಇತ್ತೀಚೆಗೆ ಭೇದ-ಭಾವ ಕಡಿಮೆಯಾಗಿ ಗಂಡು-ಹೆಣ್ಣು ಕೊಡುಕೊಳ್ಳುವಿಕೆ ನಡೆಯುತ್ತದೆ.

**ಸುಣಗಾರರು:** ಈ ಗ್ರಾಮದಲ್ಲಿ ೬೦ ಮನೆಗಳಿವೆ. ಸುಣಗಾರ ಹೆಣ್ಣು ಮಕ್ಕಳು ೭ ದಿನಗಳ ಕಾಲ ಜೋಕುಮಾರನ್ನು ಹೊತ್ತುಕೊಂಡು ಹುಣ್ಣಿಮೆಯಲ್ಲಿ ಮನೆ-ಮನೆಗಳಿಗೆ ಹೋಗಿ ಬರುತ್ತಾರೆ. ಭಾದ್ರಪದ ೧೪ನೆಯ ದಿನ ಆ ಮೂರ್ತಿಯನ್ನು ಅಗಸರು ಬಟ್ಟೆ ಒಗೆಯುವ ಕಲ್ಲಿನ ಬುಡದಲ್ಲಿ ಇಟ್ಟು ಬರುತ್ತಾರೆ. ಅಲ್ಲದೇ ಇದಕ್ಕೆ ಮೂರು ವ್ರತಗಳನ್ನು ಆಚರಿಸುತ್ತಾರೆ. ಆ ಕಲ್ಲಿನ ಮೇಲೆ ಬಟ್ಟೆ ಒಗೆಯುವುದಿಲ್ಲ. ಏಕೆಂದರೆ ನಮ್ಮ ಪೂರ್ವಜರ ನಂಬಿಕೆಯಾಗಿತ್ತು ಎನ್ನುತ್ತಾರೆ.

**ವೀರಶೈವರು ಲಿಂಗಾಯತರು:** ಈ ಗ್ರಾಮದಲ್ಲಿ ವೀರಶೈವ ೧೫೦ ಮನೆಗಳಿವೆ. ಇವರು ಆರ್ಥಿಕವಾಗಿ ಸಬಲರಾಗಿದ್ದಾರೆ. ವೀರಶೈವರಲ್ಲಿ ಪ್ರಮುಖವಾಗಿ ಜಂಗಮ, ಪಂಚಮಸಾಲಿ,

ಗಾಣಿಗ, ಸಜ್ಜನ, ಕುರುಹೀನಶೆಟ್ಟಿ, ಬಣಜಿಗ ಒಳ ಪಂಗಡಗಳಿವೆ. ಇವರಲ್ಲಿ ಜಂಗಮರೇ ಶ್ರೇಷ್ಠರು ಎಂಬ ಪರಿಕಲ್ಪನೆ ಇವರಲ್ಲಿದೆ. ಆಚಾರ–ವಿಚಾರಗಳು ಒಂದೇಯಾಗಿದ್ದು, ಅವರು ಕೃಷಿ, ವ್ಯಾಪಾರ, ನೌಕರಿ, ಕೂಲಿ ಮುಂತಾದ ಅನೇಕ ವೃತ್ತಿಗಳಲ್ಲಿ ಸಹ ಮುಂಚೂಣಿಯಲ್ಲಿದ್ದಾರೆ. ಇವರ ಪ್ರಮುಖ ಆರಾಧ್ಯ ದೈವ ಬಸವಣ್ಣ.

**ಕುರುಬರು:** ಕಡಲಬಾಳು ಗ್ರಾಮದಲ್ಲಿ ೫೦ ಕುಟುಂಬಗಳಿವೆ. ಇವರು ಸಹ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದಾರೆ. ಇವರಿಗೆ ಹಾಲುಮತದವರೆಂದು ಕರೆಯುತ್ತಾರೆ. ಕೃಷಿ ಮತ್ತು ವೃತ್ತಿಪರ ಕೆಲಸಗಳ ಜೊತೆಗೆ ಕಂಬಳಿ ನೇಯುವುದು, ಕುರಿ ಸಾಕಾಣಿಕೆ ಇವರ ಪ್ರಮುಖ ಉದ್ಯೋಗವಾಗಿದೆ. ಇವರಲ್ಲಿ ಪ್ರಮುಖವಾಗಿ ಉಣ್ಣೆ–ಕಂಕಣ, ಹತ್ತಿ ಕಂಕಣ ಎಂತಲೂ ಪಂಗಡಗಳಿವೆ. ಅನೇಕ ರೀತಿಯ ಬೆಡಗುಗಳಿದ್ದು ಇವರು ಒಂದೇ ಬೆಡಗಿನಲ್ಲಿ ಮದುವೆಯಾಗುವುದಿಲ್ಲ. ಇವರ ವಿವಾಹವು ಬಹುತೇಕವಾಗಿ ಗಂಡಿನ ಮನೆಯಲ್ಲಿ ನಡೆಯುತ್ತದೆ. ಗಂಡಸರು ಹೊರಗೆ ಹೋಗುವಾಗ ಹೆಗಲ ಮೇಲೆ ಕಂಬಳಿ ಹಾಕಿಕೊಂಡು ತಲೆಗೆ ರುಮಾಲು ಸುತ್ತಿಕೊಂಡು ಹೋಗುತ್ತಾರೆ. ಇದು ಇವರ ಸಾಂಪ್ರದಾಯಿಕ ವಿಶೇಷತೆಯಾಗಿದೆ.

ಇವರು ದೀಪಾವಳಿ ಹಬ್ಬವನ್ನು ಆದ್ದೂರಿಯಾಗಿ ಮಾಡುತ್ತಾರೆ. ಇದರ ಜೊತೆಗೆ ಡೋಲು, ಡೊಳ್ಳುಗಳನ್ನು ಸಹ ಪೂಜೆ ಮಾಡುತ್ತಾರೆ. ಇವರು ಬೀರೇಶ್ವರ, ದೇವರಗುಡ್ಡ ಮೈಲಾರ, ಎಲ್ಲಮ್ಮ, ರೇವಣ ಸಿದ್ಧೇಶ್ವರ ಮೊದಲಾದ ದೇವರುಗಳಿಗೆ ನಡೆದುಕೊಳ್ಳುತ್ತಾರೆ. ಇವರಲ್ಲಿ ಶವವನ್ನು ಹೂಳುವ ಮತ್ತು ಸುಡುವಂತಹ ಪದ್ಧತಿ ಇದೆ. ಡೊಳ್ಳಿನ ಕುಣಿತ ಅವರ ಪ್ರಿಯವಾದ ಜನಪದ ಕಲೆಯಾಗಿದೆ. ಕಾಗಿನೆಲೆಯಲ್ಲಿ ಕುರುಬ ಸಮುದಾಯದ ಗುರುಪೀಠವಿದೆ.

**ಮಾದಿಗರು:** ೧೫೦ ಮನೆಗಳು ಈ ಗ್ರಾಮದಲ್ಲಿ ಕಂಡುಬರುತ್ತವೆ. ಈ ಸಮುದಾಯದವರು ಆರ್ಥಿಕವಾಗಿ ಹಿಂದುಳಿದವರಾಗಿದ್ದು, ಅಲ್ಲದೆ ಸಾಮಾಜಿಕವಾಗಿ, ಧಾರ್ಮಿಕವಾಗಿ ಶೋಷಣೆಗಳನ್ನು ಅನುಭವಿಸುತ್ತಿದ್ದಾರೆ. ಇವರಲ್ಲಿ ಅನೇಕ ಒಳಪಂಗಡಗಳು ಇವೆ. ಕೋಳಿಮಾದಿಗ, ಮೀನು ಮಾದಿಗ, ಬಾಲಬಸವ, ಮಾಚಿಗಾರ ಮುಂತಾದ ಉಪ ಸಮುದಾಯಗಳಿವೆ. ಚರ್ಮದ ಹಗ್ಗ, ಚರ್ಮದ ಮಿಣಿ, ಎತ್ತಿನ ಕೊರಳಿಗೆ ಹಾಕುವ ಪಟ್ಟ ಮುಂತಾದ ಚರ್ಮದ ವಸ್ತುಗಳನ್ನು ತಯಾರಿಸುತ್ತಾರೆ. ಜೊತೆಗೆ ಕೂಲಿ, ಬೇಸಾಯ ಉದ್ಯೋಗವಾಗಿದೆ. ದುರ್ಗವ್ವ, ದ್ಯಾಮವ್ವ, ಮರಿಯವ್ವ, ಆಂಜನೇಯ, ಮಂಜುನಾಥ, ಮೈಲಾರ ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ. ಹಿರೇ/ದೊಡ್ಡ ಮೈಲಾರ ದೇವಸ್ಥಾನಕ್ಕೆ ಪ್ರಮುಖವಾಗಿ ಹೋಗುತ್ತಾರೆ. ಇವರು ಮಾಂಸಹಾರಿಗಳಾಗಿರುತ್ತಾರೆ. ಸತ್ತವರನ್ನು ಹೂಳುವ ಪದ್ಧತಿಯು ಇದೆ.

**ಬಡಿಗೇರ:** ಈ ಗ್ರಾಮದಲ್ಲಿ ಈ ಸಮುದಾಯವು ಅಲ್ಪಸಂಖ್ಯೆಯಲ್ಲಿದ್ದಾರೆ. ಊರಲ್ಲಿ ೨೦ ಮನೆಗಳಿವೆ. ಇವರನ್ನು ವಿಶ್ವಕರ್ಮ, ಪಾಂಚಾಳರು ಎಂಬ ಹೆಸರುಗಳಿಂದ ಕರೆಯುತ್ತಾರೆ. ಬಡಗಿತನ ಇವರ ಮುಖ್ಯ ಉದ್ಯೋಗವಾಗಿದೆ. ಅಲ್ಲದೆ ಕಮ್ಮಾರರು, ಬಡಿಗೇರರು ಎಂತಲೂ ಕರೆಯುತ್ತಾರೆ. ಇವರಿಗೆ ವೀರಭದ್ರೇಶ್ವರ, ತಿಂತಿಣಿಯ ಮೌನೇಶ್ವರ ಇವರ ಆರಾಧ್ಯ ದೈವಗಳಾಗಿದ್ದಾರೆ.

**ಕಮ್ಮಾರ:** ಈ ಗ್ರಾಮದಲ್ಲಿ ೪ ಮನೆಗಳಿವೆ. ಇವರು ಕೊಡಲಿ, ಬೇಸಾಯಕ್ಕೆ ಬೇಕಾದ ಕಬ್ಬಿಣದ ಸಲಕರಣೆ, ಕುಂಟಿ, ಕುಡುಗೋಲು ಮುಂತಾದ ಸಾಮಾನುಗಳನ್ನು ಸಿದ್ಧಪಡಿಸುತ್ತಾರೆ.

**ತಳವಾರ:** ಈ ಗ್ರಾಮದಲ್ಲಿ ೧೦ ಮನೆಗಳಿವೆ. ಇದು ಒಂದು ವೃತ್ತಿ ಸೂಚಕ ಹೆಸರಾಗಿದೆ. ತಳವಾರ ಎಂದರೆ ಗ್ರಾಮದ ರಕ್ಷಕ ಎಂದರ್ಥವಾಗುತ್ತದೆ. ಊರಲ್ಲಿ ತೆರಿಗೆ ವಸೂಲಿ ಮಾಡುವುದು ಮತ್ತು ವಾಲಿಕಾರಿಕೆ ಮಾಡುವುದು ಪ್ರಮುಖ ಕೆಲಸವಾಗಿರುತ್ತದೆ. ಊರಿನಲ್ಲಿ ಯಾರು ಸತ್ತರೂ ಅವರ ಸಂಬಂಧಿಕರಿಗೆ ಸುದ್ದಿ ತಿಳಿಸುವುದು ಇವರ ಕೆಲಸ.

**ಬಾರಿಕರು:** ಕಡಲಬಾಳು ಗ್ರಾಮದಲ್ಲಿ ೨೦ ಕುಟುಂಬಗಳಿದ್ದು ಇವರಿಗೆ ಗಂಗಮತಸ್ಥರು ಎಂಬ ಹೆಸರಿನಿಂದಲೂ ಕರೆಯುತ್ತಾರೆ. ಪ್ರಮುಖ ಕೆಲಸವೆಂದರೆ ಮೀನು ಹಿಡಿಯುವುದು. ಇವರು ತುಂಗಭದ್ರಾ ನದಿಯ ಹಿನ್ನೀರಿನಲ್ಲಿ ಬದುಕುವ ಜನರು. ಆ ಕಾರಣದಿಂದ ದೋಣಿ ನಡೆಸುವುದು ಉಂಟು. ಕೆಲವರು ಒಕ್ಕಲುತನ ಮಾಡುವವರಾಗಿದ್ದಾರೆ.

**ಮುಸ್ಲಿಂರು:** ಈ ಗ್ರಾಮದಲ್ಲಿ ಮುಸ್ಲಿಂಮರ ೮೦ ಮನೆಗಳಿವೆ. ಇವರು ಕೃಷಿಗಿಂತ ಹೆಚ್ಚಾಗಿ ಬೇರೆ ಕಸುಬುಗಳನ್ನು ಮಾಡುತ್ತಾರೆ. ಹಬ್ಬ-ಹರಿದಿನಗಳಲ್ಲಿ ಹಿಂದೂ ಮುಸ್ಲಿಂರು ಸೇರಿ ಹಬ್ಬಗಳನ್ನು ಆಚರಿಸುವ ಮೂಲಕ ಏಕಭಾವೈಕ್ಯತೆಯನ್ನು ಸಾರಿದ್ದಾರೆ. ಕಡಲಬಾಳು ಗ್ರಾಮದಲ್ಲಿ ಇವರು ಮಾಂಸವನ್ನು ಮಾರುವುದು, ಇನ್ನು ಕೆಲವರು ವ್ಯವಸಾಯ ಮತ್ತಿತರ ಕೆಲಸಗಳಲ್ಲಿ ತೊಡಗಿರುತ್ತಾರೆ.

**ವೃತ್ತಿ:** ಈ ಊರಿನಲ್ಲಿ ವ್ಯವಸಾಯವೇ ಪ್ರಧಾನ ಉದ್ಯೋಗ. ಇಲ್ಲಿ ಜೋಳ, ಕಡಲೆ, ಸೂರ್ಯಕಾಂತಿ ಮುಂತಾದವುಗಳನ್ನು ಹೆಚ್ಚಾಗಿ ಬೆಳೆಯುತ್ತಾರೆ. ಕಡಲಬಾಳು ಗ್ರಾಮದಲ್ಲಿ ಅನೇಕ ಸಮುದಾಯಗಳಿದ್ದು ಬಹುತೇಕ ಸಮುದಾಯದವರು ವ್ಯವಸಾಯದಲ್ಲಿ ತೊಡಗಿದ್ದಾರೆ. ಇನ್ನು ಕೆಲವರು ಕೂಲಿ, ವ್ಯಾಪಾರ ಮಾಡಿ ತಮ್ಮ ಬದುಕನ್ನು ಸಾಗಿಸುತ್ತಾ ಇದ್ದಾರೆ. ಪ್ರತಿಯೊಂದು ಸಮುದಾಯದವರು ದೇವರ ಬಗ್ಗೆ ಅಪಾರ ನಂಬಿಕೆ ಇಟ್ಟಿದ್ದಾರೆ. ಕೆಲವರು ವೃತ್ತಿಯ ಜೊತೆಗೆ ನೌಕರಿ ಮಾಡುವವರಿದ್ದಾರೆ. ಬಹುತೇಕವಾಗಿ ಕಡಲಬಾಳು ಗ್ರಾಮದಲ್ಲಿ ಶಾಲೆಗೆ ಮಕ್ಕಳನ್ನು ಸೇರಿಸುವ ಪ್ರಯತ್ನ ಮಾಡುತ್ತಾರೆ. ಬಾಲಕರು ಮೀನುಹಿಡಿಯುವುದು, ವ್ಯಾಪಾರ, ಕೂಲಿ ವೃತ್ತಿಗಳಲ್ಲಿ ತೊಡಗಿಸಿ ಕೊಂಡಿದ್ದಾರೆ.

**ಕುಟುಂಬ ಪದ್ಧತಿ:** ಕುಟುಂಬವು ಸಮಾಜದ ಮೂಲಭೂತ ಮತ್ತು ಶಕ್ತಿಶಾಲಿಯಾದುದು. ಪ್ರಾಣಿಗಳಂತೆ ಬದುಕಿದ ಮಾನವ ಬರುಬರುತ್ತಾ ಕೌಟುಂಬಿಕ ಬದುಕನ್ನು ಆರಂಭಿಸಿ ಕುಟುಂಬದ ಪ್ರೀತಿಯಲ್ಲಿ ಭಾಗಿಯಾದನು. ಕುಟುಂಬವನ್ನು ಕುರಿತು ಅಧ್ಯಯನ ಮಾಡಿದ ಸಮಾಜ ವಿಜ್ಞಾನಿಗಳು ಇದೊಂದು ಮಾನವ ಸಮಾಜದ ಪ್ರಾಥಮಿಕ ಸಂಸ್ಥೆ ಎಂತಲೂ ಕರೆಯುತ್ತಾರೆ.

ನಾಗರಿಕತೆಗೆ ಸಮಾಜ ತಳಹದಿಯಾದರೆ, ಸಮಾಜಕ್ಕೆ ಕುಟುಂಬವೇ ಮೂಲ. ಕುಟುಂಬದ ಅಸ್ತಿತ್ವವಿಲ್ಲದೆ ಯಾವುದೇ ಸಮಾಜವನ್ನು ಊಹಿಸುವುದು ತುಂಬಾನೆ ಕಷ್ಟವಾಗಿದೆ. ಕೌಟುಂಬಿಕ ಸಂಸ್ಕೃತಿಯೇ ಸಮಾಜ ಮತ್ತು ದೇಶದ ಸಂಸ್ಕೃತಿಯಾಗುತ್ತದೆ.

ಕುಟುಂಬವೇ ಸಮಾಜದ ಮೂಲ. ಸಾಮಾಜಿಕ ಸಂಸ್ಥೆಗಳಲ್ಲಿ ಕುಟುಂಬ ಚಿಕ್ಕ ಸಂಸ್ಥೆ. ಇದು ಇತರ ಎಲ್ಲಾ ಸಂಸ್ಥೆಗಳಿಗೂ ಮೂಲ. ಏಕೆಂದರೆ ಇತರ ಎಲ್ಲಾ ಸಂಸ್ಥೆಗಳು ನಿಂತಿರುವುದು ಕುಟುಂಬದ ಆಧಾರದ ಮೇಲೆ. ಅದು ತನ್ನ ಸದಸ್ಯರ ಬಲಸತ್ವವನ್ನು ಪಡೆಯುವುದು ಕುಟುಂಬದಿಂದ. ಅಲ್ಲದೆ ಅದು ಎಲ್ಲಾ ಸಮಾಜಗಳಿಗೂ ಸರ್ವಸಾಮಾನ್ಯವಾದುದು. ಮಕ್ಕಳ ಆಟಕ್ಕೆ ಪಾಠಕ್ಕೆ, ಧಾರ್ಮಿಕ ಬೆಳವಣಿಗೆಗೆ ಶಿಸ್ತನ್ನು ಪಾಲಿಸುವ ಅಭ್ಯಾಸಕ್ಕೆ ಕುಟುಂಬವು ಮೂಲಕೇಂದ್ರವಾಗಿದೆ.

ಸಮಾಜದಲ್ಲಿರುವ ಎಲ್ಲಾ ಸಂಸ್ಥೆಗಳು, ಪಂಗಡಗಳು, ವೃತ್ತಿಗಳು ಎಲ್ಲಾ ರೀತಿ–ನೀತಿಗಳೂ ಜೀವನದ ಎಲ್ಲಾ ಅವಸ್ಥೆಗಳಿಗೂ ಎಲ್ಲಾ ಆಶ್ರಯಗಳು, ಸಂಬಂಧಗಳು ಹುಟ್ಟು ಪಡೆದಿರುವುದು ಕುಟುಂಬದಿಂದ. ತನ್ನವರು ಬೇರೆಯವರು ಸಮುದಾಯ, ಪರಸಮುದಾಯ, ಸ್ವಬಳಗ, ನೆರೆಹೊರೆ, ರಕ್ತಸಂಬಂಧ, ಬಂಧುಬಳಗ, ಸ್ನೇಹಿತರು, ಶತ್ರುಗಳು, ದಾಸ, ಧಣಿ, ಧನಿಕ, ದರಿದ್ರ, ಸೇವಕ, ಸಹದ್ಯೋಗಿ ಮುಂತಾದ ಸಾಮಾಜಿಕ ಭೇದಗಳು ಹುಟ್ಟಿರುವುದು ಕುಟುಂಬ ಜೀವನದಿಂದ. ಮನೆ–ಮಠ, ತೋಟ–ತುಡಿಕೆ, ಹಣ–ಆಸ್ತಿ, ಕೃಷಿ, ವ್ಯಾಪಾರ, ಕೈಗಾರಿಕೆ ಮುಂತಾದ ಜೀವನ ಮಾರ್ಗಗಳು ಉದ್ಯಮಿಗಳು, ಕುಲಕಸುಬಿನವರು, ಕೋಮಿನವರು, ಹುಟ್ಟಿರುವುದು ಕುಟುಂಬ ಜೀವನದಿಂದ. ತಂದೆ–ತಾಯಿ, ಮಗ–ಸೊಸೆ, ಮಗಳು–ಅಳಿಯ, ಮಾವ–ಅತ್ತೆ, ಅಜ್ಜ–ಅಜ್ಜಿ, ಅಣ್ಣ–ತಮ್ಮ, ಅಕ್ಕ–ತಂಗಿ ಮುಂತಾದ ಬಾಂಧವ್ಯಗಳು ಹುಟ್ಟಿರುವುದು ಕುಟುಂಬ ಜೀವನದಿಂದ.

"ಮೆಕೈವರ್‌ಪೇಜ್' ಅವರ ಪ್ರಕಾರ ಕುಟುಂಬವು ಲೈಂಗಿಕ ಸಂಬಂಧದಿಂದ ಸೃಷ್ಟಿಪಡಿಸಲ್ಪಟ್ಟು ಖಚಿತವಾದ ಮಕ್ಕಳನ್ನು ಪಡೆಯಲು ಮತ್ತು ಪೋಷಿಸಲು ಅವಕಾಶ ಮಾಡಿಕೊಡುವಂತಹ ಒಂದು ಸಾಮಾಜಿಕ ಸಂಸ್ಥೆ ಎಂದಿದ್ದಾರೆ. **'ಸಮ್ನರ್ ಮತ್ತು ಕೆಲ್ಲರ್'** ಇವರ ಹೇಳಿಕೆ ಪ್ರಕಾರ "ರಕ್ತ ಸಂಬಂಧಗಳಿಂದ ಕೂಡಿದ ಕನಿಷ್ಠ ಎರಡು ತಲೆಮಾರುಗಳನ್ನು ಒಳಗೊಂಡಿರುವ

ಅತಿಸೂಕ್ಷ್ಮ ವಾದಂತಹ ಸಾಮಾಜಿಕ ಸಂಘಟನೆಯೇ ಕುಟುಂಬ" ಎಂದಿದ್ದಾರೆ. **'ಈಲಿಯಟ್ ಮೆರಿಲ್'**ರವರ ಪ್ರಕಾರ "ಕುಟುಂಬ ಜೈವಿಕ ಘಟಕವಾಗಿದ್ದು, ಗಂಡ-ಹೆಂಡತಿ ಮಕ್ಕಳನ್ನು ಒಳಗೊಂಡಿರುತ್ತಿದೆ. ಅಂದರೆ ಕುಟುಂಬವು ಒಂದು ಚಿಕ್ಕ ಘಟಕವಾಗಿದ್ದು, ಸಂಸಾರಿಕ ರೂಪದಲ್ಲಿ ಗಂಡ-ಹೆಂಡತಿಯರಲ್ಲಿ ವಂಶಾಭಿವೃದ್ಧಿಯ ಜೊತೆಗೆ ಲೈಂಗಿಕ ಭಾಂದವ್ಯಗಳನ್ನು ರೂಪಿಸುವಂತಹ ಗುಣ-ಲಕ್ಷಣಗಳನ್ನು ಹೊಂದಿ, ಸಮಾಜದ ಎಲ್ಲ ಪ್ರಕಾರಗಳಲ್ಲಿ ಒಂದು ಸಂಸ್ಥೆಯಾಗಿ ಕಾರ್ಯನಿರ್ವಹಿಸು ವುದಕ್ಕೆ ಕುಟುಂಬ ಎಂದಿದ್ದಾರೆ."[೧] ಕಡಲಬಾಳು ಗ್ರಾಮದ ಕುಟುಂಬದಲ್ಲಿ ಹಲವಾರು ರೀತಿಯಾದ ಪ್ರಕಾರಗಳನ್ನು ಕಾಣಬಹುದಾಗಿದೆ. ಅವಿಭಕ್ತ ಕುಟುಂಬ, ವಿಭಕ್ತಿ ಕುಟುಂಬ, ಪಿತೃ ಪ್ರಧಾನ, ಮಾತೃ ಪ್ರಧಾನ, ರಕ್ತ ಸಂಬಂಧಿಗಳ, ಗಂಡ-ಹೆಂಡತಿಯರ ಕುಟುಂಬ, ಏಕಪತ್ನಿ ಕುಟುಂಬ, ಬಹುಪತ್ನಿತ್ವ ಕುಟುಂಬಗಳು ಹೀಗೆ ಹಲವು ರೀತಿಯ ಪ್ರಕಾರಗಳನ್ನು ಕಾಣಬಹುದಾಗಿದೆ.

**ಅವಿಭಕ್ತ ಕುಟುಂಬ:** ಕುಟುಂಬದ ಪ್ರಕಾರಗಳಲ್ಲಿ ಅವಿಭಕ್ತ ಕುಟುಂಬವು ಒಂದಾಗಿದೆ. ಇದು ತಂದೆಯು ಸೇರಿ ೨-೩ ತಲೆಮಾರಿನ ಜನರನ್ನು ಒಳಗೊಂಡಿರುತ್ತದೆ. ಇಲ್ಲಿ ಅಜ್ಜ-ಅಜ್ಜಿ ತಂದೆ-ತಾಯಿ, ಮಕ್ಕಳು, ಅಣ್ಣ-ತಮ್ಮಂದಿರು, ಮೊಮ್ಮಕ್ಕಳು-ಮಕ್ಕಳು, ಮರಿಮಕ್ಕಳು ಹೀಗೆ ಹಲವು ತಲೆಮಾರಿನ ರಕ್ತ ಸಂಬಂಧವಿರುತ್ತದೆ. ಕುಟುಂಬದ ಸಂಖ್ಯೆ ಹೆಚ್ಚಾದಷ್ಟು ಉತ್ಪಾದನೆ ಹೆಚ್ಚಾಗುತ್ತದೆ. ಇಲ್ಲಿಯ ಸುಖ ಸಂಬಂಧ ನಾನಾ ರೀತಿಯಾಗಿದ್ದು, ಪ್ರೀತಿ-ವಾತ್ಸಲ್ಯ ಸಂಬಂಧವು ಅತಿ ಮುಖ್ಯವಾಗಿರುತ್ತದೆ. ಇತ್ತೀಚಿನ ದಿನಗಳಲ್ಲಿ ಕೂಡಿಕೊಂಡು ಸಾಮಾಜಿಕ ಬದುಕಿನಲ್ಲಿ ಬಾಳುವವರು ಅತಿ ವಿರಳವಾಗಿದ್ದಾರೆ. ಪ್ರತಿಯೊಂದು ಸಮುದಾಯವು ಸಾಮಾನ್ಯವಾಗಿ ಪರಿಸರದ ಪದ್ಧತಿ ಪರಿತಪಿಸಿದಂತೆ ಅನುಗುಣವಾಗಿ ಬದಲಾವಣೆಯಾಗುವುದು ಅತಿಮುಖ್ಯವಾಗಿ ರುತ್ತದೆ. ಪ್ರಮುಖವಾಗಿ ಪುರುಷ ಪ್ರಧಾನ ಕುಟುಂಬ ಅತೀ ಪ್ರಧಾನವಾಗಿರುತ್ತದೆ. ಕುಟುಂಬದವರ ಮೇಲೆ ಅಧಿಕಾರವನ್ನು ನಡೆಸುತ್ತಾನೆ. ಸ್ತ್ರೀ ಸಹಜವಾಗಿ ಮನೆಯಲ್ಲಿಯೇ ಕೆಲಸ ಮಾಡುತ್ತಾಳೆ.

೧. ಅವಿಭಕ್ತ ಕುಟುಂಬ

೨. ವಿಭಕ್ತಿ ಕುಟುಂಬ

೩. ಪಿತೃ ಪ್ರಧಾನ ಕುಟುಂಬ

೪. ಮಾತೃ ಪ್ರಧಾನ ಕುಟುಂಬ

ಕಡಲಬಾಳು ಗ್ರಾಮದಲ್ಲಿ ಸಂಬೋಧನೆಗಳು ಎರಡು ಮುಖ್ಯ ವಲಯದಲ್ಲಿ ನಿರ್ಧಾರವಾಗುತ್ತವೆ. ಒಂದು ವೈಯಕ್ತಿಕ ವಲಯ, ಮತ್ತೊಂದು ಸಾಮಾಜಿಕ ವಲಯದಲ್ಲಿ. ಹೆತ್ತವರು ಒಡಹುಟ್ಟಿದವರು, ಮದುವೆಯಾದವರು ಮೊದಲಾದ ಹಿರಿಯ, ಕಿರಿಯರಾಗಿದ್ದು

ಇಲ್ಲಿ ಸಂಬಂಧ ಹಾಗೂ ವಯೋಮಾನ ಸಂಬೋಧನೆಗೆ ಮಾನದಂಡಗಳಾಗಿದ್ದು, ಸಮಾನ ವಲಯದಲ್ಲಿ ವಯಸ್ಸು, ಸಮುದಾಯ ಹಾಗೂ ಅಂತಸ್ತು ಮುಖ್ಯವಾಗಿವೆ.

ಪ್ರಸ್ತುತ ಪ್ರದೇಶದಲ್ಲಿ ಪಿತೃ ಪ್ರಧಾನ ಕುಟುಂಬ ಬಹುಮಟ್ಟಿಗೆ ಅಸ್ತಿತ್ವದಲ್ಲಿರುವುದನ್ನು ಕಾಣಬಹುದು. ಪಿತೃಮೂಲಿಯ ವ್ಯವಸ್ಥೆ ಹಲವು ಅರ್ಥಗಳಲ್ಲಿ ವ್ಯವಸ್ಥೆ. ಆಸ್ತಿಯ ಕೇಂದ್ರೀಕರಣ ಬೇಸಾಯದ ಪ್ರಗತಿ, ಅಧಿಕಾರದ ಸರ್ವಾಧಿಕಾರ, ಕೈಗಾರಿಕೆ ಮತ್ತು ತಾಂತ್ರಿಕ ಬೆಳವಣಿಗೆ ಮತ್ತು ಅವುಗಳಲ್ಲಿನ ನೈಪುಣ್ಯತೆಗಳು ಸ್ತ್ರೀಯ ಪ್ರಾಮುಖ್ಯತೆಯನ್ನು ಕುಗ್ಗಿಸಿ, ಪಿತೃ ಪ್ರಧಾನ ಕುಟುಂಬದ ಹುಟ್ಟಿಗೆ ಕಾರಣವೆಂದು ಹಲವು ಮಾನವಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ. ಪ್ರಾಚೀನ ಕಾಲದಲ್ಲಿ ಮಾತೃ ಪ್ರಧಾನ ಕುಟುಂಬಗಳೇ ಇದ್ದವು. ಇಷ್ಟಿದ್ದರೂ ಕೂಡ ಸಂಸಾರದ ಒಳಗೆ ಮಾತೃಗಳನ್ನು ಅಲ್ಲಗೆಳೆಯುವ ಹಾಗಿಲ್ಲ.

ಪಿತೃಪ್ರಧಾನ ಕುಟುಂಬದಲ್ಲಿ ಹಿರಿಯ ಪುರುಷನೇ ಮನೆಯ ಯಜಮಾನ. ನಿರಂಕುಶ ಪ್ರಭು, ಸರ್ವಾಧಿಕಾರಿಯಾಗಿದ್ದಾನೆ. ತನಗೆ ಇಷ್ಟಬಂದ ರೀತಿಯಲ್ಲಿ ನಡೆದುಕೊಳ್ಳುವ ಹಕ್ಕು ಆತನಿಗೆ ಇದೆ. ಕುಟುಂಬಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳಿಗೆ ಅವನದೇ ಅಂತಿಮ ತೀರ್ಮಾನ. ಆರ್ಥಿಕ, ರಾಜಕೀಯ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಆತನಿಗೆ ಸ್ವತಂತ್ರವಾದ ಅಧಿಕಾರವಿರುತ್ತದೆ. ಹಾಗೆಂದ ಮಾತ್ರಕ್ಕೆ ಇಲ್ಲಿನ ಕುಟುಂಬಗಳಲ್ಲಿ ಮನೆಯ ಯಜಮಾನ ತನ್ನ ಅಧಿಕಾರವನ್ನು ದುರುಪಯೋಗ ಪಡಿಸುತ್ತಿದ್ದನೆಂದಲ್ಲ. ಇಲ್ಲಿ ಕೆಲವು ವಿಷಯಗಳಲ್ಲಿ ಮಹಿಳೆಯರ ಪಾಲು ಇದ್ದೇ ಇದೆ.

ಪಿತೃಪ್ರಧಾನ ಕುಟುಂಬಗಳಲ್ಲಿ ಮಕ್ಕಳು ತಂದೆಯ ವಂಶಕ್ಕೆ ಸೇರುತ್ತಾರೆ. ಆದಕಾರಣ ಮಕ್ಕಳು ಹುಟ್ಟಿದ ನಂತರ ತಮ್ಮ ತಂದೆಯ ಮನೆತನದ ಹೆಸರಿಡುವಲ್ಲಿ ಇಲ್ಲಿ ಇಂದಿಗೂ ಉಳಿದುಬಂದಿದೆ. ಕುಟುಂಬದ ಆಸ್ತಿಯಲ್ಲಿ ಗಂಡುಮಕ್ಕಳಿಗೆ ಮಾತ್ರ ಪಾಲು ಪಡೆಯುವ ಹಕ್ಕಿರುತ್ತದೆ. ಇತ್ತೀಚೆಗೆ ನ್ಯಾಯಾಲಯವು ನೀಡಿರುವ ತೀರ್ಪಿನ ಪ್ರಕಾರ ಹೆಣ್ಣುಮಕ್ಕಳಿಗೆ ಆಸ್ತಿಯಲ್ಲಿ ಹಕ್ಕಿದೆ ಎಂಬ ಹಿನ್ನೆಲೆಯಲ್ಲಿ ಹೆಣ್ಣುಮಕ್ಕಳಿಗೆ ಆಸ್ತಿಯನ್ನು ನೀಡುವುದರಿಂದಲೂ ಹೆಚ್ಚು ಗಂಡುಮಕ್ಕಳ ಕಡೆಗೆ ಒಲವು ಮತ್ತು ಬಲವಿರುವುದನ್ನು ಕಾಣಬಹುದು. ಆನುವಂಶೀಯ ಅಧಿಕಾರ ಮತ್ತು ಸ್ಥಾನಮಾನಗಳು ಗಂಡು ಸಂತತಿಗೆ ಮೀಸಲಾಗಿರುತ್ತವೆ. ಇಲ್ಲಿನ ಹೆಣ್ಣುಮಕ್ಕಳು ವಿವಾಹವಾದ ಮೇಲೆ ಆಕೆಯ ಗಂಡನ ಮನೆಯಲ್ಲಿ ವಾಸಿಸುತ್ತಾರೆ. 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎಂಬ ಗಾದೆ ಇಲ್ಲಿನ ಕುಟುಂಬಕ್ಕೆ ಸರಿ ಹೋಗುತ್ತದೆ.

"ಪ್ರಸ್ತುತ ಸಂದರ್ಭದಲ್ಲಿ ವಿಭಕ್ತ ಕುಟುಂಬಗಳೇ ಹೆಚ್ಚಾಗಿ ಕಂಡುಬರುತ್ತವೆ. ಗಂಡ–ಹೆಂಡತಿ ಮತ್ತು ಅವರ ಮಕ್ಕಳು ಒಂದೇ ಮನೆಯಲ್ಲಿ ವಾಸವಾಗಿರುವ ವಿಭಕ್ತ ಕುಟುಂಬವೇ

ಸರಳ ಕುಟುಂಬವಾಗಿದೆ. ಇದನ್ನು ದಾಂಪತ್ಯ ಕುಟುಂಬವೆಂದು ಕರೆಯುತ್ತಾರೆ. ಗ್ರಾಮೀಣ ವ್ಯವಸಾಯ ಮತ್ತು ಗೃಹ ಕೈಗಾರಿಕೆಗಳ ಕ್ಷೀಣಿಸುವಿಕೆ, ಶೈಕ್ಷಣಿಕ, ವೈಜ್ಞಾನಿಕ ಮತ್ತು ತಾಂತ್ರಿಕ ಪ್ರಗತಿಯಿಂದ ಕೈಗಾರಿಕೀಕರಣ, ಸ್ತ್ರೀಯರ ಶಿಕ್ಷಣ ಮತ್ತು ಆರ್ಥಿಕ ಸ್ವಾತಂತ್ರ್ಯ, ಪಾಶ್ಚಿಮಾತ್ಯ ಸಂಸ್ಕೃತಿಗಳ ಪ್ರಭಾವ ಪ್ರಜಾಪ್ರಭುತ್ವ ಆಧುನಿಕತೆಯಿಂದ ಮತ್ತು ಕಾಯಿದೆಗಳು ಮುಂತಾದ ಅಂಶಗಳು ಸರಳ ಕುಟುಂಬದ ರಚನೆಗೆ ಕಾರಣವಾಗಿವೆ. ಅಲ್ಲದೆ ವೈಜ್ಞಾನಿಕ ಮತ್ತು ತಾಂತ್ರಿಕ ಪ್ರಗತಿ, ಸಾರಿಗೆ ಸಂಪರ್ಕ, ಶಿಕ್ಷಣದಲ್ಲಿನ ಪ್ರಗತಿ, ಆರೋಗ್ಯ ಹೆಚ್ಚಳ ಮುಂತಾದ ವಾಸ್ತವವಾದ ಬೆಳವಣಿಗೆಗಳು ಸಹ ಸರಳ ಕುಟುಂಬ ರಚನೆಗೆ ಪೂರಕವಾಗಿವೆ. ರಾಜ್ಯದ ರಾಜಧಾನಿ ಬೆಂಗಳೂರು ಪ್ರಸ್ತುತ ಸಂದರ್ಭಕ್ಕೆ ಹತ್ತಿರವಾಗಿದ್ದು, ಇದರ ಸಂಪರ್ಕ ಹೆಚ್ಚಾಗಿದ್ದು, ನಗರೀಕರಣದ ಪ್ರಭಾವ ಕೂಡ ಈ ಪ್ರದೇಶದ ಮೇಲಾಗಿದ್ದು, ವಿಭಕ್ತ ಕುಟುಂಬಗಳ ರಚನೆಗೆ ಕಾರಣವಾಗಿದೆ."[೨]

ಇಲ್ಲಿ ಕುಟುಂಬದೊಳಗೆ ಒಬ್ಬರನೊಬ್ಬರು ಸಂಬೋಧಿಸುವುದನ್ನು ಕಾಣುತ್ತೇವೆ. ಸಂಬೋಧನೆಗಳು ವ್ಯಕ್ತಿ ಸಂದರ್ಭವನ್ನಷ್ಟೇ ಅಲ್ಲ ಆತನ ಸ್ವಾತಂತ್ರ್ಯವನ್ನು ಸೂಚಿಸುತ್ತವೆ. ಬದಲಾದ ಕಾಲಮಾನಕ್ಕನುಗುಣವಾಗಿ ಸಂಬೋಧಿಸುವ ರೀತಿಯೂ ಬದಲಾಗುತ್ತದೆ. ಕಡಲಬಾಳು ಪರಿಸರದಲ್ಲಿ ವೈಯಕ್ತಿಕವಾಗಿ ಮತ್ತು ಸಾಮಾಜಿಕವಾಗಿ ಸಂಬೋಧನೆಗಳನ್ನು ಮಾಡುತ್ತಾರೆ. ವೈಯಕ್ತಿಕ ವಲಯದಲ್ಲಿ ಹೆತ್ತವರು, ಒಡಹುಟ್ಟಿದವರು, ಮದುವೆಯಾದವರು ಮೊದಲಾದ ಹಿರಿಯ-ಕಿರಿಯರಾಗಿದ್ದು, ಇಲ್ಲಿ ಸಂಬಂಧ ಹಾಗೂ ವಯೋಮಾನ ಸಂಬೋಧನೆ ಮಾನದಂಡಗಳಾಗಿದ್ದರು ಸಹ ಸಾಮಾಜಿಕ ವಲಯದಲ್ಲಿ ಸಮುದಾಯ ಹಾಗೂ ಅಂತಸ್ತುಗಳು ಮುಖ್ಯ ಪಾತ್ರವಹಿಸುತ್ತದೆ.

## ವಿವಾಹ ಪದ್ಧತಿ

ವಿವಾಹ ಮತ್ತು ಕುಟುಂಬ ಯಾವುದೇ ಸಮಾಜದ ಮೂಲಭೂತ ಅವಶ್ಯ ಮತ್ತು ಅನಿವಾರ್ಯ ಸಂಸ್ಥೆಗಳು. ಅವು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಪರಸ್ಪರ ಸ್ತ್ರೀ-ಪುರುಷ ಈ ಎರಡೂ ಸಂಸ್ಥೆಗಳ ಆಧಾರ ಘಟಕಗಳು. ಕುಟುಂಬದ ವ್ಯವಸ್ಥೆಗೆ ವಿವಾಹವೇ ಹೆಬ್ಬಾಗಿಲು. ವಿವಾಹ ಸಂಸ್ಥೆಗೆ ಕುಟುಂಬ ಪದ್ಧತಿಯೇ ಅಡಿಗಲ್ಲು. ಇವು ಸಾಮಾಜಿಕವಾಗಿ ಬಹಳ ಪ್ರಾಮುಖ್ಯತೆ ಗಳಿಸುವ ಸಂಸ್ಥೆಗಳು. ಸ್ತ್ರೀ-ಪುರುಷರಿಗೆ ಏರ್ಪಡುವ ಮತ್ತು ಸಾಮಾಜಿಕ ಸಂಬಂಧದಲ್ಲಿ ವಿವಾಹ ಬಹುಮುಖ್ಯ ಪಾತ್ರವಹಿಸುತ್ತದೆ. ಈ ಸಂಬಂಧ ನಿರ್ದಿಷ್ಟ ಧಾರ್ಮಿಕ ಮತ್ತು ಸಾಮಾಜಿಕ ಕಟ್ಟುಪಾಡುಗಳು, ವಿಧಿ ಆಚರಣೆಗಳ ಮೂಲಕ ಸಾಧ್ಯವಾಗಿರುತ್ತದೆ. ಸ್ತ್ರೀ ಪುರುಷರ ವೈಯಕ್ತಿಕ ಹಾಗೂ ಸಾಮಾಜಿಕ ಹಿತಕ್ಕಾಗಿ ಜರುಗುವ ಸಂಯೋಗವೇ ವಿವಾಹ. ಮಾನವ ಸಮಾಜದಲ್ಲಿ ಮಾತ್ರ ಕಂಡುಬರುವ ಈ ಪ್ರಬಲ ಸಂಸ್ಥೆ ವಿಶಿಷ್ಟವಾದುದು.

ಭಾರತದ ಇತಿಹಾಸ ಪೂರ್ವದ ಆದಿ ಮಾನವನಿಗೆ ಕುಟುಂಬ, ವಿವಾಹ ಸಂಸ್ಥೆ ವಿಷಯಗಳ ಬಗ್ಗೆ ಯಾವುದೇ ಕಲ್ಪನೆ ಇರಲಿಲ್ಲ. ಪ್ರಾಣಿಗಳಲ್ಲಿರುವಂತೆ ಕೇವಲ ಲೈಂಗಿಕ ಪ್ರವೃತ್ತಿಯಷ್ಟೆ ಜೀವನದ ನಿರಂತರತೆ ಸಂತಾನಾಭಿವೃದ್ಧಿಗೆ ಕಾರಣವಾಯಿತು. ಆದಿಮಾನವ ಒಂದೆಡೆ ನೆಲೆನಿಂತು ಕಣ್ಣು ತೆರೆದು ಪ್ರಕೃತಿಯ ರಹಸ್ಯವನ್ನು ಭೇದಿಸಲು ಅರಿತಾಗ ಸಂಸ್ಕೃತಿ ಮತ್ತು ನಾಗರಿಕತೆ ಪ್ರಾರಂಭವಾಯಿತು. ಅದು ಸ್ತ್ರೀ-ಪುರುಷರ ಜೊತೆಗೆ ಬಾಳಲು, ಬದುಕನ್ನು ಸಾಗಿಸಲು ಬೆಳವಣಿಗೆ ಹಂತದಲ್ಲಿ ಸ್ತ್ರೀ-ಪುರುಷರ ಸಾಮಾಜಿಕ ಬಂಧುತ್ವ ಕ್ರಮೇಣವಾದ ಧಾರ್ಮಿಕ ನಂಬಿಕೆ ಕಲ್ಪನೆಗಳು ಬೆರೆತು ವಿವಾಹ ಪದ್ಧತಿಗೆ ಹೊಸದಾದ ಆಯಾಮ ದೊರೆಯಿತು. ಸ್ತ್ರೀ-ಪುರುಷ ತಮ್ಮ ದಾಂಪತ್ಯ ಬದುಕಿಗಾಗಿ ಸಮಾಜದ ಸಮ್ಮತಿ ಅಂಗೀಕಾರವನ್ನು ಧರ್ಮಸಮ್ಮತವಾದ ವಿವಾಹ ಸಂಸ್ಕಾರಗಳ ಮೂಲಕ ಪಡೆಯತೊಡಗಿದರು. ವಿವಾಹವನ್ನು ನಾವು ಸಂಸ್ಕಾರದ ಪ್ರಜ್ಞೆಯಿಂದ, ವಿವಿಧ ಕಲಾಪಗಳಿಂದ, ಧಾರ್ಮಿಕ ವಿಧಿ-ನಿಷೇಧಗಳನ್ನು ಆಚರಿಸುವುದೇ ಭಾರತೀಯ ಪರಿಸರದಲ್ಲಿನ ವಿವಾಹ ಪದ್ಧತಿಗಳಲ್ಲಿ ಹಲವು ವೈವಿಧ್ಯಪೂರ್ಣವಾಗಿವೆ. ವಿವಾಹದ ಮುಂಚೆನೇ ನಡೆಸುವ ವಿವಾಹದ ವಿಧಿಗಳ ಸಿದ್ಧತೆಗಳು ವಿವಾಹಕ್ಕೆ ಬೇಕಾದ ಕೆಲವು ಅಗತ್ಯಗಳು ವಧು-ವರರ ವಯೋಮಾನ, ವಧು-ವರರ ಲಕ್ಷಣ ಮತ್ತು ಆಯ್ಕೆಯ ಕ್ರಮ, ಹೆಣ್ಣು ಕೇಳುವ ಕ್ರಮ, ನಿಶ್ಚಿತಾರ್ಥ ನಂತರ ವಿವಾಹದ ದಿನ, ಮದುವೆ ಮಂಟಪ, ಅದರ ಅಲಂಕಾರ ಹೆಣ್ಣು-ಗಂಡುಗಳನ್ನು ಕರೆತರುವುದು, ದೇವರ ತರುವುದು, ಚಪ್ಪರ, ಧಾರಾಮೂಹರ್ತ, ಆರತಕ್ಷತೆ ನಂತರ ಬೀಗರ ಊಟ ಮುಂತಾದ ಆಚರಣೆಗಳು ವಿವಾಹ ಎಂಬ ಬಂಧನಕ್ಕೆ ಒಳಗಾಗುವ ಮುನ್ನ ನಡೆಯುವ ಸಾಂಪ್ರದಾಯಿಕ ಆಚರಣೆಗಳಾಗಿವೆ.

ವಿವಾಹಕ್ಕೆ ಮೊದಲು ಹೆಣ್ಣು-ಗಂಡುಗಳ ವಿವಾಹದ ವಯಸ್ಸನ್ನು ನಿರ್ಧರಿಸುವುದು ಸಾಮಾನ್ಯ ರೂಢಿಯಲ್ಲಿದೆ. ಕಾರಣ ಬಾಲ್ಯ ವಿವಾಹ ಪದ್ಧತಿಯಂತಹ ಆಚರಣೆಗಳನ್ನು ತಡೆಯುವಲ್ಲಿ ಸಂವಿಧಾನ ಕಾನೂನುಗಳನ್ನು ರೂಪಿಸಿದೆ. ಗಂಡಿಗೆ ಇಪ್ಪತ್ತೊಂದು ವರ್ಷ, ಹೆಣ್ಣಿಗೆ ಹದಿನೆಂಟು ವರ್ಷ ವಯಸ್ಸಾಗಿರಬೇಕು ನಂತರ ಮದುವೆ ನಿಶ್ಚಿಯಿಸುವುದು ಸಾಮಾನ್ಯವಾಗಿದೆ. ಇದು ಗಂಡು-ಹೆಣ್ಣುಗಳ ಕನಿಷ್ಠ ವಯಸ್ಸಾಗಿದ್ದು, ಈ ವಯಸ್ಸು ದಾಟಿದ ನಂತರವೇ ಬಹುತೇಕ ವಿವಾಹ ನಿಶ್ಚಯವಾಗುವುದು. ಪ್ರಾಚೀನ ಕಾಲದಿಂದಲೂ ಸಾಮಾನ್ಯವಾಗಿ ಗಂಡು-ಹೆಣ್ಣುಗಳ ಕನಿಷ್ಠ ವಯಸ್ಸಾಗಿದ್ದವರು ಮಾತ್ರ ಮತ್ತೆ ಈ ವಯಸ್ಸನ್ನು ದಾಟಿರಬಾರದು. ಕೆಲವೊಂದು ಬಾರಿ ಈ ರೀತಿ ವಯಸ್ಸು ದಾಟಿದವರೂ ವಿವಾಹ ಮಾಡಿಕೊಂಡು ಜೀವನವನ್ನು ನಡೆಸುತ್ತಾರೆ. ವಧು-ವರರ ಆಯ್ಕೆ ಮಾಡುವಲ್ಲಿ ಅವರ ಗುಣಲಕ್ಷಣ, ಎತ್ತರ, ಆಕಾರ ಈ ಎಲ್ಲಾ ಅಂಶಗಳನ್ನು ಗಮನಿಸುತ್ತಾರೆ. ವಧುವಿಗೂ ವರನಿಗೂ ಸರಿಯಾಗಿ ಹೊಂದಾಣಿಕೆಯಾದಾಗ

ಮಾತ್ರವೇ ಒಪ್ಪಿಗೆಯನ್ನು ಸೂಚಿಸಲಾಗುತ್ತದೆ. ಪ್ರಾಚೀನ ಕಾಲದಿಂದಲೂ ಮನೆಯ ಹಿರಿಯರ ತೀರ್ಮಾನವೇ ಅಂತಿಮವಾಗಿತ್ತು. ಹುಡುಗ-ಹುಡುಗಿಯರ ಒಪ್ಪಿಗೆಯ ನಂತರವೇ ಮುಂದಿನ ಕಾರ್ಯಗಳನ್ನು ಮಾಡುವರು. ಆದ್ದರಿಂದ ವಧು-ವರರ ಪಾತ್ರವೂ ಸಹ ಬಹು ಮುಖ್ಯವಾಗಿದೆ. ಸಂಪ್ರದಾಯದ ಪ್ರಕಾರವೇ ಹುಡುಗ-ಹುಡುಗಿ ಒಪ್ಪಿದರೂ, ಕುಲ ಗೋತ್ರಕ್ಕೆ ಹೆಚ್ಚಾಗಿ ಪ್ರಾಶಸ್ತ್ಯತೆ ಕೊಡುವುದು ಇಂದಿಗೂ ಉಳಿದುಬಂದಿದೆ. ಇವರಿಬ್ಬರ ಕುಲ ಬೇರೆಯಾಗಿದ್ದರೆ ಮಾತ್ರ ವಿವಾಹ ಸಂಬಂಧವು ಏರ್ಪಡುತ್ತದೆ. ಕಡಲಬಾಳು ಗ್ರಾಮದ ಎಲ್ಲ ಸಮುದಾಯಗಳಲ್ಲಿ ತಮ್ಮ-ತಮ್ಮ ಸಮುದಾಯದೊಳಗೆ ವಿವಾಹವಾಗುವುದನ್ನು ನಾವು ಸಾಮಾನ್ಯವಾದ ಸಂಗತಿಯೆಂದು ಹೇಳಬಹುದಾಗಿದೆ. ವಿವಾಹ ಪದ್ಧತಿಯಲ್ಲಿ ಅವರ ಲಕ್ಷಣ-ಯೋಗ್ಯತೆ, ಅರ್ಹತೆ, ನಡತೆ, ಸಮುದಾಯ, ಕುಲ ಮುಂತಾದವುಗಳನ್ನು ಪರಿಗಣಿಸುತ್ತಾರೆ.

ಕಾಮ, ಆಹಾರ, ನಿದ್ರೆಗಳಷ್ಟೆ ಪ್ರಮುಖವಾದುದು. ಮೂಲಭೂತ ಪ್ರವೃತ್ತಿಯಾದ ಕಾಮ ಕೂಡ ಮನುಷ್ಯನಿಗೆ ಪ್ರಬಲ ಹಾಗೂ ಸಹಜವಾದುದು. ಇದು ಒಂದು ಕಾಲದಲ್ಲಿ ಲೈಂಗಿಕ ಸ್ವಚ್ಛಂದತೆಗೆ ಕಾರಣವಾಗಿತ್ತು. ಆದರೆ ವಿವಾಹ ಸಂಸ್ಥೆ ರೂಪುಗೊಂಡ ಮೇಲೆ ಸ್ವಚ್ಛಂದತೆಗೆ ಕಡಿವಾಣ ಬಿತ್ತು. ತದನಂತರ ಸ್ತ್ರೀಪುರುಷರು ತಮ್ಮ ದಾಂಪತ್ಯ ಬದುಕಿಗಾಗಿ ಸಮಾಜ ಸಮ್ಮತಿ ಅಥವಾ ಅಂಗೀಕಾರವನ್ನು ಧರ್ಮಸಮ್ಮತವಾಗಿ ವಿವಾಹ ಸಂಸ್ಕಾರದ ಮೂಲಕ ಪಡೆಯತೊಡಗಿದರು. ಹೀಗಾಗಿ ವಿವಾಹ ಧಾರ್ಮಿಕ ಪರವಾನಗಿ ಮುದ್ರೆಯನ್ನು ಪಡೆದುಕೊಂಡಿತು.

"ಭಾರತೀಯರಿಗೆ ವಿವಾಹ ಧಾರ್ಮಿಕ ಸಂಸ್ಥೆಯೂ ಹೌದು, ಸಾಮಾಜಿಕ ಸಂಸ್ಥೆಯೂ ಹೌದು. ಹದಿನಾರು ಸಂಸ್ಕಾರಗಳಲ್ಲಿ ವಿವಾಹವು ಒಂದು ಮುಖ್ಯ ಸಂಸ್ಕಾರ. ಸ್ತ್ರೀ ವಿವಾಹದಿಂದಲೇ ಸಂಸಾರ ವಿಧಿ ಪ್ರಾರಂಭವಾಗುವುದು. ಬ್ರಹ್ಮಚರ್ಯ, ಸಂನ್ಯಾಸ, ವಾನಪ್ರಸ್ಥ ಮುಂತಾದ ಆಶ್ರಮಗಳಿಗೆ ಗೃಹಸ್ಥಾಶ್ರಮವೇ ಅಡಿಗಲ್ಲಾದರೆ, ಗೃಹಾಶ್ರಮಕ್ಕೆ ವಿವಾಹವೇ ಅಡಿಗಲ್ಲು. ಆದ್ದರಿಂದ ಮನುಷ್ಯ ಸಮಾಜದ ವಿವಾಹ ಪದ್ಧತಿಯ ಅಧ್ಯಯನ ಕುತೂಹಲ ಮತ್ತು ಆಕರ್ಷಕವಾಗಿದೆ."[೩]

ಈ ಹಿನ್ನೆಲೆಯಲ್ಲಿ ಪ್ರಸ್ತುತ ಕಡಲಬಾಳು ಪರಿಸರದಲ್ಲಿ ವಿವಾಹ ಪದ್ಧತಿಗಳು ಹಲವು ವೈಶಿಷ್ಟ ಮತ್ತು ವೈವಿಧ್ಯಪೂರ್ಣವಾಗಿವೆ. ಆದ್ದರಿಂದ ಇದರ ಅಧ್ಯಯನ ವಿಶಿಷ್ಟವಾಗಿರುವುದಷ್ಟೇ ಅಲ್ಲ, ಸಾಂಸ್ಕೃತಿಕ ದೃಷ್ಟಿಯಿಂದ ಕೂಡ ಉಪಯುಕ್ತ.

ಕಡಲಬಾಳು ಗ್ರಾಮವು ಹಲವು ಸಮುದಾಯ ಸಮುದಾಯಗಳಿಂದ ಸಮ್ಮಿಲನಗೊಂಡಿರುವ ಗ್ರಾಮವಾಗಿರುವುದರಿಂದ ಪ್ರತಿ ಸಮುದಾಯ, ಸಮುದಾಯಗಳ ಆಚರಣೆಗಳಲ್ಲಿ ವೈವಿಧ್ಯತೆಯಿಂದ ಕೂಡಿವೆ. ಮೇಲು ವರ್ಗದಿಂದ ಕೆಳವರ್ಗದವರೆಗೂ ಅವರ ವಿಚಾರ, ನೀತಿ ನಿಯಮಾವಳಿಗನು ಸರವಾಗಿ ವಿವಾಹಕ್ಕೆ ಸಂಬಂಧಪಟ್ಟ ಆಚರಣೆಗಳನ್ನು ಇಂದಿಗೂ ಮೈಗೂಡಿಸಿಕೊಂಡು ಬಂದಿದ್ದರೂ,

ಈ ಎಲ್ಲಾ ಸಮುದಾಯಗಳಲ್ಲಿ ವಿವಾಹ ಸಂಬಂಧ ಆಚರಣೆಗಳಲ್ಲಿ ಬಹುತೇಕ ಸಾಮ್ಯತೆಯಿಂದ ಕೂಡಿವೆ. ಆದರೆ ಆರ್ಥಿಕ ದೃಷ್ಟಿಯಿಂದ ನೋಡಿದಾಗ ಬಡವ, ಶ್ರೀಮಂತರ ನಡುವೆ ಮದುವೆ ಅದ್ದೂರಿಗಳಲ್ಲಿ ಬದಲಾಗುತ್ತಿದೆ.

"ವಿವಾಹ ಪೂರ್ವದಲ್ಲಿ ನಡೆಸುವ ವಿವಾಹ ವಿಧಿ ಸಿದ್ಧತೆಗಳು, ವಿವಾಹಕ್ಕೆ ಬೇಕಾದ ಕೆಲವು ಅಗತ್ಯಗಳು ವಧುವರರ ವಯೋಮಾನ, ವಧುವರರ ಲಕ್ಷಣ ಮತ್ತು ಆಯ್ಕೆಯ ಕ್ರಮ, ಹೆಣ್ಣನ್ನು ಕೇಳುವ ಕ್ರಮ ಅಥವಾ ನಿಶ್ಚಿತಾರ್ಥ, ನಂತರ ವಿವಾಹದ ದಿನದ ಕಾರ್ಯಕ್ರಮಗಳು ಮದುವೆ ಮನೆ, ಮದುವೆ ಮಂಟಪ ಅದರ ಅಲಂಕಾರ ಹೆಣ್ಣು ಮತ್ತು ಗಂಡುಗಳನ್ನು ಕರೆತರುವುದು. ದೇವರನ್ನು ತರುವುದು, ಚಪ್ಪರ, ಧಾರಾಮಹೂರ್ತ, ಆರತಕ್ಷತೆ ನಂತರ ನೆರವಿ, ಬೀಗರ ಊಟ ಇನ್ನೂ ಮುಂತಾದ ಆಚರಣೆಗಳು ಅತೀ ಮುಖ್ಯವಾಗಿ ಕಂಡುಬರುತ್ತವೆ.

ಸಾಮಾನ್ಯವಾಗಿ ಇಂದಿಗೂ ಇರುವ ಸಂಪ್ರದಾಯದಲ್ಲಿ ಹುಡುಗ ಹುಡುಗಿ ಒಪ್ಪಿದರೂ, ಕುಲ ಗೋತ್ರಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಡುವುದು ಉಳಿದು ಬಂದಿದೆ. ವಧು ವರರ ಕುಲ ಒಂದೇ ಆಗಿದ್ದರೂ, ಆ ವಿವಾಹವು ನೆರವೇರುವುದಿಲ್ಲ. ಇವರಿಬ್ಬರ ಕುಲ ಬೇರೆ ಬೇರೆಯಾಗಿದ್ದಾಗ ಮಾತ್ರ ವಿವಾಹ ಸಂಬಂಧ ಏರ್ಪಡುತ್ತದೆ. ಕಡಲಬಾಳು ಗ್ರಾಮ ಪರಿಸರದಲ್ಲಿ ಎಲ್ಲಾ ಸಮುದಾಯಗಳು ತಮ್ಮ ತಮ್ಮ ಸಮುದಾಯ ಒಳಗೇ ವಿವಾಹವಾಗುವುದು ಸಾಮಾನ್ಯ ಸಂಗತಿಯಾಗಿದೆ. ಸಮುದಾಯ ಸಮುದಾಯಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದೆ.

ಅಂತರ ಸಮುದಾಯ ವಿವಾಹಕ್ಕೆ ವಿರೋಧವಿದೆ. ಬದುಕಿ ಬಾಳಬೇಕಾದ ಹೆಣ್ಣು ಗಂಡು ಸ್ಥಿರವಾಗಿ, ಶಾಶ್ವತವಾಗಿ ಜೊತೆಯಾಗಿರಲಿ ಎಂದು ವಿವಾಹ ಪದ್ಧತಿಯಲ್ಲಿ ಅವರ ಲಕ್ಷಣ, ಯೋಗ್ಯತೆ, ಅರ್ಹತೆ, ನಡತೆ, ಸಮುದಾಯ ಕುಲ ಮುಂತಾದವುಗಳನ್ನು ಪರಿಗಣಿಸುತ್ತಾರೆ. ಉತ್ತಮ ಚಾರಿತ್ರ್ಯ ಒಳ್ಳೆಯ ಜ್ಞಾನ, ಆರೋಗ್ಯ, ಐಶ್ವರ್ಯವುಳ್ಳವರಿಗೆ ಕನ್ಯೆಯನ್ನು ಕೊಟ್ಟು ಹಾಗೆಯೇ ಉತ್ತಮ ನಡತೆ, ಸೌಂದರ್ಯ, ಒಳ್ಳೆಯ ಚಾರಿತ್ರ್ಯ, ಜನಬಾವಣಿಕೆಯನ್ನು ಉಳ್ಳ ವಧುವನ್ನು ಮನೆತುಂಬಿಸಿ ಕೊಳ್ಳಬೇಕೆಂಬುದು ಎಲ್ಲರ ಆಶಯವಾಗಿದೆ."[೪]

ಈ ಸಂಪ್ರದಾಯದಲ್ಲಿ ಮೊದಲಿಗೆ ಎಲ್ಲರೂ ಕೂಡಿ ವಿಷಯ ಚರ್ಚೆ ಮಾಡಿ ನಂತರ ಮದುವೆಯ ವಿಚಾರ ಮಾಡುತ್ತಾರೆ. ನಂತರ ಸಾಮಾನ್ಯವಾಗಿ ಎಲ್ಲಾ ಸಂಪ್ರದಾಯಗಳ ಆಚರಣೆಯಂತೆ ಮದುವೆ ನಡೆಸುತ್ತಾರೆ.

**ಸಂಬಂಧಗಳು:** ಬಹುತೇಕ ಈ ಗ್ರಾಮದಲ್ಲಿ ಸಂಬಂಧಿಕರಾದ ಅತ್ತೆ- ಮಾವ, ಸೋದರತ್ತೆಯ ಮಗಳು, ಸೋದರ ಮಾವನ ಮಗಳು, ಅಕ್ಕನ ಮಗಳು, ಮಾವನನ್ನು, ಸೋದರತ್ತೆಯ ಮಗ,

ಸೋದರ ಮಾವನ ಮಗನನ್ನು, ಮಗಳನ್ನು ಮದುವೆ ಮಾಡಿಕೊಳ್ಳುತ್ತೇವೆ ಎಂದು ಭರವಸೆಯ ಮಾತನ್ನು ಕೊಡುವುದು ಸಹಜವಾಗಿದೆ. ಹುಡುಗರು ಸೋದರತ್ತೆಯ ಮಗಳು, ಸೋದರ ಮಾವನ ಮಗಳು, ಅಕ್ಕನ ಮಗಳು, ಮಾವನ ಮಕ್ಕಳನ್ನು ಮದುವೆಯಾಗುವುದು ಸಾಮಾನ್ಯ. ಹುಡುಗಿಯು ಕೂಡ ಸೋದರತ್ತೆಯ ಮಗ, ಸೋದರ ಮಾವನ ಮಗ, ಅತ್ತೆಯ ಮಗ, ಮಾವನ ಮಗಳನ್ನು ಮದುವೆಯಾಗುತ್ತಾರೆ. ಇದನ್ನು ವರಸೆ ಎಂದೂ ಕೂಡ ಕರೆಯಲಾಗುತ್ತದೆ. ತೋಟದ ಕಾಯಿ ತೋಟಕ್ಕೆ ಬೀಳಲಿ ಎಂಬ ಗಾದೆ ಮಾತಿನಂತೆ, ನಮ್ಮ ಮನೆ ಮಗಳು ನಮ್ಮ ಮನೇಲೇ ಇರಲಿ ಎಂದು ಸಂಬಂಧಗಳಲ್ಲೇ ವಿವಾಹವಾಗುವ ಸಂದರ್ಭಗಳು ಅಲ್ಲಲ್ಲಿ ನಡೆಯುತ್ತವೆ. ಇದಲ್ಲದೆ ಹೊರಗಿನ ಸಂಬಂಧಗಳು ಕೂಡ ಬೆಳೆಯುವುದು ಇಂದಿನ ದಿನಮಾನಗಳಲ್ಲಿ ಹೆಚ್ಚಾಗುತ್ತಿವೆ. ಹೀಗೆ ವಿವಾಹ ಸಂಬಂಧಗಳಲ್ಲಿ ಬದಲಾವಣೆಯಾಗುತ್ತಿರುವುದನ್ನು ಎಲ್ಲಾ ಸಮುದಾಯಗಳಲ್ಲಿಯೂ ಕಾಣಬಹುದು.

**ಮನೆವಾಳ್ತನ** : ಹೆಸರೇ ಹೇಳುವಂತೆ ಮನೆಯ ಅಳಿಯನನ್ನಾಗಿ ಮಾಡಿಕೊಳ್ಳುವುದು. ವಧುವನ್ನು ತರುವಂತೆ ವರನ ಮನೆಯಲ್ಲಿಟ್ಟುಕೊಳ್ಳುವುದು. ಮನೆಯಲ್ಲಿ ಗಂಡು ಮಕ್ಕಳು ಇಲ್ಲ ಅಂದರೆ ಅವರು ಅವರ ಸಮಸ್ತ ಆಸ್ತಿಗೆಲ್ಲ ಆ ಅಳಿಯನೇ ವಾರಸುದಾರನಾಗುತ್ತಾನೆ. ಹಾಗೆಯೇ ಅವನಿಗೆ ಮದುವೆ ಮಾಡಿ ನಮ್ಮ ಹೊಲ ಮನೆ ಆಸ್ತಿಯನ್ನು ನೋಡಿಕೊಂಡು ಇರುವಂತೆ ಮಾಡುತ್ತಾರೆ. ಇದನ್ನೇ ಮನೆವಾಳ್ತನ ಎಂದು ಕರೆಯುತ್ತಾರೆ.

**ಹೆಣ್ಣು ನೋಡುವುದು:** ಮದುವೆಯ ಮೊದಲ ಹೆಜ್ಜೆ ಅಂದರೆ ಹೆಣ್ಣು ನೋಡುವಂತಹ ಶಾಸ್ತ್ರವಾಗಿದೆ. ಮದುವೆ ಜನುಮ-ಜನುಮದ ಋಣಾನುಬಂಧ. ಗಂಡು-ಹೆಣ್ಣಿನ ಪವಿತ್ರ ಸಂಬಂಧವಾಗಿದೆ. ಅದರ ಪಾತ್ರವು ಪ್ರಮುಖವಾದಂತಹ ಕಾರ್ಯನಿರ್ವಹಿಸುತ್ತದೆ. ಒಂದು ಹೆಣ್ಣು ತರುವುದು ಅಷ್ಟು ಸುಲಭವಲ್ಲ, ಒಂದು ಒಳ್ಳೆಯ ಹೆಣ್ಣು ನೋಡಿ ಹೆಣ್ಣು ತರಲು ಏಳು ಜೊತೆ ಜೋಡು ಸವಿಯಿತು ಎಂಬ ಮಾತು ಅವರು ಹೆಣ್ಣಿಗಾಗಿ ಹುಡುಕಾಟ ಮಾಡುವುದನ್ನು ಒತ್ತಿ ಹೇಳುತ್ತದೆ. "ಬೆಟ್ಟದ ಸಾಲಿನಲ್ಲಿ ದನ ತರಬೇಕು, ತುಂಬಿದ ಮನೇಲಿ ಹೆಣ್ಣು ತರ್ಬೇಕು" ಎಂಬ ಮಾತುಗಳು ಹೆಣ್ಣಿಗಿದ್ದ ಗುಣ ಶ್ರೇಷ್ಠತೆಯನ್ನು ತಿಳಿಸುತ್ತವೆ. ಹೆಣ್ಣು ನೋಡಲು ಏಳುಜನ, ಒಂಬತ್ತು ಜನ ಹೀಗೆ ಬೆಸಸಂಖ್ಯೆಯಲ್ಲಿ ಹೋಗುತ್ತಾರೆ. ಮೊದಲು ನೇರವಾಗಿ ಹುಡುಗಿ ಮನೆಗೆ ಹೋಗದೆ, ಬೇರೆಯವರ ಮುಖಾಂತರ ಅಕ್ಕ-ಪಕ್ಕದವರನ್ನು ಕೇಳಿ ತಿಳಿದು ಹುಡುಗಿಯನ್ನು ನೋಡುತ್ತಾರೆ. ಅವರ ತಂದೆ-ತಾಯಿ ಮನೆತನ ಎಲ್ಲವನ್ನು ತಿಳಿದುಕೊಂಡು ಹೆಣ್ಣನ್ನು ನೋಡುತ್ತಾರೆ. ಹೆಣ್ಣು ಒಪ್ಪಿಗೆಯಾದರೆ ನಂತರ ಮಾತುಕತೆಗೆ ಕುಳಿತುಕೊಳ್ಳುತ್ತಾರೆ.

**ಹೆಸರು ಬಲ:** ವಿವಾಹದಲ್ಲಿ ಮೊದಲು ಹುಡುಗ-ಹುಡುಗಿ ಒಪ್ಪಿಗೆ ಮೇಲೆ ಮನೆಯವರೆಲ್ಲ ಒಪ್ಪಿದ ನಂತರ ಎರಡೂ ಕಡೆಯ ಹಿರಿಯರು ಕೂಡಿ ಜ್ಯೋತಿಷಿ ಹತ್ತಿರ ಹೋಗಿ ಹುಡುಗ-ಹುಡುಗಿಯರ ಹೆಸರು ಸರಿಯಾಗಿ ಹೊಂದಾಣಿಕೆಯಾಗುತ್ತದೆಯೇ ಗ್ರಹಗತಿಗಳು ಚೆನ್ನಾಗಿವೆಯೇ ಇತ್ಯಾದಿ ನೋಡಿಯೇ, ಸರಿ ಹೊಂದಿದರೆ ಮುಂದಿನ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾರೆ. ಒಂದು ವೇಳೆ ಸರಿ ಬರದಿದ್ದರೆ ಈ ಸಂಬಂಧವನ್ನು ನಿಲ್ಲಿಸಿ ಬೇರೆ ಸಂಬಂಧಗಳ ಹುಡುಕಾಟ ಮಾಡಿ ಎಲ್ಲಾ ರೀತಿಯಲ್ಲಿ ಸರಿಯಾಗಿ ಹೊಂದಾಣಿಕೆಗೆ ಇಷ್ಟಪಡಬೇಕು. ಅವರಿಗೂ- ಇವರಿಗೂ ಸಂಬಂಧ ಸರಿ ಹೊಂದಾಣಿಕೆ ಆದ ನಂತರ ಮದುವೆ ನಿಶ್ಚಯ ಮಾಡುತ್ತಾರೆ.

**ಮಾತುಕತೆ** : ಹುಡುಗ ಮತ್ತು ಹುಡುಗಿಯ ಕಡೆಯ ಹಿರಿಯರು ತಂದೆ ತಾಯಿಗಳು ಮತ್ತು ಹತ್ತಿರದ ಸಂಬಂಧಿಕರು ಸೇರಿಕೊಂಡು ಮದುವೆಯ ಸಂಬಂಧ ಮಾತುಕತೆಗೆ ಕೂರುತ್ತಾರೆ. ವರದಕ್ಷಿಣೆ ವರೋಪಚಾರಕ್ಕೆ ಸಂಬಂಧಿಸಿದಂತೆ ಕೊಡುವುದು ಪಡೆಯುವುದು ಎಲ್ಲ ಒಪ್ಪಿಗೆಯಾದ ಮೇಲೆ ವಿಳ್ಯೇದ ಎಲೆಯನ್ನು ಅದಲು-ಬದಲು ಮಾಡಿಕೊಳ್ಳುತ್ತಾರೆ. ಇದನ್ನು ಮಾತುಕತೆ ಎನ್ನುವರು. ಇದು ಅಂದರೆ ಈ ಶಾಸ್ತ್ರವು ಹುಡುಗ ಮತ್ತು ಹುಡುಗಿ ಇಬ್ಬರು ಸಮ್ಮತಿಯನ್ನು ಸೂಚಿಸಿದಂತೆಯೇ.

**ನಿಶ್ಚಿತಾರ್ಥ** : ನಿಶ್ಚಿತಾರ್ಥವು ಮದುವೆಗೆ ಮುಂಚಿತವಾಗಿ ನಡೆಯುವಂತಹ ಶಾಸ್ತ್ರವಾಗಿದೆ. ಇತ್ತೀಚಿನ ಪರಿಭಾಷೆಯಲ್ಲಿ 'ಎಂಗೇಜ್‌ಮೆಂಟ್' ಎಂದು ಕರೆಯುವರು. ಇಲ್ಲಿ ಅನಕ್ಷರಸ್ಥರಿಗೂ ಕೂಡ ಈ ಪದ ಸರ್ವೇಸಾಮಾನ್ಯವಾಗಿದೆ. ಈ ಶಾಸ್ತ್ರ ವಧುವಿನ ಮನೆಯಲ್ಲಿ ನಡೆಯುತ್ತದೆ. ಹುಡುಗನ ಕಡೆಯವರು ಹುಡುಗಿಯರ ಮನೆಗೆ ಬಂದು ಗುರು-ಹಿರಿಯರು ಸಂಬಂಧಿಕರು ಊರಿನ ಹಿರಿಯರು ಬಂದು ಶಾಸ್ತ್ರದಲ್ಲಿ ಪಾಲ್ಗೊಳ್ಳುತ್ತಾರೆ. ಈ ಶಾಸ್ತ್ರ ನಡೆದ ನಂತರ ಸಾಮಾನ್ಯವಾಗಿ ಯಾವುದೇ ಸಂಬಂಧಗಳು ಮುರಿದು ಬೀಳುವುದಿಲ್ಲ. ಈ ಶಾಸ್ತ್ರ ಮದುವೆಗೆ ೩ ತಿಂಗಳು ಮೊದಲೇ ನಡೆಯುತ್ತದೆ. ಇತ್ತೀಚಿನ ದಿನಮಾನಗಳಲ್ಲಿ ಮದುವೆ ದಿನದ ಹಿಂದಿನ ರಾತ್ರಿ ಹೆಚ್ಚಾಗಿ ನಡೆಯುತ್ತವೆ. ಕಾರಣ ಸಮಯದ ಉಳಿತಾಯ ಮತ್ತು ಸಂಬಂಧಗಳು ಮುರಿದು ಬೀಳದಿರಲಿ ಎಂಬ ಎರಡೂ ದೃಷ್ಟಿಯಲ್ಲಿಟ್ಟುಕೊಂಡಿದ್ದಾರೆ. ಈ ಶಾಸ್ತ್ರ ಹೆಣ್ಣಿನ ಮನೆಯಲ್ಲಿ ನಡೆಯುವುದು ಸಂಪ್ರದಾಯ. ಗಂಡಿನ ಕಡೆಯವರು ಹೆಣ್ಣಿನ ಮನೆಗೆ ನಿಶ್ಚಿತಾರ್ಥಕ್ಕೆ ಬೇಕಾದಂತಹ ಎಲ್ಲಾ ವಸ್ತುಗಳನ್ನು ಕೊಂಡೊಯ್ಯುಬೇಕು. ಕಳಸ, ಕನ್ನಡಿ, ವಿಭೂತಿಯನ್ನು, ಹೆಣ್ಣಿಗೆ ಸೀರೆ, ಬಳೆ, ಅರಿಶಿನ-ಕುಂಕುಮ, ಹೂವು ಎಲ್ಲಾ ತರಹದ ಹಣ್ಣುಗಳು, ಬಾಳೆಗೊನೆ ತರುತ್ತಾರೆ. ಏಕೆಂದರೆ ಹೆಣ್ಣನ್ನು ನಮ್ಮ ಕಡೆ ಮಾಡಿಕೊಳ್ಳುವುದಕ್ಕೆ ಎಲ್ಲವನ್ನು ಕೊಂಡೊಯ್ದು ಹೆಣ್ಣಿನ ಒಪ್ಪಿಗೆ ಮಾಡಿಕೊಂಡಂತೆ.

ಮದುವೆಗೂ ಮೊದಲು ಮಾಡುವ ಈ ಶಾಸ್ತ್ರಕ್ಕೆ ಗಂಡಿನ ಕಡೆಯವರು ಒಬ್ಬರಿಗೊಬ್ಬರು ಒಪ್ಪಿಗೆಯಾದ ಮೇಲೆ ಅವರವರ ಕುಲದವರನ್ನೆಲ್ಲ ಕರೆಸಿ ಇಳೇವು ಮಾಡುವುದರ ಮೂಲಕ ಇವರಿಬ್ಬರ ಕುಲವನ್ನು ಕೂಡಿಸುವುದು ಈ ಶಾಸ್ತ್ರದ ಮುಖ್ಯ ಘಟ್ಟ. ಇಳೇವು ಇದ್ದಾಗ ಹೂಲೇರ ಹೊನ್ನಯ್ಯ, ಕುಂಬಾರ ಗುಂಡಯ್ಯ, ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಈ ಎಲ್ಲರೂ ಬರುತ್ತಾರೆ ಎಂಬುದು ಹಿಂದಿನಿಂದಲೂ ನಡೆದುಕೊಂಡು ಬಂದಿದೆ.

ಹೊನ್ನಯ್ಯ ಇಳ್ಯಾಕೆ ಬರುವಾಗ । ಈ ಮನೆಗೆ
ದುಂಡು ಮಲ್ಲಿಗೆ ವನಮಾಲೆ
ದುಂಡುಮಲ್ಲಿಗೆ ವನಮಾಲೆ । ಹಾಕಂಡು
ಗುಂಡಯ್ಯ ಇಳ್ಯಾಕೆ ಬರುತ್ತಾರೆ.

ಹೀಗೆ ಎಲ್ಲ ಸಮುದಾಯದ ಮುಖ್ಯಸ್ಥರುಗಳು ಬಂದು ವೀಳ್ಯೇವು ತಿದ್ದಿ ಎರಡು ಕುಲವನ್ನು ಒಂದು ಮಾಡುತ್ತಿದ್ದರು. ಈ ಪ್ರಕಾರವಾಗಿಯೇ ಇಂದಿಗೂ ವೀಳ್ಯ ತಿದ್ದುವಾಗ ಊರಿನ ಯಜಮಾನರು, ಗಂಡು ಮತ್ತು ಹೆಣ್ಣಿನ ಎರಡೂ ಕಡೆಯವರು ಕಡ್ಡಾಯವಾಗಿ ಭಾಗವಹಿಸುವುದು ಇಂದಿಗೂ ನಡೆದು ಬಂದ ಪದ್ಧತಿಯಾಗಿದೆ.

ಮೂರು ಕರಿಯ ಕಂಬಳಿ ಬಿಳಿಯ ಕಂಬಳೀ
ಕುರುಬಗೌಡಗೇರ ರತ್ನಗಂಬಳಿ। ಮ್ಯಾಲೆ
ಬದುಕುಂಡವರೆ ಕುಲದೋರು
ಗಂಧ ತಳ ತಳನೆ ಹೊಳೆದಾವೋ
ನನ್ನ ಕುಲದೋರು ಆನೆದಿಂಬಾದೋರು
ಮಾಲಿಂಗಿ ಸೀಮೆ ಮಣೆ ಮ್ಯಾಲೆ। ಕೂತುಕೊಂಡು
ನೂರೊಂದು ಆಸೆಯ ಬರದಾರೋ

ಊರಿನ ಮುಖ್ಯಸ್ಥರ ಕುಲದೋರ ಹಗೆಯಮ್ಯಾಲೆ, ಗಂಧ ಹೊಳೆಯತ್ತದೆ. ಎದೆಯ ಮ್ಯಾಲೆ ಲಿಂಗ ಹೊಳೆಯುತ್ತದೆ. ಇವರ ಸಮ್ಮುಖದಲ್ಲಿನ ಗಂಡು ಮತ್ತು ಹೆಣ್ಣಿನ ಎರಡೂ ಕಡೆಯವರು ಒಪ್ಪಿ ಒಪ್ಪಿಳ್ಯವನ್ನು ಅದಲು ಬದಲು ಮಾಡಿಕೊಳ್ಳುತ್ತಾರೆ. ಹೀಗೆ ವೀಳ್ಯವನ್ನು ಅದಲು ಬದಲು ಮಾಡಿಕೊಂಡರೆ ಮುಗಿಯಿತು. ಮದುವೆ ಅರ್ಧಭಾಗದ ಮುಗಿದ ಹಾಗೆ. ಆ ಹೆಣ್ಣನ್ನು ಬೇರೆಯವರು ಹೆಣ್ಣು ನೋಡುವುದಕ್ಕೆ ಬರುವುದಿಲ್ಲ. ಒಪ್ಪಂದ ಆದ ಮೇಲೆ ಆ ಹೆಣ್ಣನ್ನು ಯಾವುದೇ ಕಾರಣಕ್ಕೂ ಬಿಡುವಂತಿಲ್ಲ. ಒಂದು ಹೆಣ್ಣನ್ನು ತರಬಹುದೇ ಹೊರತು, ತಂದಂತಹ ಹೆಣ್ಣನ್ನು ಬಿಡಕ ಆಗೊಲ್ಲು ಎನ್ನುತ್ತಾರೆ.

ಎಲ್ಲಾ ಕುಲದವರು ಸೇರಿ ಊರಿನ ಮುಖ್ಯಸ್ಥರ ಎದುರಿಗೆ ಒಪ್ಪಿ ವೀಳ್ಯವನ್ನು ಬದಲಾಯಿಸಿ ಕೊಂಡ ಮೇಲೆ ಅವರ ಕುಲ ಒಂದಾದಂತೆಯೇ ಸರಿ. ಆ ಕಾರಣದಿಂದಲೇ ಎರಡೂ ಕಡೆಯ

ಊರಿನ ಯಜಮಾನರ ಸಮ್ಮುಖದಲ್ಲಿ ಒಪ್ಪಿಳ್ಯವನ್ನು ಬದಲಾಯಿಸಿಕೊಳ್ಳುವುದು. ಜನಪದರು ಸಮಾಜದ ನಡುವೆ ಬದುಕಿ ಬಾಳುವುದರಿಂದ ಅವರ ಮನ್ನಣೆಗೆ ಎಲ್ಲರೂ ಮಣಿಯಬೇಕು. ಯಜಮಾನರ ಮಾತು ಮೀರಿ ಯಾರು ನಡೆಯುವುದಿಲ್ಲವೆಂಬ ಸಂಪ್ರದಾಯ ಈ ಪ್ರದೇಶದಲ್ಲಿ ಇಂದಿಗೂ ಉಳಿದುಕೊಂಡು ಬಂದಿದೆ.

ಒಂಬತ್ತು ಜನ ಮುತ್ತೈದೆಯರ ಕೈಯಲ್ಲಿ ಹೆಣ್ಣಿಗೆ ಅರಿಶಿನ, ಕುಂಕುಮ ಇಕ್ಕಿಸಿ ಗಂಡಿನೋರು ತರುವ ವಸ್ತುಗಳನ್ನು ಹೆಣ್ಣಿಗೆ ಮಡಿಲು ತುಂಬುವ ಶಾಸ್ತ್ರ ಮಾಡಿ, ಹೆಣ್ಣಿನ ಕೈಲಿ ಕಳಸ ಕನ್ನಡಿ ಇಟ್ಟಿರುವ ತಟ್ಟೆಯನ್ನು ಕೊಟ್ಟು ಮನೆಗೆ ಕರೆದೊಯ್ಯುತ್ತಾರೆ. ಇದಾದ ನಂತರ ಹೆಣ್ಣು ಗಂಡಿಗೆ ಮೀಸಲು ಎಂದೇ ಅರ್ಥ. ನಂತರ ತಂದಿರುವ ಎಲೆ ಅಡಿಕೆಯನ್ನು ಊರಿನ ಪ್ರತಿಯೊಂದು ಮನೆಗೂ ತಪ್ಪದೇ ನೀಡಬೇಕು. ಒಂದು ವೇಳೆ ಕೊಡದಿದ್ದ ಪಕ್ಷದಲ್ಲಿ ನ್ಯಾಯ ಪಂಚಾಯ್ತಿ ಮಾಡಿಸುವುದು ಇದೆ. ಒಂದು ವೇಳೆ ಆ ಮನೆಯವರು ಇಲ್ಲ ಅಂದರೆ ಪಕ್ಕದ ಮನೆಯವರಿಗೆ ಹೇಳಿ ಕೈಗೆ ನೀಡಬೇಕು. ಇಲ್ಲವಾದರೆ ಅವರು ಬಂದ ಮೇಲೆ ಹೋಗಿ ತಲುಪಿಸಬೇಕು. ಯಾವುದೇ ಮನೆಯವರಿಗೆ ಕೊಡಲಿಲ್ಲವೆಂದಾಗ ಅವರು ಊರಿನ ಕುಳ ಅಲ್ಲವೆಂದು ಅರ್ಥ. ಆದಕಾರಣ ಪ್ರತಿಯೊಂದು ಮನೆಗೂ ತಲುಪಿಸುವುದು ಕಡ್ಡಾಯವಾಗಿದೆ. ಹಾಗೆಯೇ ಪ್ರತಿ ಮನೆಯವರು ಅದನ್ನು ಪಡೆದುಕೊಳ್ಳಬೇಕು. ನಿರಾಕರಿಸುವಂತಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಮದುವೆಗಳನ್ನು ಸಮುದಾಯ ಭವನ ಛತ್ರಗಳಲ್ಲಿ ಮಾಡುವುದರಿಂದ ವೀಳ್ಯಶಾಸ್ತ್ರವನ್ನು ಮದುವೆಯ ಹಿಂದಿನ ದಿನದ ರಾತ್ರಿ ಮಾಡುತ್ತಾರೆ. ಆ ಕಾರಣದಿಂದ ಮನೆ ಮನೆಗೆ ವೀಳ್ಯ ಕೊಡುವ ಸಂಪ್ರದಾಯ ಕಡಿಮೆಯಾಗುತ್ತದೆ.

**ಲಗ್ನ ಕಟ್ಟಿಸುವುದು:** ಮದುವೆ ಮಾಡುವುದು ನಮ್ಮ ಹಳ್ಳಿಯಲ್ಲಿ ಸಾಮಾನ್ಯವಾಗಿದೆ. ಮದುವೆ ಇನ್ನು ಒಂದು ವಾರ ಇದೆ ಎಂದಾಗ ಲಗ್ನ ಕಟ್ಟಿಸುತ್ತಾರೆ. ಲಗ್ನ ಕಟ್ಟಿಸಿದ ಮೇಲೆ ಹೆಣ್ಣೆ ಆಗಲಿ ಅಥವಾ ವರ ಮನೆಯವರೇಯಾಗಲಿ ಯಾರೂ ಮಾಂಸಹಾರವನ್ನು ಸೇವನೆ ಮಾಡುವಂತಿಲ್ಲ. ಅಂಟು-ಮುಟ್ಟು ಮಾಡುವಂತಿಲ್ಲ ಎಲ್ಲವು ಪರಿಶುದ್ಧವಾಗಿರಬೇಕು.

**ನೀರುಯ್ಯುವ ಶಾಸ್ತ್ರ:** ಮದುವೆ ಗಂಡು ಮತ್ತು ಹೆಣ್ಣುಗಳಿಗೆ ಮದುವೆಯ ಸಂದರ್ಭದಲ್ಲಿ ಮಾಡುವಂತಹ ಮುಖ್ಯ ಶಾಸ್ತ್ರಗಳಲ್ಲಿ ಇದು ಒಂದಾಗಿದೆ. ನೀರುಯ್ಯುವ ಶಾಸ್ತ್ರದ ಮುಖಾಂತರ ಹೆಣ್ಣು-ಗಂಡುಗಳು ದೈಹಿಕವಾಗಿ ಸಿದ್ಧಗೊಳಿಸುವ ಕಾರ್ಯವು ಇದಾಗಿದೆ. ಈ ಶಾಸ್ತ್ರದಿಂದ ಹೆಣ್ಣು-ಗಂಡುಗಳ ಸೌಂದರ್ಯವೂ ಹೆಚ್ಚಾಗುತ್ತದೆ. ಹಿಂದೆ ಈ ಶಾಸ್ತ್ರವನ್ನು ಒಂಬತ್ತು ದಿನ, ಏಳು ದಿನ, ಐದು ದಿನಗಳಿಂದ ಪ್ರಾರಂಭ ಮಾಡುತ್ತಿದ್ದರು. ಅಂದರೆ ಇದು ೩ ದಿನ ಇಲ್ಲವೇ ಕೆಲವರು ಒಂದೇ ದಿನಕ್ಕೆ ಈ ಶಾಸ್ತ್ರವನ್ನು ಮಾಡುತ್ತಾರೆ. ಅರಿಶಿನ ಎಣ್ಣೆಯ ಸ್ನಾನ ಮಾಡಿಸುತ್ತಾರೆ.

ಈ ಅರಿಶಿನ ಮತ್ತು ಎಣ್ಣೆಯಿಂದ ಚರ್ಮದ ಕಾಂತಿ ಹೆಚ್ಚಾಗುತ್ತದೆ. ಈ ಶಾಸ್ತ್ರವನ್ನು ಮುತ್ತೈದೆಯರು ಒಂದು ತಟ್ಟೆಯಲ್ಲಿ ಅರಿಶಿನ, ಒಂದು ತಟ್ಟೆಯಲ್ಲಿ ಹರಳೆಣ್ಣೆ, ಕಳಸ ಕನ್ನಡ, ವಿಭೂತಿ ಅಕ್ಕಿ ಮತ್ತೊಂದು ತಟ್ಟೆಯಲ್ಲಿ ಎಲೆ, ಅಡಿಕೆ ಮುಖ್ಯವಾಗಿ ಈ ಶಾಸ್ತ್ರಕ್ಕೆ ಬೇಕೇ ಬೇಕು. ಈ ಶಾಸ್ತ್ರದಲ್ಲಿ ಮುಖ್ಯವಾಗಿ ನೀರುಯ್ಯುವಾಗಲೇ ಸೋಬಾನ ಪದ ಹಾಡುತ್ತಾ ನೀರುಯ್ಯುತ್ತಾರೆ. ಮದು-ಮಕ್ಕಳಿಗೆ ಹಾಕುತ್ತಿದ್ದರು. ಅರಿಸಿನ ನೀರು ಹುಯ್ದು ಮುಗಿದ ನಂತರ ಹೊಸ ಬಟ್ಟೆ ಧರಿಸಿ ಹಸಿಮಣೆ ಮೇಲೆ ಮದುಮಕ್ಕಳನ್ನು ಮದುವೆಗೆ ಸಿದ್ಧಗೊಳಿಸುತ್ತಾರೆ. ನಂತರ ಧಾರೆ ಮೂಹೂರ್ತ ಮಾಡಲಾಗುತ್ತದೆ.

**ಚಪ್ಪರ:** ಮದುವೆ ಅಂದರೆ ಚಪ್ಪರ ಹಾಕುವುದು. ಸಾಮಾನ್ಯವಾಗಿ ಗಂಡಿನ ಕಡೆಯವರು ಹೆಣ್ಣಿನ ಕಡೆಯವರು ಯಾರೇ ಮಾಡಿದರು ಮದುವೆ ಮನೆ ಮುಂದೆ ದೊಡ್ಡದಾದ ಚಪ್ಪರ ಹಾಕಲಾಗುತ್ತದೆ. ಚಪ್ಪರ ಹಾಕುವಾಗ ಶಾಸ್ತ್ರ ಸಮಯ ನೋಡುವುದು ಇಲ್ಲಿ ಮುಖ್ಯವಾಗುತ್ತದೆ. ಇಡೀ ಚಪ್ಪರ ತುಂಬೆಲ್ಲಾ ಹೊಂಗೆಸೊಪ್ಪು, ಮಾವಿನ ಸೊಪ್ಪು, ತೆಂಗಿನ ಗರಿಗಳಿಂದ ಮುಚ್ಚುತ್ತಾರೆ. ಕಂಬಗಳಿಗೆ ತೆಂಗಿನ ಗರಿಗಳಿಂದ ಹೆಣೆದು ಮುಚ್ಚುತ್ತಾರೆ. ಇಡೀ ಚಪ್ಪರದ ಸುತ್ತಲೂ ಚಪ್ಪರಕ್ಕೆ ಹೂವಿನಿಂದ ಅಲಂಕರಿಸುತ್ತಾರೆ. ಪ್ರತಿಯೊಂದು ಕಂಬಕ್ಕೆ ಬಾಳೆದಿಂಡನ್ನು ಕಟ್ಟಿ ಚಪ್ಪರದ ಮೇಲ್ಭಾವಣಿಯಲ್ಲಿ ಮಾವಿನ ಸೊಪ್ಪು ಮತ್ತು ರೋಡಿನ ಪಕ್ಕದಲ್ಲಿರುವ ಕೆಂಪು ಹೂಗಳ ಗುಚ್ಛವನ್ನು ಚಪ್ಪರದ ಪ್ರತಿಯೊಂದು ಮೂಲೆಗಳಿಗೆ ತೆಂಗಿನಕಾಯಿಗಳನ್ನು ನೇತು ಹಾಕಿ ಮಧ್ಯದಲ್ಲಿ ಈಚಲು ಮರದ ಕಾಯಿ ತುಂಬಿದ ಗೊನೆಗಳನ್ನು ನೇತುಹಾಕುತ್ತಾರೆ. ನಂತರ ಸಣ್ಣ ಸಣ್ಣ ವಿದ್ಯುತ್ ದೀಪಗಳಿಂದಲೇ ಅಲಂಕರಿಸಲಾಗುತ್ತದೆ. ಹಸಿರು ತೋರಣಗಳಿಂದಲೇ ಈ ಹಂದರ ಕಂಗೊಳಿಸುತ್ತಿರುತ್ತದೆ. ಅರಿಶಿನ ನೀರು ಸ್ನಾನ ಮಾಡಿದ ಮೇಲೆ ವಧುವರರ ಮನೆಯಿಂದ ಹೊರಗಡೆ ಹೋಗುವಂತಿಲ್ಲ. ಊರು ಬಿಟ್ಟು ಎಲ್ಲೂ ಹೊರಗೆ ಕಳುಹಿಸುವುದಿಲ್ಲ. ಕಾರಣ ಹಸಿ ಮೈ ಎಂದು ಹೇಳುತ್ತಾರೆ. ಒಳ್ಳೆಯ ಊಟ ತಿನಿಸುಗಳನ್ನು ಮಾಡಿ ಊಟ ಬಡಿಸುತ್ತಾರೆ. ಹೆಣ್ಣಿಗೆ ಅರಿಶಿನ ಸ್ನಾನ ಮಾಡಿಸುವಾಗಲೂ ಕೂಡ ಸೋಬಾನೆ ಪದಗಳನ್ನು ಹಾಡುತ್ತಾರೆ.

**ಚಪ್ಪರದ ಊಟ:** ಚಪ್ಪರ ಹಾಕುವಾಗಲು ಸಹ ಶಾಸ್ತ್ರವನ್ನು ಕೇಳಿ ತಿಳಿದುಕೊಂಡು, ಒಳ್ಳೆಯಕಾಲ ನೋಡಿ, ಚಪ್ಪರದ ಕೊನೆಗಳನ್ನು ನೆಡುತ್ತಾರೆ. ನೆಡುವಾಗ ಚಪ್ಪರದ ಕೊನೆಗೆ ಪೂಜೆ ಮಾಡಿ ನೆಡುತ್ತಾರೆ. ನಂತರ ಸಣ್ಣ-ಸಣ್ಣ ವಿದ್ಯುತ್ ದೀಪಗಳಿಂದ ಅಲಂಕರಿಸಲಾಗುತ್ತದೆ. ಒಟ್ಟಾರೆಯಾಗಿ ಮದುವೆಗೆ ಸಿಹಿಯಾದ ಪಾಯಸ ಮಾಡುತ್ತಾರೆ.

**ದೇವರು ತರುವುದು:** ದೇವರು ತರುವ ಮೂಲಕವೇ ಹೊಸ ಹೊಸ ಮಣ್ಣಿನ ಮಡಿಕೆಗಳನ್ನು ತಂದು ಹೂ, ಹಣ್ಣು ಕಾಯಿಗಳ ಜೊತೆ ಪೂಜೆ ಮಾಡಲು ಬೇಕಾಗುವ ಎಲ್ಲಾ ವಸ್ತುಗಳನ್ನು ತೆಗೆದುಕೊಂಡು ವಾದ್ಯ ಮೇಳಗಳ ಜೊತೆ ದೇವರ ಗುಡ್ಡಕ್ಕೆ ಹೋಗಿ ಹೊಸ ಗಡಿಗೆಗಳನ್ನು

ತೊಳೆದು ಪ್ರತಿ ಗಡಿಗೆಯ ತುಂಬಿದ ಬಾಯಿಗೆ ಅಡಿಕೆ ಹೊಂಬಾಳೆಯನ್ನು ಇಟ್ಟು ಅಕ್ಷತೆ ಗಂಟನ್ನು ತರುತ್ತಾರೆ. ತರುವವರ ನಡೆನುಡಿ ಎಲ್ಲವೂ ದೇವರು ಮಾತಾಡುವ ಹಾಗೆ ಶಿಶುಮಗ, ಶಿಷ್ಯ ಸೇವಕ ಎಂಬ ಮಾತುಗಳು ಅವರ ಬಾಯಿಂದ ಹೊರಟು ಎಲ್ಲರನ್ನು ತಳ್ಳುತ್ತ ಸೆಳೆದು ಎಲ್ಲರನ್ನು ಭಯ ಭಕ್ತಿಯಿಂದ ನೆನೆಯುವಂತೆ ಮಾಡುತ್ತಾರೆ.

**ಚಪ್ಪರದ ಕೊನೆ ತರುವುದು:** ಮದುವೆ ಹಾಲುಕಂಬ ಹಸಿರುಕಂಬ ಪ್ರಮುಖವಾಗಿಯೇ ಬೇಕಾಗಿರುತ್ತದೆ. ಚಪ್ಪರದ ಕೊನೆ ಎಂತಲೂ ಕರೆಯುವರು. ಹಸಿರು ತುಂಬಿದ ತೊಗಟೆಯನ್ನು ತೆಗೆದು ಬೆಳ್ಳಗೆ ಮಾಡಿ ತಾಳನ್ನು ಸಮತಟ್ಟು ಮಾಡಿ ನಾಲ್ಕು ಕವಲು ಇರುವಂತೆ ಕವಲುಗಳು ಅರ್ಧ ಅಡಿ ಇರುವಂತೆ ಮಾಡಿ ೩-೪ ಅಡಿ ಉದ್ದದ ಕಳ್ಳಿಯ ಕಡಿದು ಅದಕ್ಕೆ ಅರಿಶಿನ ಕುಂಕುಮ, ಬಟ್ಟೆ, ಅಕ್ಷತೆ, ಬುತ್ತಿಕಟ್ಟಿ ಇಡುತ್ತಾರೆ. ಸೋದರಮಾವನ ಕೈಯಲ್ಲಿ ಒಂದು ಜಮ್ಮನೇರಳ ಮರದ ರೆಕ್ಕೆಯ ತುದಿಯನ್ನು ಕೊಟ್ಟು ಅವನಿಗೆ ಅರಿಶಿನ ಕುಂಕುಮ ಇಕ್ಕಿ ಬಾಯಿಗೆ ಆದರ್ಶದಿಂದ ಒಂದು ಬಾಳೆ ಹಣ್ಣನ್ನು ತುರುಕಿ ವಾದ್ಯ ಮೇಳಗಳ ಜೊತೆಗೆ ಮೆರವಣಿಗೆಯಲ್ಲಿ ಕರೆ ತರುತ್ತಾರೆ. ತಂದು ಧಾರಾಮೂರ್ಹತವಾಗುವಂತಹ ಚಪ್ಪರದ ಕಂಬಕ್ಕೆ ಕಟ್ಟುತ್ತಾರೆ. ಇದನ್ನೇ ಚಪ್ಪರದ ಕೊನೆಶಾಸ್ತ್ರ ಎಂದು ಕರೆಯುತ್ತಾರೆ.

**ಗಂಡು ಕರೆ ತರುವುದು:** ಸಂಪ್ರದಾಯದ ಪ್ರಕಾರವೇ ಚಪ್ಪರದ ದಿನದ ರಾತ್ರಿ ಹೆಣ್ಣು ಕರೆತಂದರೆ, ಧಾರೆಯ ದಿನ ಬೆಳಿಗ್ಗೆ ಗಂಡನ್ನು ಕರೆ ತರುವುದನ್ನು ಕಾಣುತ್ತೇವೆ. ಹೆಣ್ಣು ಕರೆತಂದು ಅಷ್ಟೇ ಅದ್ದೂರಿಯಾಗಿ ಗಂಡನ್ನು ಕರೆತರುತ್ತಾರೆ. ಶೃಂಗಾರ ಮಾಡಿದ ಎತ್ತುಗಾಡಿಗಳ ಮೂಲಕ ವಾದ್ಯಮೇಳಗಳ ಜೊತೆಗೆ ನೃತ್ಯವನ್ನು ಮಾಡುತ್ತಾ ವಧು-ವರರನ್ನು ಮುಹೂರ್ತಕ್ಕೆ ಕರೆತರುತ್ತಾರೆ. ಹೆಣ್ಣಿನ ಮತ್ತು ಗಂಡಿನ ಕಡೆಯ ಹುಡುಗರು ಹಠದಿಂದ ನಾವು ಅವರಕ್ಕಿಂತ ಕಡಿಮೆ ಇಲ್ಲ ಎಂಬ ಭಾವನೆಯಿಂದ ನೃತ್ಯವನ್ನು ಮಾಡುವಿಕೆಯನ್ನು ಕಾಣಬಹುದಾಗಿದೆ.

**ಊಟೋಪಚಾರ:** ಮದುವೆ ಮನೆಯಲ್ಲಿ ಒಂದು ಬಹು ಮುಖ್ಯವಾದ ಘಟ್ಟವಾಗಿದೆ. ಮದುವೆಯ ಊಟವೇ ಬೇರೆ ರೀತಿಯಲ್ಲಿ ವಿಶಿಷ್ಟ ವೈವಿದ್ಯದಿಂದ ಕೂಡಿರುತ್ತದೆ. ತರ-ತರಹದ ತಿಂಡಿ-ತಿನಿಸುಗಳು, ಸಿಹಿ ಸಿಹಿಯಾದ ಲಾಡು, ಬೂಂದಿ, ಪಾಯಸಗಳೊಂದಿಗೆ ಎಲ್ಲರ ಮನ ತಣಿಸುವುದು. ಮದುವೆಯ ಒಟ್ಟು ಖರ್ಚುಗಳಲ್ಲಿ ಊಟಕ್ಕೆ ಹೆಚ್ಚಿನದಾಗಿ ಖರ್ಚು ಮಾಡಲಾಗಿರುತ್ತದೆ. ಏಕೆಂದರೆ ಜನರ ಮನದಲ್ಲಿ ಉಳಿಯುವುದು ಕೊನೆಯದಾಗಿ ಮದುವೆಯ ಊಟ.

**ಬೀಗರ ಊಟ:** ಸಂಪ್ರದಾಯದ ಪ್ರಕಾರವೇ ಮದುವೆ ಮಾಡಿದವರು ಮದುವೆಯಾದ ಮೂರು ದಿನಕ್ಕೆ ತಮ್ಮ ಊರಿನಲ್ಲಿ ಬೀಗರ ಊಟವನ್ನು ಮಾಡುತ್ತಾರೆ. ಸಾಮಾನ್ಯವಾಗಿ ಬೀಗರನ್ನು

ದೇವಸ್ಥಾನದ ಹತ್ತಿರ ಕೂರಿಸಿ ಅವರಿಗೆ ಮಜ್ಜಿಗೆ, ಪಾನಕ, ತಂಪಾದ ಪಾನೀಯಗಳನ್ನು ಕೊಟ್ಟು ಅವರ ಯೋಗಕ್ಷೇಮ ವಿಚಾರಿಸುವುದು ಸಂಪ್ರದಾಯ ಬದ್ಧವಾಗಿದೆ. ಎಲ್ಲರೂ ಊಟ ಮುಗಿದ ನಂತರ ಗಂಡು– ಹೆಣ್ಣುಗಳನ್ನು ಕರೆದುಕೊಂಡು ಪುನಃ ತಮ್ಮ ಮನೆಗೆ ಬರುತ್ತಾರೆ.

**ಆಹಾರ ಪದ್ಧತಿ**

ಒಂದು ಕಾಲಕ್ಕೆ ಕೇವಲ ಹಸಿಯಾದಂತಹ ಆಹಾರದ ಪದಾರ್ಥಗಳನ್ನು ಸೇವಿಸುತ್ತಿದ್ದ. ಮುಂದಿನ ದಿನಮಾನಗಳಲ್ಲಿ ಮಾನವನು ಬೆಂಕಿಯಿಂದ ಆಹಾರವನ್ನು ಬೇಯಿಸಿಕೊಳ್ಳುತ್ತಿದ್ದ. ಈಗ ರುಚಿಯ ಬೆನ್ನುಹತ್ತಿ ಬಗೆ–ಬಗೆಯ ಹಲವು ರೀತಿಯಾದ ಅಡುಗೆ ಮಾಡಿಕೊಳ್ಳುತ್ತಾರೆ. ಹಲವಾರು ರೀತಿಯಿಂದಾಗಿ ವ್ಯಕ್ತಿಯಿಂದ ವ್ಯಕ್ತಿಗೆ, ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗುತ್ತವೆ. ಮನುಷ್ಯನ ಜೀವನಾ ಏಕತೆಯುಳ್ಳ ಊಟ ಉಪಚಾರ ವಸ್ತುವಿನ್ಯಾಸಗಳಲ್ಲಿ ಬದಲಾವಣೆ ಕಂಡು ಬರುವುದನ್ನು ಕಾಣುತ್ತೇವೆ. ಆಹಾರವು ಒಂದು ಸಮುದಾಯದಲ್ಲಿ ಜೀವಂತವಾಗಿದ್ದು ಕೊಂಡು, 'ಎಲ್ಲರೂ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಆಹಾರಕ್ಕಾಗಿ ನಿತ್ಯವೂ ದುಡಿಯಬೇಕು. ಮನುಷ್ಯನಿಗೆ ಆಹಾರವಿಲ್ಲದ್ದರೆ 'ಬದುಕೇ ಇಲ್ಲ ಉಸಿರೂ ಇಲ್ಲ'. ಆಹಾರ ಕೇವಲ ಮನುಷ್ಯನಿಗೆ ಮಾತ್ರವಲ್ಲದೇ ಪ್ರಕೃತಿಯಲ್ಲಿ ಹುಟ್ಟಿರುವ ಪ್ರತಿಯೊಂದು ಜೀವಿಗೂ ಆಹಾರ ಅಗತ್ಯವಾಗಿದೆ.

೧. ಸಸ್ಯಾಹಾರದ ಅಡುಗೆ

೨. ಮಾಂಸಾಹಾರದ ಅಡುಗೆ

**ಸಸ್ಯಾಹಾರದ ಅಡುಗೆ:** ನಾವು ಅಡುಗೆಯನ್ನು ಸಿಹಿ ಅಡುಗೆ ಮತ್ತು ಖಾರದ ಅಡುಗೆ ಎಂದು ವಿಂಗಡಿಸಿದ್ದೇವೆ. ಸಿಹಿ ಅಡುಗೆಯಲ್ಲಿ ತಿಂಡಿ, ಊಟ ಪಾನೀಯ ಎಂದು ವಿಭಾಗಿಸಿದರೆ, ಖಾರದ ಅಡುಗೆಯಲ್ಲಿ ತಿಂಡಿ ಮತ್ತು ಊಟ ಎಂದು ವಿಂಗಡಿಸಬಹುದಾಗಿದೆ. ದಿನ ನಿತ್ಯದ ಅಡುಗೆಗಳು ಹಲವು ರೀತಿಯಲ್ಲಿ ಇರುವಿಕೆಯನ್ನು ನಾವು ಕಾಣಬಹುದಾಗಿದೆ.

**ದಿನನಿತ್ಯದ ಅಡುಗೆ:** ಮುಖ್ಯವಾಗಿ ದಿನನಿತ್ಯದ ಅಡುಗೆಯಾಗಿ ರೊಟ್ಟಿ, ಅನ್ನ, ಮುದ್ದೆಯನ್ನು ಆಹಾರವಾಗಿ ಸೇವಿಸುತ್ತಾರೆ. ಆರ್ಥಿಕವಾಗಿ ಉತ್ತಮವಾಗಿದ್ದರೆ ಅವರ ಆಹಾರ ಕ್ರಮದಲ್ಲಿ ಉತ್ತಮವಾಗಿರುತ್ತದೆ. ಈ ಹಿಂದೆ ಸುಮಾರು ದಶಕಗಳ ಹಿಂದೆ ಬಡವರು ಹಬ್ಬ ಹರಿದಿನಗಳಲ್ಲಿ ಮಾತ್ರ ಅನ್ನ, ತಿಂಡಿ, ಸಿಹಿ ಪದಾರ್ಥಗಳನ್ನು ಮಾಡುತ್ತಿದ್ದರು.

**ರಾಗಿ ಮುದ್ದೆ:** ಕಡಲಬಾಳಿನಲ್ಲಿ ಪ್ರಧಾನ ಹಾಗೂ ಅತಿಮುಖ್ಯವಾದಂತಹ ಆಹಾರವೆಂದರೆ ರಾಗಿ ಮುದ್ದೆ. ಬಡವ ಬಲ್ಲಿದ ನಗರ ಗ್ರಾಮಗಳೆಂಬ ತಾರತಮ್ಯತೆಗಳಿಲ್ಲದೆ ಎಲ್ಲಾ ಕಾಲದಲ್ಲಿಯೂ

ಎಲ್ಲ ಸಂದರ್ಭದಲ್ಲೂ ಯಾವುದೇ ಹಿಗ್ಗು-ತಗ್ಗುಗಳಿಲ್ಲದೆ ಬಳಸುವ ಆಹಾರ ರಾಗಿಮುದ್ದೆಯಾಗಿದೆ. ರಾಗಿಯನ್ನು ಇತ್ತೀಚಿನ ದಿನಗಳಲ್ಲಿ ಮಿಲ್ಲುಗಳಿಂದ ಹಿಟ್ಟುಮಾಡಿಕೊಂಡು ಮುದ್ದೆಮಾಡುವುದಕ್ಕೆ ಬಳಸುತ್ತಾರೆ. ಹಿಟ್ಟಿನ ಗಿರಿಣಿಯಿಂದ ತಂದ ಹಿಟ್ಟಿನಿಂದ ರಾಗಿ ಮುದ್ದೆ ಮಾಡಿದ ಒಲೆಯ ಬೂದಿಯನ್ನು ವಿಭೂತಿಯಾಗಿ, ರಾಗಿ ಹಿಟ್ಟು ಮಾಡಿದ ಗಡಿಗೆ ಅಥವಾ ಪಾತ್ರೆಗೆ ಬಳಿದು ನಮಸ್ಕಾರ ಮಾಡುವಂತಹ ಪದ್ಧತಿ ಈಗಲೂ ಇದೆ.

**ಸಾರು:** ಅಡುಗೆ ಮಾಡುವುದು ಅಂದರೆ ಅನ್ನ-ಸಾರು ಮಾಡುವುದು. ಇಲ್ಲಿ ಹೆಚ್ಚಾಗಿ ಸಾರಿಗೆ ಅವರೆಕಾಳು, ತರಗುಣೆ, ಹುರುಳಿಕಾಳು, ಕಡಲೇಕಾಳು ಮುಂತಾದ ದ್ವಿದಳ ಧಾನ್ಯಗಳ ಜೊತೆಗೆ ತಾವೇ ಸ್ವತಃ ಬೆಳೆದ ಮೂಲಂಗಿ, ಸೀಮೆಬದನೆ, ಚಪ್ಪರದ ಅವರೆ ಕಾಯಿ, ಬದನೆ ಕಾಯಿ, ಹೀರೆಕಾಯಿ, ಸೋರೇಕಾಯಿ, ಬೆಂಡೆಕಾಯಿ, ಸೌತೇಕಾಯಿ ಈ ರೀತಿಯಾದಂತಹ ಕಾಯಿಗಳನ್ನು ದಿನನಿತ್ಯವೂ ಮಾಡುವ ಪರಂಪರೆ ಇದೆ. ಸೊಪ್ಪಿನ ಸಾರು, ಬಸ್ಸಾರು, ಸೊಪ್ಪು ಇತ್ಯಾದಿ ಮೇಲೆ ಉದಾಹರಿಸಿದ ಯಾವುದೇ ಕಾಳು ಸೊಪ್ಪಿನ ಜೊತೆಗೆ ಬೇಯಿಸಿ ಕಾಳಿನೊಂದಿಗೆ ಉಪ್ಪು, ಜೀರಿಗೆ, ಬೆಳ್ಳುಳ್ಳಿ ಸುಟ್ಟು ಬೇಯಿಸಿದ ಮೆಣಸಿನಕಾಯಿ ಬೆಳ್ಳುಳ್ಳಿ ಇವೆಲ್ಲವನ್ನು ಅರೆದು ಸಾರು ಮಾಡುತ್ತಾರೆ.

**ಬಸ್ಸಾರು:** ಈ ಸಾರಿಗೆ ಸೊಪ್ಪಿಗೆ ಹೊಂದುವಂತೆ ಕಾಳುಗಳನ್ನು ಹಾಕಿ ಚೆನ್ನಾಗಿ ಬೇಯಿಸಿಕೊಳ್ಳಬೇಕು, ಆದಾದ ಮೇಲೆ ಸೊಪ್ಪು ಕಾಳನ್ನು ಬಸಿದು ನೀರನ್ನು ಬೇರ್ಪಡಿಸಿ ಆ ನೀರಿಗೆ ಉಪ್ಪು ಕಾರದಪುಡಿ ಹುಣಿಸೆ ಹುಳಿಯನ್ನು ಹಾಕಿ ಚೆನ್ನಾಗಿ ಬೇಯಿಸಿ ಬೆಳುಳ್ಳಿಯನ್ನು ಸ್ವಲ್ಪ ಹೆಚ್ಚಾಗಿಯೇ ಹಾಕಿ ಚೆನ್ನಾಗಿ ಕುದುಸಿ ಒಗ್ಗರಣೆ ಕೊಡಬೇಕು.

**ಮಸೊಪ್ಪು:** ಈ ಸೊಪ್ಪನ್ನು ಚೆನ್ನಾಗಿ ಬೇಯಿಸಬೇಕು. ಬೆಳ್ಳುಳ್ಳಿ, ಉಪ್ಪುಕಾರ, ಕಾಳು ಎಲ್ಲವನ್ನು ಜೊತೆಯಲ್ಲಿ ಹಾಕಿ ಚೆನ್ನಾಗಿ ಬೇಯಿಸಿ ಸೊಪ್ಪನ್ನು ಬಸಿದುಕೊಂಡು ಮಸೆಯುವ ಕೋಲಿನಿಂದ ಚೆನ್ನಾಗಿ ಮಸೆದು(ತಿಕ್ಕಿ) ನಂತರ ಅದೇ ನೀರನ್ನು ಮಸಿದ ಸೊಪ್ಪಿಗೆ ಹಾಕಿ ಕಲಸಿ ಒಗ್ಗರಣೆ ಮಾಡುವುದು.

**ಅವರೆಕಾಳು:** ಒಣಗಿರುವ ಅವರೆಕಾಳನ್ನು ಹದವಾಗಿ ಹುರಿದುಕೊಂಡು ಮೊದಲೇ ಉಪ್ಪು ಕಾರ ಬೆಳುಳ್ಳಿ, ಹುಣಿಸೆಹುಳಿಯು ಒಂದು ಪಾತ್ರೆಗೆ ಹಾಕಿಕೊಳ್ಳಬೇಕು. ನಂತರದಲ್ಲಿ ಅವರೆಕಾಳನ್ನು ಹುರಿದು ಇಲ್ಲವೆ ಬೇಯಿಸಿಕೊಳ್ಳಬೇಕಾಗುತ್ತದೆ. ಅವರೇಕಾಳಿನ ಹುಳಿಯ ಜೊತೆಗೆ ಈರುಳ್ಳಿ ನೆಂಚಿಕೊಂಡು, ಹುಳಿ ಕುಡಿದರೆ ಕೆಮ್ಮು, ನೆಗಡಿ ವಾಸಿಯಾಗುತ್ತದೆ.

**ಚಿರಿಕೆ ಸೊಪ್ಪಿನ ಸಾರು:** ಮಾಡುವ ವಿಧಾನ ಹೊಲ, ಗದ್ದೆ, ತೋಟಗಳಲ್ಲಿ ಸಿಗುವಂತಹ ಸೀಗೆ ಸೊಪ್ಪು, ಅಣ್ಣೇ ಸೊಪ್ಪು, ಕರಿಗಣಿಕೆ ಸೊಪ್ಪು, ಹೊನಗೊನೆ ಸೊಪ್ಪು, ಗಣಿಕೆ ಸೊಪ್ಪು, ಬೇಳೆ

ಸೊಪ್ಪು, ಅಕ್ಕೂರದಿ ಸೊಪ್ಪು, ಕೆಂಪುಗಣಿಕೆ ಸೊಪ್ಪು, ಕುಂಬಳಕುಡಿ, ನಗ್ಗುಲಕುಡಿ, ನುಗ್ಗೇಕುಡಿ, ಕಿರುಗೋನಿ ಸೊಪ್ಪು, ವಳನೀರೆ ಸೊಪ್ಪು ಹೀಗೆ ಹಲವು ರೀತಿಯಾದ ಸೊಪ್ಪುಗಳನ್ನು ತಂದು ಕಾಳಿನೊಂದಿಗೆ ಬೇಯಿಸಿ ಮಾಡುವಂತೆ ಉಪ್ಪು ಸಾರಿಗೆ 'ಬೆರೆಕೆ ಸೊಪ್ಪಿನ ಸಾರು' ಎಂತಲೂ ಕರೆಯುವರು.

**ವಿಶೇಷ ಸಂದರ್ಭದ ಅಡುಗೆ:** ಕಡಲಬಾಳು ಪರಿಸರದ ದಿನನಿತ್ಯ ಮಾಡುವ ಅಡುಗೆಗಳಿಗಿಂತಲೂ ವಿಶಿಷ್ಟವಾದ ಸಂದರ್ಭಗಳಲ್ಲಿ ಹಬ್ಬ-ಹರಿದಿನಗಳಲ್ಲಿ, ಮದುವೆ, ತಿಥಿಗಳಲ್ಲಿ, ನಾಮಕರಣ ಮುಂತಾದ ಸಂದರ್ಭದಲ್ಲಿ ವಿಶೇಷವಾಗಿ ಅಡುಗೆ ತಯಾರು ಮಾಡುವರು. ಜೊತೆಗೆ ಸಂಕ್ರಾಂತಿ, ಯುಗಾದಿ, ಗೌರಿಹಬ್ಬ, ಮಾರಮ್ಮನ ಹಬ್ಬ, ದೀಪಾವಳಿ, ಶಿವರಾತ್ರಿ, ಶ್ರಾವಣಮಾಸ ಹೀಗೆ ಹಲವು ರೀತಿಯ ಸಂಪ್ರದಾಯದ ಹಬ್ಬಗಳಲ್ಲಿ ಸಿಹಿ ಅಡುಗೆಯ ಜೊತೆಗೆ ಮಾಂಸದ ಅಡುಗೆಯನ್ನು ಮಾಡುತ್ತಾರೆ.

**ಸಿಹಿ ಅಡುಗೆಗಳು:** ನಾವು ಮಾಡುವಂತಹ ಹಬ್ಬಗಳ ಮೇಲೆ ನಿರ್ಧರಿತವಾಗಿರುತ್ತದೆ. ಗ್ರಾಮಗಳಲ್ಲಿ ಒಂದು ರೂಢಿ ಸಂಪ್ರದಾಯವಿರುತ್ತದೆ. ಯಾವ ಯಾವ ಹಬ್ಬಗಳಿಗೆ ಸಿಹಿ ಆಹಾರಗಳನ್ನು ಮಾಡಬೇಕು ಎಂಬುದು. ಅವುಗಳ ಆಚರಣೆಗಳು ಸಸ್ಯಾಹಾರಿ ಅಡುಗೆಗಳನ್ನು ಸಹ, ಮದುವೆ ನಾಮಕರಣ ಹಬ್ಬಗಳ ಜೊತೆಗೆ ವಿಶೇಷ ದಿನಗಳಲ್ಲಿ ಸಿಹಿ ಅಡಿಗೆ ಯೋಜನೆ ಸಾಮಾನ್ಯವಾಗಿದೆ. ಪಾಯಸ, ಹೋಳಿಗೆ, ಕಡುಬು, ಶ್ಯಾವಿಗೆ, ಬೂಂದಿ, ಜಿಲೇಬಿ, ಮೈಸೂರು ಪಾಕು ಮಾಡುವುದನ್ನು ನಾವು ಸಿಹಿ ಅಡುಗೆ ಎಂದು ಕರೆಯುತ್ತೇವೆ.

**ಹೋಳಿಗೆ:** ಸಿಹಿತಿಂಡಿಯನ್ನು ವಿಶೇಷವಾದ ಸಂದರ್ಭಗಳಲ್ಲಿ ಮಾಡುವುದು ಸಹಜವಾಗಿದೆ. ಕಡಲೆಬೆಳೆ, ಬೆಲ್ಲ, ಏಲಕ್ಕಿ, ಮೈದಾಹಿಟ್ಟು ಮತ್ತು ಎಣ್ಣೆ ಬೇಕಾದ ವಸ್ತುಗಳು. ಕಡಲೆ ಬೆಳೆಯನ್ನು ನೀರಿನಲ್ಲಿ ಚೆನ್ನಾಗಿ ಬೇಯಿಸಿಕೊಂಡು ನೀರನ್ನು ಬಸಿಯಬೇಕು. ಬೆಲ್ಲವನ್ನು ಸಿಹಿಗೆ ತಕ್ಕಂತೆ ಹಾಕಿ ಬಳಿಕಲ್ಲಿನಲ್ಲಿ ರುಬ್ಬಿಕೊಳ್ಳುತ್ತಾರೆ. ಜೊತೆಗೆ ಏಲಕ್ಕಿಯನ್ನು ಹಾಕಿ ಹೋಳಿಗೆ ಮಾಡುತ್ತಾರೆ.

**ಕಾಯಾಲು/ಹಾಲಿನ ಕೀರು:** ತೆಂಗಿನಕಾಯಿಂದ ಮಾಡುವಂತಹದಾಗಿದೆ. ತುರಿದುಕೊಂಡು ಗುಂಡುಕಲ್ಲಿನಲ್ಲಿ ನುಣ್ಣಗೆ ರುಬ್ಬಿ ಕೊಂಡು ಅದಕ್ಕೆ ಏಲಕ್ಕಿಕಾಯಿ ಮತ್ತು ಬೆಲ್ಲವನ್ನು ಹಾಕಿ ಚೆನ್ನಾಗಿ ಕುದುಸಿದರೆ ಕಾಯಿಹಾಲು ತಯಾರಾಗುತ್ತದೆ.

**ಕಡುಬು:** ಕಡುಬು ಗಣೇಶನಿಗೆ ಪ್ರಿಯವಾದ ತಿಂಡಿ ತಿನಿಸು ಇದಾಗಿದೆ. ಆದ್ದರಿಂದ ಎಲ್ಲರ ಮನೆಯಲ್ಲೂ ಕಡುಬು ಮಾಡುತ್ತಾರೆ. ಅಕ್ಕಿಯನ್ನು ಹುರಿದು ಒರಳು ಕಲ್ಲಿನಲ್ಲಿ ಕುಟ್ಟಿ ಬೇಸಿಕೊಂಡಿರ ಬೇಕಾಗುತ್ತದೆ. ಮೊದಲೆ ಕುದಿಯುವ ನೀರಿಗೆ ಸ್ವಲ್ಪ ಬೆಲ್ಲ ಹಾಕಿ ಚೆನ್ನಾಗಿ ಕುದುಸಿ, ಕುದಿಸಿದ

ನೀರಿಗೆ ಅಕ್ಕಿಯ ಹಿಟ್ಟನ್ನು ಹಾಕಿ ದೊಣ್ಣೆಯಲ್ಲಿ ತಿರಿವಿ ಅದನ್ನು ತಟ್ಟೆ ಅಗಲಮಾಡಿ ಅದರೊಳಕ್ಕೆ ಎಳ್ಳು ಬೆಲ್ಲವನ್ನು ಕುಟ್ಟಿ ಪುಡಿಮಾಡಿಕೊಂಡಿದ್ದು, ನಂತರ ಅದರ ಅರ್ಧ ಭಾಗಕ್ಕೆ ಮಡಿಚಿದರೆ ಅರ್ಧ ಚಂದ್ರನ ಆಕೃತಿಯಲ್ಲಿ ಬರುತ್ತದೆ. ಇದನ್ನು ಕಾಯಿಹಾಲು, ಪಾಯಸದ ಜೋಡಿ ತಿಂದರೆ ತುಂಬಾನೆ ಚೆನ್ನಾಗಿರುತ್ತದೆ.

**ಶ್ಯಾವಿಗೆ:** ಶ್ಯಾವಿಗೆಯನ್ನು ಮೈದಾ ಅಥವಾ ಗೋಧಿ ಹಿಟ್ಟಿನಿಂದ ಮಾಡುತ್ತಾರೆ. ಮೈದ ಹಿಟ್ಟು ಮೊದಲು ನೀರಿನಲ್ಲಿ ಕಲಸಿ ಗಟ್ಟಿಯಾಗಿ ಮಾಡಿ ನಂತರ ಕಡಲೆಕಾಯಿ ಎಣ್ಣೆಯಿಂದ ಚೆನ್ನಾಗಿ ಕೂಡಿಸಿ ಮೇಣದ ರೀತಿ ಮಾಡಿಕೊಂಡು ಕಾಯಿಯ ಜೊತೆಯಲ್ಲಿ ತಿನ್ನುತ್ತಾರೆ.

**ಪಾಯಸ:** ಪಾಯಸವನ್ನು ರವೆಯಿಂದ ಮತ್ತು ಅಕ್ಕಿಯ ನುಚ್ಚಿನಿಂದ ತಯಾರು ಮಾಡುತ್ತಾರೆ. ಅಕ್ಕಿಯ ನುಚ್ಚು ಮಾಡಿ ನೀರಿಗೆ ಅಕ್ಕಿಯ ನುಚ್ಚನ್ನು ಜೊತೆಗೆ ಸಕ್ಕರೆ ಅಥವಾ ಬೆಲ್ಲವನ್ನು ಹಾಕಿ ತಿರುವಿದರೆ ಪಾಯಸ ತಯಾರಾಗುತ್ತದೆ. ಅದಕ್ಕೆ ಸ್ವಲ್ಪ ಕಾಯಿತುರಿ ಏಲಕ್ಕಿ ಜಜ್ಜಿ ಹಾಕಿದರೆ ಪಾಯಸ ತಿನ್ನಲು ಸಿದ್ಧವಾಗುತ್ತದೆ.

**ಬೆಲ್ಲದನ್ನ:** ಸಹಜವಾಗಿ ದೇವರಿಗೆ ಈ ನೈವೇದ್ಯ ಪ್ರಿಯವಾದದು. ದೇವರಿಗೆ ತಳಿಗೆ ಮಾಡುವಂತಹ ಸಮಯದಲ್ಲಿ ಈ ಆಹಾರವನ್ನು ತಯಾರಿಸುತ್ತಾರೆ. ಬೆಲ್ಲದ ನೀರಿಗೆ ಅಕ್ಕಿಯನ್ನು ತೊಳೆದು ಹಾಕಿ ಜೊತೆಗೆ ತೆಂಗಿನಕಾಯಿ ನೀರು ಏಲಕ್ಕಿಯನ್ನು ಹಾಕುತ್ತಾರೆ. ಇದನ್ನು ನಾವು 'ತಳಿಗೆ' ಎಂದು ಕರೆಯುತ್ತಾರೆ.

**ಗಿಣ್ಣ:** ಈ ಆಹಾರ ವಿಶಿಷ್ಟವಾದುದು. ವಿಶೇಷ ಸಮಯದಲ್ಲಿ ಮಾತ್ರ ಸಿಗುವಂತದ್ದು. ಹಸುವಿನ ಹಾಲಿನಲ್ಲಿ ಮಾಡಿದಂತಹ ಈ ಗಿಣ್ಣು ಅಮೃತಕ್ಕೆ ಸಮಾನ ಎಂದು ನಾವು ಸ್ವೀಕರಿಸುತ್ತೇವೆ. ಹಸು ಕರು ಹಾಕಿದ ನಂತರ ಸುಮಾರು ಒಂದು ವಾರದವರೆಗೂ ಗಿಣ್ಣಾಲುಕೊಡುತ್ತದೆ. ಆ ಹಾಲನ್ನು ಕರೆದು ಒಂದು ಪಾತ್ರೆಗೆ ತುಂಬಿಡುತ್ತಾರೆ, ನಂತರ ತಮಗೆ ಬೇಕಾದಷ್ಟು ಈ ಗಿಣ್ಣದ ಹಾಲನ್ನು ಹಾಕಿ ಬೆಲ್ಲವನ್ನು ಹಾಕಿ ಚೆನ್ನಾಗಿ ಕುದಿಸಬೇಕು. ಇದು ತುಂಬಾನೇ ಪೌಷ್ಟಿಕವಾದ ಆಹಾರವಾಗಿದೆ. ಅಷ್ಟುಬೇಗನೇ ಕೆಡುವುದಿಲ್ಲ. ರಾತ್ರಿ ಮಾಡಿಟ್ಟು ಬೆಳಿಗ್ಗೆ ಎದ್ದು ತಿಂದರೆ ತುಂಬಾನೇ ರುಚಿ ಇರುತ್ತದೆ.

**ತಾಳ್ದ:** ತಾಳ್ದ ಅಂದ ತಕ್ಷಣವೇ ನಮ್ಮ ಬಾಯಿಯಲ್ಲಿ ನೀರು ಬರುವುದು ಸಹಜವಾಗಿದೆ ತಾಳ್ದದಲ್ಲಿ ಹಲಸಿನಕಾಯಿ ತಾಳ್ದ ಅವರೆಕಾಯಿ ತಾಳ್ದ ಎಂದು ಮಾಡುತ್ತಾರೆ. ಸಾಮಾನ್ಯವಾಗಿ ಸುಗ್ಗಿಯ ಸಂದರ್ಭದಲ್ಲಿ ಇದನ್ನು ಮಾಡುವರು. ಎಲ್ಲ ತರಹದ ತರಕಾರಿಗಳನ್ನು ಹಾಕಿ ಜೊತೆಗೆ ಹಲಸಿನ ಕಾಯಿ ದುದ್ದೆಯ ತೊಳೆಹಾಕಿ ಚೆನ್ನಾಗಿಯೇ ಬೇಯಿಸುತ್ತಾರೆ. ಗಟ್ಟಿಯಾಗಿ ಗೊಜ್ಜು ಮಾಡುತ್ತಾರೆ.

## ಮಾಂಸಹಾರ ಪದ್ಧತಿ



ಕಡಲಬಾಳು ಗ್ರಾಮದಲ್ಲಿ ಊರಿನ ಗ್ರಾಮದೇವತೆಗಳ ಹಬ್ಬದಲ್ಲಿ ಮತ್ತು ಯುಗಾದಿಯ ನಂತರದ ವರ್ಷ ತೊಡಕು ಹಬ್ಬಕ್ಕೆಂದು ಮಾಂಸಾಹಾರಗಳನ್ನು ಸೇವಿಸುವುದು ಕಂಡುಬರುತ್ತದೆ. ಬಹಳ ಮುಖ್ಯವಾಗಿ ಕುರಿ, ಕೋಳಿ, ಮೇಕೆ, ಕೋಣ, ಎತ್ತುಗಳನ್ನು ಮಾಂಸಾಹಾರಗಳನ್ನಾಗಿ ಸೇವಿಸುತ್ತಾರೆ.

## ಜನಪದ ವೈದ್ಯ



ಕಡಲಬಾಳದಲ್ಲಿ ಜನಪದ ವೈದ್ಯ ಪದ್ಧತಿ ಬಹಳ ಪ್ರಾಚೀನತೆಯಿಂದ ನಡೆದುಕೊಂಡು ಬಂದಿದೆ. ಒಂದು ರೀತಿಯ ತಾಯಿ ಬೇರು. ಇದು ಆಯಾ ಪರಿಸರಕ್ಕೆ ಸಂಬಂಧಿಸಿರುತ್ತದೆ. ಇದರ ಮುಖ್ಯ ಉದ್ದೇಶ ರೋಗ–ರುಜಿನಿಗಳಿಂದ ಮುಕ್ತರಾಗಿಸುವುದು. ನಿತ್ಯ ಮೂಲಿಕೆ ಪದ್ಧತಿ, ರಸ ಮೂಲಿಕೆಯ ಪದ್ಧತಿ, ಯಂತ್ರ–ಮಂತ್ರಗಳ ಪದ್ಧತಿಯು ಹಳ್ಳಿಗಳಲ್ಲಿ ಇದೆ. ಮಗುವಿಗೆ ಜ್ವರ ಬಂದಾಗ ಬಳೆಯಿಂದ ಅಂದರೆ ಒಡೆದ ಬಳೆಯ ಚೂರಿನಿಂದ ಮತ್ತು ಬೇವಿನಕಡ್ಡಿಯಿಂದ ಸ್ವಲ್ಪ ಬೆಚ್ಚಗೆ ಮಾಡುವರು. ಕಾಲಿಗೆ ಗಾಯವಾದರೆ ದಾಟುಬಕ್ಕಿ ಎಂದು ಭಾವಿಸಿ ೩ ಬಾಯಿ ಎಲೆಯಲ್ಲಿ ನೀರು ಹಾಕುತ್ತಾರೆ. ಅಂದರೆ ಸ್ವಲ್ಪ ನೀರು ಎಲೆ ಕುಂಕುಮ ಹಾಕುತ್ತಾರೆ. ಇನ್ನು ಕೆಲವರು ತೆಲೆಯ ಮೇಲಿನಿಂದ ಕೆಳಗೆ ನೀರು ಹಾಕುತ್ತಾರೆ. ನಾಯಿ ಕೆಮ್ಮು ತೆಲೆನೋವು ಬಂದಾಗ ಬೆಳುಳ್ಳಿ ಲವಂಗವನ್ನು ಚೆನ್ನಾಗಿ ಅರೆದು ತೆಲೆಗೆ ಹಚ್ಚಿಕೊಳ್ಳುತ್ತಾರೆ.

ಒಂದು ವೇಳೆ ಮಗು ಹಾಲು ಕುಡಿದು ಕಕ್ಕಿದರೆ ಬೆರಳಲ್ಲಿ ಜೇನು ತುಪ್ಪ ಚೀಪಿಸುತ್ತಾರೆ. ಜೊತೆಗೆ ಮಗುವಿಗೆ ಬಾಯಿ ಒಡೆದರೆ ಜಂತುಹುಳು, ವಾಂತಿ, ಪಿತ್ತ, ನಾಯಿ ಕಚ್ಚಿದ್ದರೆ ಕಡಲಬಾಳು ಗ್ರಾಮದ ಜನರು ತಮ್ಮದೆಯಾದ ಪರಿಣಾಮಕಾರಿ ಮನೆಯ ನಾಟಿ ವೈದ್ಯ ಪದ್ಧತಿಯನ್ನು ಅವಲಂಬಿಸಿದ್ದಾರೆ. ಕುರಿಗಳಿಗೆ ಜ್ವರ, ಕಾಯಿಲೆ ಬಂದಾಗ ಔಷಧವನ್ನು ತಯಾರು ಮಾಡುತ್ತಾರೆ.

## ನ್ಯಾಯ ವ್ಯವಸ್ಥೆ

ಇದು ಬಹುತೇಕವಾಗಿ ಗ್ರಾಮೀಣ ಪ್ರದೇಶದಲ್ಲಿ ವಿಶಿಷ್ಟ ಪಾತ್ರವಹಿಸುತ್ತದೆ. ಇಲ್ಲಿ ಪ್ರಮುಖವಾಗಿ ಗ್ರಾಮದೇವರೇ ನ್ಯಾಯ ತೀರ್ಮಾನ ಮಾಡುತ್ತಾರೆ. ಹಲವಾರು ಸಮುದಾಯದವರು ಗೌಡರು, ಗೊಂಚಿಗಾರ್ ನ್ಯಾಯ ತೀರ್ಮಾಗಳನ್ನು ಮಾಡುತ್ತಾರೆ. ಈ ಕಡಲಬಾಳು ಗ್ರಾಮದ ಸಣ್ಣ ಪುಟ್ಟ ಸಮಸ್ಯೆಗಳಿದ್ದರೆ ಊರಿನ ಮುಖಂಡರು ಗ್ರಾಮಸ್ಥರಿಗೆ ಸಂಬಂಧಿಸಿದಂತೆ ಊರಿನಲ್ಲಿರುವ ಹಿರಿಯರ ಮೂಲಕ ಬಗೆ ಹರಿಸುತ್ತಾರೆ.

### ಅತಿಥಿ ಸತ್ಕಾರ

ಈ ಗ್ರಾಮದಲ್ಲಿ ಮನೆಗೆ ಬಂದಂತಹ ಅತಿಥಿಗಳನ್ನು ಗೌರವಿಸುತ್ತಾರೆ. ಇವತ್ತಿಗೂ ಹಳ್ಳಿಯಲ್ಲಿ ಅತಿಥಿ ಸತ್ಕಾರ ಹಿರಿದಾಗಿರುತ್ತದೆ. ಅತಿಥಿಗಳಿಗೆ ನಗರ ಪ್ರದೇಶದಲ್ಲಿ ನೇರವಾಗಿ ಮಾತನಾಡಿ ಹಾಗೆಯೇ ಕಳುಹಿಸುತ್ತಾರೆ. ಆದರೆ ಮನೆಗೆ ಯಾರೇ ಬಂದರು ಕಡಲಬಾಳಲ್ಲಿ ಸತ್ಕರಿಸುವ ಗುಣವಿದೆ. ನೀರುಕೊಟ್ಟು ನಂತರ ಮನೆಗೆ ಬಂದವರಿಗೆ ಮಳೆ-ಬೆಳೆಯ ಬಗ್ಗೆ ವಿಚಾರಸಿ, ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಮಾತನಾಡುತ್ತಾರೆ. ಹೆಣ್ಣು ಮಕ್ಕಳು ಮನೆಗೆ ಬಂದರೆ ಅರಿಶಿನ-ಕುಂಕುಮ ಕೊಟ್ಟು ಕಳುಹಿಸುತ್ತಾರೆ.

### ಸಾಮಾಜಿಕ ಸಾಮರಸ್ಯ

ವರ್ಣ ವ್ಯವಸ್ಥೆ ಶ್ರೇಣೀಕರಣ ಭಾರತದಲ್ಲಿ ಆದಿ ಅನಾದಿ ಕಾಲದಿಂದಲೂ ಉಳಿದು ಕೊಂಡು ಬಂದಿರುವುದು. ಇದು ಸಾಮಾಜಿಕ ವ್ಯವಸ್ಥೆಯಲ್ಲಿ ಕೋಮುವಾದಿಗಳಿಂದ ಸಮಾಜದ ಸ್ವಾಸ್ಥ್ಯ ಕೆಡುತ್ತದೆ. ಆದರೂ ಆಗಾಗ ಅಲ್ಲಲ್ಲಿ ಅಂತಹ ಘಟನೆಗಳು ನಡೆಯುತ್ತಲೇ ಇರುತ್ತವೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಕಡಲಬಾಳು ಗ್ರಾಮ ಸಮುದಾಯದ ನಡುವೆಯೂ ಸಮುದಾಯತೀತ್ವ ಕಾಯ್ದುಕೊಂಡಿದೆ ಎಂಬುದು ಕ್ಷೇತ್ರ ಕಾರ್ಯದಿಂದ ತಿಳಿಯುತ್ತದೆ. ಏಕೆಂದರೆ ಗ್ರಾಮದಲ್ಲಿರುವ ಎಲ್ಲಾ ಮತಧರ್ಮದವರು ತಮ್ಮ ತಮ್ಮ ಮತಧರ್ಮದ ಸಂಪ್ರದಾಯ, ಆಚರಣೆ, ವಿಧಿವಿಧಾನಗಳನ್ನು ಕಟ್ಟು ನಿಟ್ಟಾಗಿ ಆಚರಿಸುತ್ತಾರೆ. ಮಹಾವೀರ ಜಯಂತಿ, ಕನಕದಾಸ ಜಯಂತಿ, ಪೈಗಂಬರ್ ಜಯಂತಿ, ಅಂಬೇಡ್ಕರ್ ಜಯಂತಿ, ವಾಲ್ಮೀಕಿ ಜಯಂತಿ, ಬಸವೇಶ್ವರ ಜಯಂತಿ, ಹೀಗೆ ಗ್ರಾಮದಲ್ಲಿರುವ ಎಲ್ಲಾ ಸಮುದಾಯದವರು ತಮ್ಮ ತಮ್ಮ ಧರ್ಮದ ಜಯಂತಿಯನ್ನು ಅದ್ಧೂರಿಯಾಗಿ ಆಚರಿಸುತ್ತಾರೆ. ಇದನ್ನು ಸಂಕುಚಿತ ಭಾವನೆಯಿಂದ ನೋಡಿದರೆ ಸಮಾಜ ವಿಘಟನೆಯಾಗುತ್ತದೆ ಎಂತಲೂ ಅನಿಸಬಹುದು. ಆದರೆ ಅದರ ಒಳಹೊಕ್ಕು ನೋಡಿದರೆ ಎಲ್ಲ ಸಮುದಾಯದವರು ಸೇರಿ ಎಲ್ಲಾ ಜಯಂತಿಗಳನ್ನು ಆಚರಿಸುತ್ತಿರುವುದು ಅವುಗಳು ಸಾರ್ವತ್ರಿಕ ಧರ್ಮ ಸಭೆಗಳಾಗುತ್ತಿರುವುದು ಕಂಡುಬರುತ್ತದೆ. ಅಷ್ಟೇ ಅಲ್ಲ, ಎಲ್ಲಾ ಧರ್ಮ ಆಚರಣೆಗಳಲ್ಲಿಯು ಭಾವೈಕ್ಯತೆ ಇದೆ. ಮುಸ್ಲಿಂಮರು ತಮ್ಮ ಧರ್ಮದ ನಮಾಜ್ ಖುರಾನ್ ಓದುವುದರ ಜೊತೆಗೆ ದುರುಗಮ್ಮ, ಭೈರಪ್ಪ, ದ್ಯಾಮಮ್ಮ ಮುಂತಾದ ಹಿಂದೂ ಸಂಪ್ರದಾಯದ ದೇವತೆಗಳಿಗೆ ಎಣ್ಣೆ ಬತ್ತಿ, ಊದಿನ ಕಡ್ಡಿ, ಹೂ-ಹಣ್ಣು, ಕಾಯಿ, ಸೀರೆ ಕುಪ್ಪಸಗಳನ್ನು ಅರ್ಪಿಸಿ ಪೂಜೆ ಸಲ್ಲಿಸಿ ಹರಕೆ ತೀರಿಸುತ್ತಾರೆ ಹಾಗೂ ಮುಸ್ಲಿಮ ಸಂಪ್ರದಾಯದ ಮೊಹರಂ ಆಚರಣೆಯ, ಬಹುಪಾಲು ಜವಾಬ್ದಾರಿ ಹಿಂದುಗಳ ಹಾಗೂ ಜೈನ ಧರ್ಮದವರದ್ದಾಗಿರುತ್ತದೆ. ರಂಜಾನ್ ತಿಂಗಳಲ್ಲಿ ಹಲವಾರು ಹಿಂದೂಗಳು ಸಹ

ರೋಜಾ ಮಾಡುತ್ತಾರೆ. ರೋಜಾ ಹಿಡಿದ ಮುಸ್ಲಿಂ ಭಕ್ತರಿಗೆ ಗ್ರಾಮದ ಹಿಂದುಗಳು ಊಟದ ವ್ಯವಸ್ಥೆ ಮಾಡುತ್ತಾರೆ.

ರಂಜಾನ್, ಬಕ್ರೀದ್ ಹಾಗೂ ಮೊಹರಂ ಹಬ್ಬದ ಜಾತ್ರೆಗಳಲ್ಲಿ ಮುಸಲ್ಮಾನ ಬಾಂಧವರು ಹಿಂದೂಗಳನ್ನು ದೀಪಾವಳಿ, ಮಹಾನವಮಿ, ಸೀಗೆ ಹುಣ್ಣಿಮೆ ಮುಂತಾದ ವಿಶಿಷ್ಟ ಹಬ್ಬಗಳಲ್ಲಿ ಹಿಂದುಗಳು ಮುಸಲ್ಮಾನ ಭಾಂದವರಿಗೆ ಊಟಕ್ಕೆ ಆಹ್ವಾನಿಸುತ್ತಾರೆ.

ಗ್ರಾಮದ ಮುಸ್ಲಿಂ ದೈವಕ್ಕೆ ಹಿಂದು ಮಹಿಳೆ ದೀಡ್ ನಮಸ್ಕಾರ ಹಾಕಿ ಸಕ್ಕರೆ ಓದಿಸಿಕೊಂಡು ಹೋಗುತ್ತಾರೆ. ಹಾಗೆಯೇ ಮುಸ್ಲಿಂ ಮಹಿಳೆ ಹಿಂದೂ ದೇವರಿಗೆ ನೈವೇದ್ಯ ಮತ್ತು ಕಾಯಿ, ಕರ್ಪೂರ ಅರ್ಪಿಸುವುದನ್ನು ಇಲ್ಲಿ ನೋಡಬಹುದು. ಈ ಎಲ್ಲ ಅಂಶಗಳು ಗ್ರಾಮದ ಸಾಮಾಜಿಕ ಸಾಮರಸ್ಯದ ಸಂಕೇತಗಳಾಗಿವೆ ಹಾಗೂ ಪ್ರತಿವರ್ಷ ಯುಗಾದಿ ಪಾಂಡ್ಯದ ದಿನ ಗ್ರಾಮಸ್ಥರೆಲ್ಲಾ ಸೇರಿ ಸಾಮೂಹಿಕ ವಿವಾಹದ ಕಾರ್ಯನಿರ್ವಹಿಸುತ್ತಿರುವುದನ್ನು ಪರಿಪೂರ್ಣವಾಗಿ ಗಮನಿಸಿದರೆ ಎಲ್ಲ ಸಮುದಾಯದವರು ಭಾವೈಕ್ಯತೆಯಿಂದ ಅನ್ಯೋನ್ಯವಾದ ರೀತಿಯಲ್ಲಿ ಭಾಗವಹಿಸುವುದು ಕಂಡುಬರುತ್ತದೆ. ಆದರೂ ಸಹ ದೀಪದ ಕೆಳಗೆ ಕತ್ತಲು ಇರುವಂತೆ ಕೆಲ ಸ್ವಾರ್ಥ ಸಾಧಕರು ತಮ್ಮ ವೈಯಕ್ತಿಕ ಹಿತಾಸಕ್ತಿಗಾಗಿ ಅಧಿಕಾರದ ಲಾಲಸೆಗಾಗಿ ಪರೋಕ್ಷವಾಗಿ ಸಮುದಾಯಗಳಲ್ಲಿ ದುರಾಭಿಮಾನ ಬೆಳೆಸುತ್ತಿರುವುದನ್ನು ಸೂಕ್ಷ್ಮವಾಗಿ ಗ್ರಹಿಸಬಹುದು. ಆದರೆ ಇದೆಲ್ಲದರ ಹೊರತುಪಡಿಸಿದರೆ ಕಡಲಬಾಳು ಗ್ರಾಮ ಭಾವೈಕ್ಯತೆ ತಾಣ ಎಂದು ಹೇಳಬಹುದಾಗಿದೆ.

**ಜನಪದ ಆಟಗಳು:** ಗ್ರಾಮೀಣ ಭಾಗದಲ್ಲಿ ಕ್ರೀಡೆಗಳಿಗೆ ಕೊರತೆಯೇನಿಲ್ಲ. ಸಾಕಷ್ಟು ಕಂಡುಬರುತ್ತವೆ. ಇಂತಹ ಆಟಗಳಿಂದ ಗ್ರಾಮದ ಸಮುದಾಯದಲ್ಲಿನ ಪಾರಂಪರಿಕ ಮನೋರಂಜನೆಯನ್ನು ತಿಳಿಯಬಹುದಾಗಿದೆ.

**ಕಬಡ್ಡಿ ಆಟ:** ಈ ಆಟವು ಗ್ರಾಮೀಣ ಕ್ರೀಡೆಯಲ್ಲಿ ಬಹಳ ಪ್ರಮುಖವಾದದು. ಇದರಲ್ಲಿ ಏಳು ಜನರು ಆಟವಾಡುತ್ತಾರೆ. ಇದಕ್ಕೆ ತನ್ನದೇ ಆದ ಶಿಸ್ತು ನಿಯಮಗಳು ಇವೆ. ಇತ್ತೀಚಿನ ದಿನಗಳಲ್ಲಿ ಜನರಿಂದ ಕೂಡಿದ ಈ ಆಟವು ಹಗರಿಬೊಮ್ಮನಹಳ್ಳಿ ತಾಲೂಕಿನ ಕಡಲಬಾಳು ಎಂದರೆ ಕಬ್ಬಡಿ ಆಟಕ್ಕೆ ಪ್ರಸಿದ್ಧಿ ಪಡೆದಿರುವ ಉದಾಹರಣೆ ಇದೆ. ಹೆಣ್ಣುಮಕ್ಕಳು ಸಹ ಈ ಆಟವನ್ನು ಆಡುತ್ತಾರೆ.

ಆನ್-ದಿ-ಲೈನನ್ನಿ ಮುಟ್ಟಲು ಪ್ರಯತ್ನಿಸುತ್ತಾರೆ. ಎದುರಾಳಿಯು ಉಸಿರು ಬಿಡದಂತೆ ಪ್ರಯತ್ನಿಸುತ್ತಾನೆ. ಆಗ ಮುಟ್ಟಿದರೆ ಎದುರಾಳಿ ಹೊರಗಡೆ ಹೋಗುತ್ತಾನೆ. ಯಾವ ಗುಂಪು

ಹೆಚ್ಚಾಗಿ ಸಂಖ್ಯೆಯ ಪಾಯಿಂಟ್ ಹೊಂದಿರುತ್ತಾರೆ. ಅವರೇ ಈ ಆಟದ ಜಯಕಾರರು ಎಂದು ತಿಳಿಯಬಹುದಾಗಿದೆ.

**ಗುಂಡು ಎತ್ತುವ ಆಟ:** ಗ್ರಾಮದಲ್ಲಿ ಕೃಷಿಯೇ ಪ್ರಧಾನವಾಗಿರುತ್ತದೆ. ಹಬ್ಬ ಹರಿದಿನಗಳಲ್ಲಿ ಈ ಆಟವನ್ನು ಆಡುತ್ತಾರೆ. ೫೦,೧೦೦ ಕೆ.ಜಿ. ತೂಕದ ಚೌಕಾಕಾರದ ವೃತ್ತಾಕಾರದದ ಗುಂಡನ್ನು ಹೆಗಲ ಮೇಲೆ ಹೊತ್ತು ಕೊಳ್ಳುವುದು ದೇವಸ್ಥಾನದ ಮುಂದೆ ನಡೆಯುವ ಪದ್ಧತಿ. ಈಗಲೂ ಜೀವಂತವಾಗಿದೆ.

**ಕಣ್ಣು ಮುಚ್ಚಾಲೆ ಆಟ:** ಈ ಆಟವನ್ನು ಚಿಕ್ಕ ಮಕ್ಕಳು ಆಟವಾಡುವುದಾಗಿದೆ. ಇತ್ತೀಚಿನ ದಿನಗಳಲ್ಲಿ ಈ ಆಟವು ಕಣ್ಮರೆಯಾಗಿದ್ದು, ಈಗ ಚಿಕ್ಕ ಮಕ್ಕಳೆಲ್ಲ ಟಿ.ವಿ., ಮೊಬೈಲ್ ಹಾಗೂ ಕಂಪ್ಯೂಟರ್ ಗೇಮ್‌ಗಳ ಮೊರೆ ಹೋಗಿದ್ದಾರೆ. ಇದರ ವಿಶೇಷತೆ ಅಂದರೆ ಅವರು ಬಿಟ್ಟು ಇವರನ್ನು ಯಾರೆಂದು ಹೇಳುತ್ತಾರೆ. ಉಳಿದವರು ಅಡಗಿಕೊಳ್ಳುತ್ತಾರೆ. ಈ ರೀತಿಯಾಗಿ ಆಟದ ವಿಶೇಷತೆ. ಮೊದಲಿಗೆ ಮುಟ್ಟಿಸಿಕೊಂಡವರು ಕಣ್ಣು ಕಟ್ಟಿಸಿಕೊಳ್ಳಬೇಕು.

**ಪ್ರಾಣಿಗಳಿಗೆ ಸಂಬಂಧಿಸಿದ ಆಟಗಳು:** ಪ್ರತಿಯೊಂದು ಊರಿನಲ್ಲಿಯೂ ಸಹ ತಾವು ಆಟವನ್ನು ಆಡುವುದರ ಜೊತೆಗೆ ಪ್ರಾಣಿಗಳನ್ನು ಸಹ ಖುಷಿಪಡಿಸುವ ಪ್ರವೃತ್ತಿ ಈಗಲೂ ಇದೆ. ತಾವು ಸಾಕಿದ ಪ್ರಾಣಿಯು ಆಟದಲ್ಲಿ ಗೆದ್ದರೆ ತಾವು ಗೆದ್ದಂತೆ ಎಂದು ಸಂತೋಷ ಪಡುತ್ತಾರೆ. ಯಾಕೆಂದರೆ ಪ್ರಾಣಿಗಳು ಮನುಷ್ಯನ ಅವಿಭಾಜ್ಯ ಅಂಗವಾಗಿದೆ. ಕಡಲಬಾಳು ಗ್ರಾಮದಲ್ಲಿ ಬಹಳಷ್ಟು ಪ್ರಚಲಿತವಿರುವ ಕಡಲಬಾಳು ಆಂಜನೇಯ ಸ್ವಾಮಿಯ ಕತೆ ಮತ್ತು ಮುಳ್ಳಿನ ಪವಾಡ. ಹಾಗೆ ಕಾರ ಹುಣ್ಣಿಮೆಯ ಸಂದರ್ಭದಲ್ಲಿ ಪ್ರಾಣಿಗಳಿಗೆ ಮೈತೊಳೆದು ಸುಂದರವಾಗಿ ಅಲಂಕರಿಸುತ್ತಾರೆ. ಎತ್ತುಗಳಿಗೆ ಕುಂಕುಮ ಅರಿಶಿನ ಇಡುತ್ತಾರೆ. ಇನ್ನು ಕೆಲವೆಡೆ ಮನುಷ್ಯ ಮತ್ತು ಪ್ರಾಣಿಗಳಲ್ಲಿ ನಿಕಟವಾದ ಸಂಬಂಧವಿದೆ ಎಂದು ಭಾಸವಾಗುತ್ತದೆ. ಹೀಗಾಗಿಯೇ ಜನಪದ ಸಂಸ್ಕತಿಯು ಬದುಕಿನ ಭಾಗವಾಗಿದೆ.

**ಜನಪದ ಕಲೆಗಳು**

ಗ್ರಾಮದಲ್ಲಿ ಜನಪದ ಕಲೆಗಳು ಸ್ವಲ್ಪಮಟ್ಟಿಗೆ ಉಳಿದುಕೊಂಡು ಬಂದಿದೆ ಎಂದರೆ ತಪ್ಪಾಗಲಾರದು. ಅವಿತುಕೊಂಡ ಕಲೆಯನ್ನು ಪರಿಸರದಲ್ಲಿ ಅಭಿವ್ಯಕ್ತಗೊಳಿಸುವ ಕಾಲ ಆರಂಭವಾಗಿದೆ. ತನಗೆ ಅವಕಾಶ ಸಿಕ್ಕಾಗಲೇ ಸಂತೋಷದ ಕ್ಷಣಗಳು. ಪ್ರಕೃತಿ ಪರಿಸರದೊಂದಿಗೆ ಚಿತ್ರವನ್ನು ಬಿಡಿಸುವ ಕಲೆಯನ್ನು ರೂಪಿಸಿಕೊಂಡಿದ್ದಾರೆ. ಹೀಗೆ ಜೀವನದ ಬದುಕಿಗೆ ಸಹಾಯ ಮಾಡುವುದೇ ಜನಪದ ಕಲೆಯಾಗಿದೆ. ಈ ಕಲೆಯು ಇಂದು ನಿನ್ನೆಯದಲ್ಲ ಬಹುದಿನಗಳ

ಹಳೆಯ ಕತೆ. ತಲ-ತಲಾಂತರಗಳಿಂದ ಬಂದ ಕಲೆಯಾಗಿವೆಯೆಂದು ನಮಗೆ ಕಡಲಬಾಳಿನ ಗ್ರಾಮದ ಕಲೆಗಳಿಂದ ತಿಳಿದುಬರುತ್ತದೆ. ಪ್ರತಿಯೊಂದು ಕಲೆಯ ಉದ್ದೇಶ ಸಂತೋಷಪಡಿಸುವುದಾಗಿದೆ. ಪ್ರತಿಯೊಬ್ಬರು ಬದುಕಲು ಹೃದಯ ಸಂಸ್ಕಾರ ಸೌಹರ್ದತೆಯ ಮೌಲ್ಯಗಳನ್ನು ಸಹ ತಿಳಿಸುತ್ತವೆ. ಯಾವುದೇ ಕಲೆಗಳು ಬರು-ಬರುತ್ತಾ ವ್ಯಕ್ತಿಯ ಕಲೆಯಾಗಿ ಪರಿವರ್ತನೆಯಾಗಿದೆ ಎಂದು ಹೇಳಬಹುದಾಗಿದೆ. ಪ್ರಾಣಿಗಳಿಗೆ ಸಂಬಂಧಿಸಿದ ಚಿತ್ರ ಬಿಡಿಸಲಾರಂಭಿಸಿದ. ಗೌರಿ ಹಬ್ಬಕ್ಕೆ ಬೇಕಾದ ಅಚ್ಚುಗಳು ಪ್ರತಿಮೆಗಳನ್ನು ಮೊದಲೇ ತಯಾರಿಸಿಕೊಂಡಿರುತ್ತಾರೆ. ಇದು ಜೀವನವು ಪೂರಕವಾಗಿದ್ದು, ಬಣ್ಣ-ಬಣ್ಣದ ಕೌದಿಯನ್ನು ಹೊಲಿಯುತ್ತಾರೆ. ನಾನಾ ರೀತಿಯ ಬಟ್ಟೆಯನ್ನು ಧರಿಸಿಕೊಂಡು ವಿಭಿನ್ನ ಶೈಲಿಯಲ್ಲಿ ಬಟ್ಟೆಯನ್ನು ಚಿತ್ತಾರ ಮಾಡುತ್ತಾರೆ. ಇದು ಸಹ ಅವರ ಕಲೆಯನ್ನು ಪ್ರತಿಬಿಂಬಿಸುತ್ತವೆ.

**ಭಜನೆ ಸಂಘಗಳು:** ಭಜನೆಗೆ ಸಂಬಂಧಿಸಿದಂತೆ ಹಾಡುಗಳ ಸೂತ್ರಗಳನ್ನು ತಿಳಿಸುವುದೇ ಭಜನೆಯೆಂದು ಕರೆಯಲಾಗಿದೆ. ದೇವರನ್ನು ಸುತ್ತುವರೆದು ಆರಾಧನೆಗಳಿಂದ ಕಲೆ ಮತ್ತು ಸಾಹಿತ್ಯಕ್ಕೆ ಪೂರಕವಾದಂತಹ ವಿಧಾನಗಳಿಂದಲೇ ಭಗವಂತನ ನಾಮ ಸ್ಮರಣೆಗೆ ಸಂಬಂಧಿಸಿದಂತೆ ಶಿಶುನಾಳ ಶರೀಫರಿಗೆ ಸಂಬಂಧಿಸಿದ ಹಾಡು ಕುಣಿತ ಮಾಡಲಾಗುತ್ತಿದೆ. ಈ ಕಡಲಬಾಳು ಗ್ರಾಮದಲ್ಲಿ ಭಜನೆ ಪದಗಳನ್ನು ತುಂಬಾ ಹಾಡುತ್ತಾರೆ. ಅಮವಾಸ್ಯೆ, ಹಬ್ಬ-ಹರಿದಿನ, ಜಾತ್ರೆ, ಕಾರ್ತೀಕ ಮಾಸದಲ್ಲಿ ಮತ್ತು ಹಾಗೇ ಹಲವು ವಿಶೇಷವಾದಂತಹ ದಿನದಲ್ಲಿ ಭಜನೆಯನ್ನು ಮಾಡುತ್ತಾರೆ. ಇವುಗಳನ್ನು ಗಮನಿಸಿದರೆ ಅನುಭವ ತತ್ವಪದಗಳ ನೆಲೆಯಲ್ಲಿ ಹಾಗೂ ಇತ್ತೀಚೆಗೆ ವಚನಗಳನ್ನು ಹಾಡುವುದು ರೂಢಿಯಲ್ಲಿದೆ. ಜನಪದ ಪದಗಳು ಸಾಮಾಜಿಕ ಬದುಕಿನಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸುತ್ತವೆ.

**ಕೋಲಾಟ:** ಗ್ರಾಮದಲ್ಲಿ ಕೋಲಾಟ ಅತ್ಯಂತ ಚಿರಪರಿಚಿತವಾಗಿರುತ್ತದೆ. ಇದೊಂದು ಜನಪದ ಕಲೆಯಾಗಿದೆ. ವೈವಿಧ್ಯತೆಯಲ್ಲಿ ಏಕತೆಯ ಸಿದ್ಧಾಂತಕ್ಕೆ ಉದಾಹರಣೆ. ಈಗಲೂ ಕೂಡ ಜಾತ್ರೆಯ ಸಮಯಗಳಲ್ಲಿ ಕೋಲಾಟ ಆಡುವುದು ರೂಢಿಯಲ್ಲಿದೆ. ಕೋಲುಗಳಿಗೆ ಬಣ್ಣ ಹಚ್ಚಿ, ಮೆರೆಗು ಬರುವ ರೀತಿಯಲ್ಲಿ ತುದಿಗೆ ರಿಬ್ಬನ್ ಕಟ್ಟಿ ಗೆಜ್ಜೆ ಕಟ್ಟಿ ಅಲಂಕರಿಸುತ್ತಾರೆ. ಕಲಾವಿದರ ಕೋಲುಗಳಿಗೆ ನಮಸ್ಕಾರವನ್ನು ಮಾಡುವುದರೊಂದಿಗೆ ಕೋಲಾಟ ಪ್ರಾರಂಭಿಸುತ್ತಾರೆ. ಇದು ನೋಡುಗರಿಗೆ ತುಂಬಾನೇ ಖುಷಿ. ಕೋಲಾಟದಲ್ಲಿ ೧೦ ರಿಂದ ೧೨ ಜನಗಳ ಗುಂಪು ಇರುತ್ತಾರೆ.

**ಮೊಹರಂ ಹಬ್ಬ:** ಇದು ಬಹುತೇಕವಾಗಿ ಎಲ್ಲಾ ಹಳ್ಳಿಗಳಲ್ಲಿ ಆಚರಿಸುವ ಹಬ್ಬವಾಗಿದೆ. ಅಲ್ಲದೆ ಹಿಂದೂ-ಮುಸ್ಲಿಂರಲ್ಲಿ ಐಕ್ಯತೆ ಮೂಡಿಸುವಂತಹ ಹಬ್ಬವಾಗಿದೆ. ರಾತ್ರಿಯ ವೇಳೆಯಲ್ಲಿ ಅಲಾಯ ದೇವರು ಹೊರಟ ಸಂದರ್ಭದಲ್ಲಿ ಅಲಾಯ ಕುಣಿತ ಹಬ್ಬಕ್ಕೆ ವಿಶೇಷ ಮೆರುಗು ನೀಡುತ್ತದೆ.

ಹಲಗೆ ಬಡಿಯುವನ ತಾಳಕ್ಕೆ ತಕ್ಕಂತೆ ಕುಣಿಯಬೇಕು. ಒಬ್ಬರಿಗೊಬ್ಬರು ಕೈ ಹೊಡಿದು ಕುಣಿಯುತ್ತಾರೆ. ಈ ಹಬ್ಬವೇ ಊರಿನ ಸಮುದಾಯಗಳ ಮಧ್ಯ ಸಾಮರಸ್ಯ ಬೆಸೆಯುವಂತಹ ಹಬ್ಬ ಇದಾಗಿದೆ ಎಂದು ತಿಳಿಯಬಹುದಾಗಿದೆ.

**ಡೊಳ್ಳಿನ ಕುಣಿತ:** ಗ್ರಾಮದಲ್ಲಿ ಡೊಳ್ಳಿನ ಕುಣಿತ ವಿಶೇಷವಾಗಿದೆ. ಡೊಳ್ಳಿನ ಕುಣಿತ ಕುರುಬ ಸಮುದಾಯದಲ್ಲಿ ಹೆಚ್ಚಾಗಿದೆ. ಕಡಲಬಾಳು ಗ್ರಾಮದಲ್ಲಿ ಸೋಕ್ಕಪ್ಪರ ಮನೆಯಲ್ಲಿ, ಪೂಜಾರರ ಮನೆಯಲ್ಲಿ ಡೊಳ್ಳನ್ನು ಬಾರಿಸುವುದರಲ್ಲಿ ಪರಿಣಿತಿಯನ್ನು ಹೊಂದಿದ್ದಾರೆ.

**ಹಲಗೆ ಬಡಿಯುವವರು:** ಊರಿನಲ್ಲಿ ಹಲಗೆ ಬಡಿಯುವುದು ಸಹ ಒಂದು ಕಲೆಯಾಗಿದೆ. ಪ್ರಮುಖವಾಗಿ ಮಾದಿಗರ ಮನೆಯಲ್ಲಿ ಸತ್ತಾಗ ಇದನ್ನೇ ಬಾರಿಸುತ್ತಾರೆ. ಊರಿನಲ್ಲಿ ಏನಾದರೂ ಸಾರಬೇಕಾ(ಹೇಳಬೇಕಾ)ದಾಗ ಹಲಗೆಯನ್ನು ಹೆಚ್ಚಾಗಿ ಬಳಸುತ್ತಾರೆ. ಈ ಕೆಲಸವನ್ನು ಕಡಲಬಾಳು ಗ್ರಾಮದಲ್ಲಿ ಹೂಟಿಪ್ಪರ ಹನುಮಂತಪ್ಪನವರು ಮಾಡುತ್ತಾರೆ.

**ನಾಟಕ:** ನಾಟಕ ಸಾಹಿತ್ಯ ಒಂದು ವಿಶಿಷ್ಟವಾದುದಾಗಿದೆ. ಪ್ರಧಾನವಾಗಿ ನಾಟಕ ಮನುಷ್ಯನ ಜೀವನದಲ್ಲಿ ಹಾಸುಹೊಕ್ಕಾಗಿದೆ. ನಾಟಕವು ಮುಖ್ಯವಾಗಿ ಕಡಲಬಾಳು ಗ್ರಾಮದಲ್ಲಿ ಜನಜನಿತ ವಾಗಿದೆ. ತಮ್ಮ ಬದುಕಿನ ನಡುವೆ ಆಟದ ರೀತಿಯಲ್ಲಿ ನಾಟಕವನ್ನು ಬೆಳೆಸಿಕೊಂಡು ೨೦೦೦ ರಿಂದ ೨೦೧೬ರವರೆಗೂ ತುಂಬಾ ಚೆನ್ನಾಗಿ ಆಡುತ್ತಾ ಬಂದಿದ್ದಾರೆ. ಇತ್ತೀಚೆಗೆ ಸರಿಯಾಗಿ ಪ್ರೋತ್ಸಾಹ ಸಿಗದ ಕಾರಣ ಕಡಿಮೆಯಾಗಿದೆ. ಪೌರಾಣಿಕ, ಸಾಮಾಜಿಕ ನಾಟಕಗಳನ್ನು ಮಾಡುತ್ತಾರೆ. ನಾಟಕವು ಸಹಜವಾಗಿ ಪ್ರಾರಂಭವಾಗುವುದು ಹಬ್ಬ ಹರಿದಿನಗಳಲ್ಲಿ, ನಾಟಕವನ್ನು ಮಾಡುವುದು ಕಡಲಬಾಳು ಗ್ರಾಮದಲ್ಲಿ ಅತ್ಯಂತ ಜನಪ್ರಿಯವಾಗಿದೆ ಎಂದು ಹೇಳಬಹುದು.

ನಾಟಕದಲ್ಲಿ ಬೇಕಾದಂತಹ ಸ್ತ್ರೀಯರನ್ನು ಬೇರೆ ಕಡೆಯಿಂದ ಕರೆಯಿಸಿಕೊಳ್ಳುತ್ತಾರೆ. ಕಡಲಬಾಳು ಗ್ರಾಮದಲ್ಲಿ ಪ್ರಮುಖವಾದಂತಹ ನಾಟಕಗಳೆಂದರೆ ಪೂಜಾರ ಕಾಂತಪ್ಪ, ತಪ್ಪಲು ಶೆಟ್ಟಿ ಕೊಟ್ರಪ್ಪ ಇವರು ಸತ್ಯಹರಿಶ್ಚಂದ್ರ, ಸಂಪತ್ತಿಗೆ ಸವಾಲು ನಾಟಕವನ್ನು ಆಡುತ್ತಾರೆ. ಒಂದೇ ನಾಟಕವನ್ನು ಎರಡು-ಮೂರು ಬಾರಿ ಪ್ರದರ್ಶನ ತೋರಿಸಿ ಪ್ರಖ್ಯಾತಿಯನ್ನು ಪಡೆದಿದ್ದಾರೆ. ಈ ನಾಟಕವನ್ನು ನೋಡಲು ಬಂಧು ಮಿತ್ರರನ್ನು ಕರೆತರುತ್ತಿದ್ದರು. ಬಂದಂತಹ ಬಂಧು ಬಾಂಧವರು ತಮಗೆ ತಿಳಿದ ಕಾಣಿಕೆಯನ್ನು ಕೊಟ್ಟು ಹೋಗುತ್ತಿದ್ದರು.

### ೩.೨. ಆರ್ಥಿಕ ಸ್ಥಿತಿಗತಿ

ಕಡಲಬಾಳು ಗ್ರಾಮದಲ್ಲಿ ಕೃಷಿ ಸಂಸ್ಕೃತಿ ಪ್ರಧಾನವಾಗಿದೆ. ಕೃಷಿ ಪದ್ಧತಿಯು ಭೌಗೋಳಿಕವಾಗಿ ಬೇರೆ-ಬೇರೆ ಪ್ರದೇಶಗಳು ಪ್ರಾಕೃತಿಕ ಸನ್ನಿವೇಶಗಳ ಸಂದರ್ಭಗಳನ್ನು ಅನುಸರಿಸಿ ಮತ್ತು ಅವು

ಗಳಲ್ಲಿನ ಸಾಮಾಜಿಕ ಸ್ಥಿತಿ ಹಾಗೆಯೇ ಅಧಿಕ ಹಣದ ಖರ್ಚಿಲ್ಲದೆ ಹವಾಮಾನಕ್ಕೆ ಅನುಗುಣವಾಗಿ ಹೊಂದಿಕೊಂಡು ಸರಳ ಜ್ಞಾನ ಪ್ರಯೋಗದಲ್ಲಿ ವ್ಯವಸಾಯವನ್ನು ಮಾಡುವು ದಾಗಿದೆ. ಹಣದಾಸೆಗೆ ಬಲಿಯಾಗದೆ ನಿರಾಶೆಯನ್ನು ಪಡದೇ ಸಮ ಸ್ಥಿತಿಯಲ್ಲಿ ಕೃಷಿಯಲ್ಲಿ ಬದುಕು ನಡೆಸುತ್ತಿದ್ದಾರೆ. ಗ್ರಾಮದಲ್ಲಿ ಕೃಷಿಗೆ ಯೋಗ್ಯವಾದ ಭೂಮಿ ಮತ್ತು ಪರಿಸರವನ್ನು ಹೊಂದಿದೆ. ಕಡಲಬಾಳು ಗ್ರಾಮದಲ್ಲಿ ಅನೇಕ ರೀತಿಯ ಕೆರೆ, ಕಟ್ಟೆ, ಬಾವಿಗಳ ಇರುವಿಕೆಯನ್ನು ಕಾಣಬಹುದಾಗಿದೆ. ಇಲ್ಲಿನ ಪರಿಸ್ಥಿತಿ ಕರ್ನಾಟಕದ ಇತರೆ ಬೇರೆ-ಬೇರೆ ಪ್ರದೇಶಗಳಲ್ಲಿ ಕಂಡು ಬರುತ್ತಾದರೂ ಜನಪದೀಯವಾಗಿ, ಸಾಂಸ್ಕೃತಿಕವಾಗಿ ವಿಶೇಷವಾದ ಪ್ರಾಮುಖ್ಯತೆಯನ್ನು ನೀಡಲಾಗುತ್ತದೆ.

**ಸಾಂಪ್ರದಾಯಿಕ ಕೃಷಿ ಪದ್ಧತಿ:** ಈ ಗ್ರಾಮದಲ್ಲಿ ಸಾಂಪ್ರದಾಯಿಕವಾಗಿ ಕೃಷಿ ಮಾಡುತ್ತಿದ್ದಾರೆ. ಕಡಲಬಾಳು ಗ್ರಾಮದವರು ನೆಲ, ಜಲ ಹವಾಮಾನಗಳ ಲಭ್ಯತೆಯನ್ನು ಅರಿತು ಕೃಷಿ ಜ್ಞಾನವನ್ನು ಬಳಸಿಕೊಂಡಿದ್ದಾರೆ. ಗ್ರಾಮದಲ್ಲಿ ಪರಿಸರ, ಪ್ರಕೃತಿಯನ್ನು ಅತ್ಯಂತ ಹೃದಯ ಪೂರ್ವಕವಾಗಿ ಆರಾಧನೆಯನ್ನು ಮಾಡುತ್ತಾರೆ. ಕೃಷಿಯೇ ಮಾನವನ ಭೂಮಿ ಬಿಸಿಲು, ಮಳೆ, ಹವಮಾನಗಳಿಗೆ ಹೊಂದಿಕೊಂಡು ಅರಳಿ ರೂಪಗೊಂಡಿದ್ದ ಅನುಭವ, ಅನುಸರಣೆ ಯಿಂದಾಗಿ ರೈತ ಸಾಲ ತೀರಿಸಲಿಕ್ಕಾಗದೆ ಸಾವಿಗೆ ಶರಣಾಗುವ ದುರ್ಬಲ ಮನಸ್ಥಿತಿಗೆ ಬಂದಿದ್ದಾನೆ.

**ಖುಷ್ಕಿ ಬೇಸಾಯ:** ಹೆಸರೇ ಹೇಳುವಂತೆ ಮಳೆಯನ್ನು ಆಧರಿಸಿ ಬೆಳೆಯುವ ಬೇಸಾಯ ಬೆಳೆಗಳಿಗೆ ಖುಷ್ಕಿ ಬೆಳೆ ಎಂದು ಕರೆಯುತ್ತಾರೆ. ಈ ಪದವು ಸರ್ಕಾರದಲ್ಲಿ ಬಳಕೆಯಾಗಿಲ್ಲ. ನಮ್ಮ ಈ ಗ್ರಾಮದ ಜನರು ಒಣಭೂಮಿಯಲ್ಲಿ ಹೆಚ್ಚಾಗಿ ರಾಗಿಯನ್ನು ಬೆಳೆಯುತ್ತಾರೆ. ಹಾಗೆಯೇ ಅವರಿಗೆ ಬೇಕಾದ ದನಗಳು, ಎಮ್ಮೆ, ಆಡು, ಕುರಿಗಳಿಗೆ ಆಹಾರವಾಗುವಂತಹ ಮಿಶ್ರಿತ ಬೆಳೆಗಳ ಬೆಳೆಯುವಿಕೆಯನ್ನು ಕಾಣುತ್ತೇವೆ.

**ಬೇಸಾಯ:** ಬೇಸಾಯ ಮಾಡುವುದು ಬಡವರು ತಮ್ಮ-ತಮ್ಮಗೆ ಜೀವನಕ್ಕೆ ಬೇಕಾದಂತಹ ಅವರ ಮೂಲಭೂತ ಸೌಕರ್ಯಗಳನ್ನು ಅವರು ಬೇಸಾಯವನ್ನು ಮಾಡಿಕೊಂಡು ತಮ್ಮ ಜೀವನವನ್ನು ನಡೆಸಿಕೊಂಡು ಹೋಗುವುದು. ಈಗಲೂ ಈ ಕಡಲಬಾಳು ಗ್ರಾಮದಲ್ಲಿ ಜೀವಂತವಾಗಿ ಕಾಣಬಹುದಾಗಿದೆ.

**ಬಾಗಾಯಿತು:** ನಾವು ಬೆಳೆಯನ್ನು ಬೆಸಾಯಿಗಳ ಮೂಲಕ ಬಿತ್ತನೆ ಮಾಡದೆ ತೋಟದಲ್ಲಿ ಬೆಳೆಯುವಂತೆ ಬೆಳೆಯಲ್ಲಿ ಕಾಣಬಹುದಾಗಿದೆ. ಬಡವರು ಹೊಲವನ್ನು ಬಿತ್ತನೆ ಮಾಡುವಾಗ ಮೂರು ರೀತಿಯಾದಂತಹ ಹಂತದಲ್ಲಿ ಮಾಡುತ್ತೇವೆ. ಬಿತ್ತನೆ ಮಾಡುವುದು ಕುಯಿಲು ಮಾಡುವುದು ಕೊನೆಗೆ ಮಾಡುವುದನ್ನು ಕಾಣುತ್ತೇವೆ.

**ಹದ ಮಾಡುವುದು:** ನಾವು ಬೆಳೆಯನ್ನು ಬಿತ್ತುವ ಮೊದಲೇ ಭೂಮಿಯನ್ನು ಹದಮಾಡಿಕೊಳ್ಳಬೇಕು. ನಂತರ ಬೇಕಾದ ಗೊಬ್ಬರವನ್ನು ಹೊಲಕ್ಕೆ ಉಗ್ಗಿಊಳುವಂತೆ ಕೆಲಸವನ್ನು ಮಾಡಬೇಕು. ನಾವು ಹೊಲಕ್ಕೆ ರಸಗೊಬ್ಬರ ಹಾಕುವುದಕ್ಕಿಂತ ಹಸುವಿನ ಗೊಬ್ಬರವನ್ನು ಹೊಲದಲ್ಲಿ ಹಾಕಿದರೆ ಉತ್ತಮವಾದ ಬೆಳೆಯ ಫಲವನ್ನು ನಾವು ಕಾಣಬಹುದಾಗಿದೆ ನಂತರ ಬೀಜಗಳನ್ನು ಹೊಲದಲ್ಲಿ ಬಿತ್ತನೆ ಮಾಡಬಹುದಾಗಿದೆ.

**ಹೊಲಕಟ್ಟುವುದು(ಮೆದೆಹಾರುವುದು):** ನಾವು ಹೊಲದಲ್ಲಿ ಬೆಳೆದಂತಹ ಬೆಳೆಗಳನ್ನು ಕಟ್ಟಾವು ಮಾಡಿದ ನಂತರ ಅವುಗಳನ್ನು ಕಂತೆಯ ರೂಪದಲ್ಲಿ ಕಟ್ಟಿ ಒಣಗಿಸಲು ಬಿಡುತ್ತಾರೆ. ಆ ನಂತರ ಹೊಲದಲ್ಲಿಯೇ ಕಣಗಳನ್ನು ಮಾಡಿ ಬೆಳೆದಂತಹ ಬೆಳಗಣನು ತಂದು ಹಸನು ಮಾಡಿ ಧಾನ್ಯಗಳನ್ನು ತೆಗೆಯುತ್ತಾರೆ. ಈ ಸಂದರ್ಭದಲ್ಲಿಯೇ ಹಸನ ಮಾಡಿದಂತಹ ಧಾನ್ಯಗಳನ್ನು ಪೂಜೆ ಮಾಡಿ ಮನೆಗೆ ತೆಗೆದುಕೊಂಡು ಹೋಗುತ್ತಾರೆ. ಬೆಳೆಯನ್ನು ಬೆಳೆದ ನಂತರದಲ್ಲಿ ಹೊಲವನ್ನು ಮೂರು ನಾಲ್ಕು ತಿಂಗಳು ಚೆನ್ನಾಗಿ ಬಿಸಿಲಿಗೆ ಒಣಗಿಸಿ ಹದಮಾಡಿಕೊಳ್ಳುತ್ತಾರೆ.

**ಒಕ್ಕಣೆ ಮಾಡುವುದು:** ನಾವು ಬೆಳೆಯನ್ನು ಬೆಳೆದು ಅದರ ಫಲ ತೆಗೆದುಕೊಂಡು ಕಟ್ಟವು ಮಾಡಿದ ನಂತರ ಒಕ್ಕಣೆಯನ್ನು ಮಾಡುವುದಾಗಿದೆ. ರೈತರು ಸಮೃದ್ಧಿಯಾಗಿ ಬೆಳೆದ ರಾಗಿ, ಭತ್ತ, ಜೋಳ, ಅವರೇ, ಹುರುಳಿ ಹೀಗೆ ಮೊದಲಾದ ಧಾನ್ಯಗಳನ್ನು ಹುಲ್ಲಿನಿಂದ ಕಾಳುಗಳನ್ನು ಬೇರ್ಪಡಿಸುತ್ತಾರೆ.

**ಕಣ(ಕಳ):** ಊರಿನ ಹತ್ತಿರವಿರುವ ಅಥವಾ ಹೊಲದಲ್ಲಿ ಹತ್ತಿರದ ಜಾಗವನ್ನು ಸ್ವಚ್ಛವಾಗಿಟ್ಟು ಕೊಳ್ಳುವುದೇ ಕಣ\ಕಳ ಎನ್ನುವರು. ಅದಕ್ಕೆ ಸಗಣಿರಾಡಿಯನ್ನು ಹಾಕುವುದು ಹಾಗೂ ಎತ್ತುಗಳಿಂದ ಚೆನ್ನಾಗಿ ತುಳಿದು ಬಿಗಿ ಬರುವವರೆಗೂ ತುಳಿಸಿ ಗಟ್ಟಿಗೊಳಿಸುತ್ತಾರೆ. ಕೆಲವು ಸಂದರ್ಭದಲ್ಲಿ ಮೇಟಿಯ ಕಡೆಯಿಂದ ಸುತ್ತಿ ಸುತ್ತಿ ಇಡೀ ಕಣವನ್ನು ಸೂರ್ಯನ ಕಿರಣಗಳಿಂದ ಒಣಗಿಸುತ್ತಾರೆ. ಹೀಗೆ ಒಂದು ವಾರದವರೆಗೂ ಈ ಕೆಲಸಕಾರ್ಯವನ್ನು ಮಾಡುತ್ತಾರೆ. ಕಣವನ್ನು ಮಾಡುವವರು ಈ ರೀತಿಯ ಸಜ್ಜಾದ ಕಣಕ್ಕೆ ಬೆಳೆದ ಬೆಳೆಗಳನ್ನು ತಮದು ಹಸನು ಮಾಡಿಕೊಳ್ಳುತ್ತಾರೆ.

**ರಾಶಿ ಪೂಜೆ:** ಜನಪದರ ನಂಬಿಕೆಯೇ ಅವರ ಉಸಿರಾಗಿದೆ. ರೈತರು ವರ್ಷವಿಡೀ ತಾವು ಬೆಳೆದ ಬೆಳೆಗಳನ್ನು ಕಟಾವು ಮಾಡಿಕೊಂಡು ಬಂದು ಅವುಗಳನ್ನು ಕಣದಲ್ಲಿ ಹಸನ ಮಾಡುವರು. ಹಸನ ಮಾಡಿ, ರಾಶಿ ಹಾಕಿ ಪೂಜೆ ಮಾಡಿ, ಮನೆಗೆ ತೆಗೆದುಕೊಂಡು ಹೋಗುವರು.

**ಕಣಜ:** ಕಣಜ ಅಂದ ತಕ್ಷಣ ನಮಗೆ ನೆನಪಾಗುವುದು ಹಲವು ರೀತಿಯಾದ ಪ್ರಮುಖ ದವಸದಾನ್ಯಗಳನ್ನು ಕ್ರೋಢೀಕರಿಸಲು ಪ್ರಮುಖವಾಗಿ ಈ ಕಣಜವನ್ನು ಬಳಕೆ ಮಾಡುತ್ತಾರೆ.

ಹಾಗೆಯೇ ಕಣಜವನ್ನು ಬಿದಿರಿನಿಂದ ತೆಳುವಾದ ಅಚ್ಚೆಗಳಿಂದ ಹೆಣೆದ ಬುಟ್ಟಿಯನ್ನು ಮಾಡುವಿಕೆಯನ್ನು ಕಾಣಬಹುದಾಗಿದೆ. ಸಗಣಿಯಿಂದ ಸಾರಿಸಿ ಒಣಗಿಸಿ ಇಡುತ್ತಾರೆ. ರಾಗಿ, ಜೋಳ ಮುಂತಾದವುಗಳನ್ನು ಶೇಖರಣೆ ಮಾಡಬಹುದಾಗಿದೆ.

**ಮೂಡೆ:** ಮೂಡೆಯಲ್ಲಿ ದವಸಧಾನ್ಯಗಳನ್ನು ಕ್ರೋಢೀಕರಿಸುವುದಾಗಿದೆ. ಜೋಳದ ಕಾಳುಗಳನ್ನು ಮೂಡೆ ಒಳಗೆ ಹಾಕುತ್ತಾರೆ. ನಂತರ ಅದನ್ನು ಹಾಗೆಯೇ ಕೊರೆದು ಮುಚ್ಚುತ್ತಾರೆ. ಹಗೇವು ಎಂತಲೂ ಕರೆಯುವರು. ಬೆಳೆದ ಬೆಳೆಯನ್ನು ಶೇಖರಣೆ ಮಾಡಿದಂತಹ ದವಸ ಧಾನ್ಯವು ಹಾಳಗದ ರೀತಿಯಲ್ಲಿಯೇ ನೀವು ಜೋಪಾನ ಮಾಡುವುದನ್ನು ಕಾಣಬಹುದಾಗಿದೆ.

**ಅಳತೆಯ ಸಾಧನಗಳು:** ನಮ್ಮ ಪೂರ್ವಜರು ತಾವು ಕೊಂಡುಕೊಂಡಂತಹ ವಸ್ತುಗಳನ್ನು ಮತ್ತು ದಿನನಿತ್ಯದ ವ್ಯವಹಾರಗಳನ್ನು ನಡೆಸಲಿಕ್ಕೆ ಅವರದೇ ಆದ ಅಳತೆಯ ಮಾಪನಗಳನ್ನು ಮಾಡಿಕೊಂಡಿರುವುದು ಕಾಣಬಹುದು. ಈಗಲೂ ಸಹ ಗ್ರಾಮೀಣ ಪ್ರದೇಶಗಳಲ್ಲಿ ಇವುಗಳನ್ನು ಮಾಪನಗಳನ್ನು ಉಪಯೋಗಿಸುತ್ತಾರೆ. ಒಂದು ನಿರ್ದಿಷ್ಟತೆಯನ್ನು ಕಂಡುಹಿಡಿಯಲು ಅವುಗಳ ಪ್ರಮಾಣ ತಿಳಿಯಲು ಅಳತೆಯ ಮಾಪನಗಳನ್ನು ತಾವೇ ತಯಾರು ಮಾಡಿಕೊಳ್ಳುತ್ತಿದ್ದರು.

**ಕೊಳಗ:** ಒಂದು ವೃತ್ತಾಕಾರವುಳ್ಳ ಅಳತೆಯ ಮಾಪನವು ಇದಾಗಿದೆ. ನೋಡಲಿಕ್ಕೆ ಸಿಲಿಂಡರಿನಾಕಾರದಲ್ಲಿರುತ್ತದೆ. ಇದನ್ನು ಕಬ್ಬಿಣದ ತಗಡಿನಿಂದ ಮಾಡಿರುತ್ತಾರೆ.

**ಇಬ್ಬಳಿಗೆ:** ಇಬ್ಬಳಿಗೆಯು ಒಂದು ಅಡಿ ಎತ್ತರ ಒಂದು ಅಡಿ ಅಗಲವಾಗಿರುತ್ತದೆ. ಬಾಯಿ ಸ್ವಲ್ಪ ಅಗಲ ವಾಗಿದ್ದನ್ನು ಅಳೆಯುವಂತಹ ಮಾಪನವಾಗಿದೆ.

**ಸೇರು:** ಗ್ರಾಮೀಣ ಪ್ರದೇಶದಲ್ಲಿ ಧಾನ್ಯಗಳನ್ನು ಅಳೆಯಲು ಬಳಸುತ್ತಾರೆ. ಸೇರು ಮದುವೆಯಾಗಿ ಹೊಸಮನೆಗೆ ಪ್ರವೇಶ ಮಾಡುವಂತಹ ಮದುಮಗಳು ಸೇರು ವದ್ದು ಅವರ ಮನೆಯ ಒಳಗೆ ಹೋಗುತ್ತಾರೆ. ಸೇರಿನ ತುಂಬಾ ಅಕ್ಕಿ-ಬೆಲ್ಲ ಇಟ್ಟು ಬಾಗಿಲಿಗೆ ಪೂಜೆ ಮಾಡಿ ಅದನ್ನು ಹೊಸದಾಗಿ ಮದುವೆಯಾದ ಹೆಣ್ಣು ತನ್ನ ಗಂಡನ ಮನೆಗೆ ಪ್ರವೇಶ ಮಾಡುವಾಗ ಈ ಆಚರಣೆ ಮಾಡುತ್ತಾರೆ.

**ಪಾವು:** ಈ ಕಡಲಬಾಳು ಗ್ರಾಮದಲ್ಲಿ ನಾವು ಪಡಿ ಪಾವು ಅಂದರೆ ಕಾಲುಸೇರು ತುಂಬುವಂತಹ ಸಾಧನವಾಗಿದೆ. ಅತಿ ಕಡಿಮೆ ದವಸ ಧಾನ್ಯಗಳಾದ ಬೇಳೆಕಾಳು, ಕಾರದಪುಡಿ, ಉಪ್ಪು ಮುಂತಾದವನ್ನು ಅಳೆಯಲು ಬಳಸುವ ಸಾಧನ.

**ಚಟಾಕ:** ಅತ್ಯಂತ ಚಿಕ್ಕದಾದಂತಹ ಕನಿಷ್ಠ ಪ್ರಮಾಣದ ವಸ್ತುಗಳನ್ನು ಅಳತೆ ಮಾಡಲು ಬಳಸುವಂತಹ ಪ್ರಮುಖ ಸಾಧನಗಳಲ್ಲಿ ಇದು ಒಂದಾಗಿದೆ.

**ಸೂಲಿಗೆ:** ಯಾವುದೇ ಒಂದು ನಿರ್ದಿಷ್ಟವಾಗಿ ಉದ್ದ ಅಳತೆಯನ್ನು ಅಳೆಯುತ್ತೇವೆ. ಪಾವು ಎಂಬ ಸಾಧನಕ್ಕಿಂತಲೂ ಚಿಕ್ಕದಾಗಿರುತ್ತದೆ.

**ಇಂಚು:** ಬೆರಳ ತುದಿಯಲ್ಲಿನ ಒಂದು ಗೆರೆಯವರಗಿನ ಉದ್ದಕ್ಕೆ ಇಂಚು ಎನ್ನುವರು. ಅತ್ಯಂತ ಕಡಿಮೆ ಉದ್ದ ಅಳೆಯುವುದಕ್ಕೆ ಬಳಸುತ್ತೇವೆ. ಅರ್ಧ ಇಂಚು ಕಾಲು ಇಂಚು ಎಂದು ಲೆಕ್ಕವನ್ನು ನಾವು ಮಾಡುತ್ತೇವೆ.

**ಚೋಟುದ್ದ:** ಕಡಲಬಾಳು ಗ್ರಾಮದಲ್ಲಿ ಕೆಲವರು ಬರೀ ಯಾವಾಗಲೂ ಅವರು ಮಾಡುವಂತಹ ತಲೆಹರಟೆಯನ್ನು ನೋಡಿ ನೋಡಿ ಈ ಚೋಟುದ್ದ ಇದ್ದಾನೆ/ಇದ್ದಾಳೆ ಎಷ್ಟೊಂದು ಸೊಕ್ಕು/ ಕೊಬ್ಬು ಎಂಬ ಅರ್ಥವನ್ನು ನೀಡುತ್ತದೆ.

**ಗೇಣುದ್ದ:** ಯಾಕೇ ನೀನು ಗೇಣುದ್ದ ಇಲ್ಲ ಅಷ್ಟೊಂದು ಮಾತಾಡುತ್ತೀಯಾ ಅಬ್ಬಾ ನೀನು ತುಂಬಾನೇ ಇದೆಯಾ ಎಂದು ಅವರನ್ನು ಬೈಯುತ್ತೇವೆ. ಹಾಗೆಯೇ ಕೈಯಲ್ಲಿನ ಹೆಬ್ಬೆರಳ ಕಿರುಬೆರಳು ನೆಟ್ಟಗೆ ಚಾಚಿದರೆ ಬರುವ ಉದ್ದ.

**ಮೊಳ:** ಕಡಲಬಾಳಿನ ದೇವಸ್ಥಾನದ ಮುಂದೆ ಹೂವುಗಳನ್ನು ಮಾರುವರೆಲ್ಲರೂ ಒಂದು ಮೊಳ ಐದು ಮೊಳದ ಹೂವು ಕೊಂಡು ಕೊಳ್ಳುವುದನ್ನು ಈಗಲೂ ಕಾಣುತ್ತೇವೆ. ನಾವು ಹೊಲವನ್ನು ಸಹ ಅಳತೆ ಮಾಡುವಾಗ ಬಳಸುತ್ತೇವೆ.

**ಅರ್ಧಮಾರು:** ಒಂದು ಕೈಯನ್ನು ಭುಜದ ನೇರವಾಗಿ ಪಕ್ಕಕ್ಕೆ ಚಾಚಿದರೆ ಮಧ್ಯದ ಬೆರಳಿನ ತುದಿ ಮತ್ತು ಎದೆಯ ಮಧ್ಯೆದ ಭಾಗ ಇವುಗಳ ನಡುವಿನ ಅಂತರವನ್ನು ಅರ್ಧಮಾರು ಎನ್ನುತ್ತಾರೆ. ಹಾಗೇ ಅರ್ಧಮಾರು ಜಡಿಗೆ ೩ ಮಾರು ಮಲ್ಲಿಗೆ ಹೂವುಗಳು ಬೇಕಾ!

**ಮಾರುದ್ದ:** ಎರಡೂ ಕೈಗಳು ಅಡ್ಡವಾಗಿ ಎರಡೂ ಕೈಗಳನ್ನು ನೇರವಾಗಿ ಎಡಗೈ ಬೆರಳ ತುದಿಯಿಂದ ಬಲಗೈ ಬೆರಳ ತುದಿಯವರೆಗಿನ ಅಂತರಕ್ಕೆ ಒಂದು ಮಾರು ಎನ್ನುವರು.

**ಅಡಿ:** ಎರಡೂ ಕೈಗಳ ಮುಷ್ಠಿಯನ್ನಿಡಿದು ಹೆಬ್ಬೆರಳುಗಳನ್ನು ಅಡ್ಡವಾಗಿ ಚಾಚಿ ಒಂದಕ್ಕೊಂದು ಜೋಡಿಸಿದರೆ ಉಂಟಾಗುವ ಅಂತರವನ್ನು ಒಂದು ಅಡಿ ಎನ್ನುವರು. ಅಳೆಯುವ ವಿಧಾನವೇ ಇದಾಗಿ ಅಡಿಗಳನ್ನು ಲೆಕ್ಕ ಮಾಡುವಾಗಲು ಬೇಕಾದ ರೀತಿಯಲ್ಲಿ ಇಲ್ಲಿನ ರೈತ ಮಾದರಿಗಳು ವಿಶಿಷ್ಟವೆನಿಸುತ್ತವೆ.

**ಪಾದ ಮುಳುಗುವಷ್ಟು:** ನೀರಿನಲ್ಲಿ ಇಳಿದಾಗ ಅದರ ಆಳವನ್ನು ತಿಳಿಯಬಹುದಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಜನರು ಬಟ್ಟೆಯನ್ನು ಒಗೆಯುವಾಗ ನೀರು ಅವರ ಪಾದಮುಳುಗುವಷ್ಟು

ಇರುವುದನ್ನು ಕಾಣುತ್ತೇವೆ. ನಾವು ನೀರಿನ ಪ್ರಮಾಣವನ್ನು ತಿಳಿಯುವ ಪ್ರಯತ್ನವನ್ನು ಮಾಡುತ್ತೇವೆ. ಕೆರೆ ಬಾವಿಗಳ ಆಳವು ಎರಡರಷ್ಟು ಇದೆ. ಎಂದು ನಾವು ತಿಳಿಯಬಹುದಾಗಿದೆ.

**ಕಡಲಬಾಳು ಪರಿಸರದ ಸಹಕಾರಿ ಜೀವನ ಪದ್ಧತಿ:** ಗ್ರಾಮೀಣ ಜನರ ಅವರು ಸಂಸ್ಕಾರ ಸಂಸ್ಕೃತಿಯೇ ಜೀವಾಳವಾಗಿದೆ. ಹಾಗೆಯೇ ಹಳೆಯ ಕಾಲದ ಸಂಸ್ಕಾರವನ್ನು ಸಂಪೂರ್ಣವಾಗಿ ಅಳಿದು ಹೋಗಿರುವಿಕೆಯನ್ನು ಸಹ ಕಾಣಬಹುದಾಗಿದೆ. ಆದರೂ ಕಡಲಬಾಳು ಗ್ರಾಮದಲ್ಲಿನ ಜನರ ಸಾಮಾಜಿಕ, ಧಾರ್ಮಿಕ, ಆರ್ಥಿಕವಾದ ಪರಿಸ್ಥಿತಿಯನ್ನು ನಿಭಾಯಿಸಿಕೊಂಡು ಸುಖ-ಸಂಸಾರದ ನೆಮ್ಮದಿಯುಕ್ತ ಜೀವನವನ್ನು ನಡೆಸುತ್ತಿದ್ದಾರೆ.

**ಸಾಟಿ ಪದ್ಧತಿ:** ಈ ಗ್ರಾಮದಲ್ಲಿ ಜನರು ತಮಗೆ ಬೇಕಾದಂತಹ ಜೀವನ ಕೌಶಲ್ಯವನ್ನು ಅವರ ಜೀವನವನ್ನು ನಡೆಸಿಕೊಂಡು ಹೋಗಲಿಕ್ಕೆ ಅನೇಕ ರೀತಿಯಾದ ಕೆಲಸ ಕಾರ್ಯಗಳನ್ನು ಮಾಡಿಕೊಂಡು ಹೋಗುತ್ತಾರೆ. ಜನರು ಮಾಡಿದಂತಹ ಗುಡಿ ಕೈಗಾರಿಕೆಗಳ ವಸ್ತುಗಳನ್ನು ಮತ್ತು ಮಡಿಕೆ ಕುಡಿಕೆಗಳನ್ನು ಅವರು ಬೆಳೆದಂತಹ ಪ್ರಮುಖ ಬೆಳೆಗಳನ್ನು ವಿನಿಮಯ ಮಾಡಿಕೊಳ್ಳುವ ಪದ್ಧತಿಗೆ ಸಾಟಿ ಪದ್ಧತಿ ಎನ್ನುತ್ತಾರೆ.

**ಅಡರೆ:** ಹೆಸರೇ ಹೇಳುವಂತೆ ಈ ಕಡಲಬಾಳು ಗ್ರಾಮದಲ್ಲಿ ಈ ಪದ್ಧತಿಯೂ ಇಂದಿಗೂ ಅಮರವಾಗಿದೆ. ಧಣಿಗಳು ತಮಗೆ ಬೇಕಾದಂತಹ ಕೆಲಸವನ್ನು ಮಾಡಿಸಿಕೊಂಡು ಅವರಿಗೆ ಕಾಳು-ಕಡಿಯನ್ನು ಕೊಡುವ ಪದ್ಧತಿಯೆನ್ನುತ್ತೇವೆ. ಈ ಪದ್ಧತಿಯನ್ನು ಸುಗ್ಗಿಕಾಲದಲ್ಲಿ ಅತೀಹೆಚ್ಚಾಗಿ ನಾವು ನೋಡಬಹುದು.

**ಮುಯ್ಯಾಳುಗಳು:** ಈ ಗ್ರಾಮದಲ್ಲಿ ಕೆಲಸಗಾರರಿಗೆ ಕೂಲಿಕೊಡುವುದು ವಿರಳ. ಏಕೆಂದರೆ ಹೊಲಗದ್ದೆಗಳಲ್ಲಿ ಕೆಲಸಮಾಡಿದ ಕೆಲಸದಾಳು, ಅವರ ಹೊಲಮನೆ ಗದ್ದೆಗಳಲ್ಲಿ ಕೆಲಸ ಮಾಡುವಂತೆ ಮಾತಾಡಿಕೊಳ್ಳುತ್ತಾರೆ. ಬೀಜ ಬಿತ್ತನೆಯಿಂದ, ಕೊಯ್ಯುವವರೆಗೂ ಈ ಮುಯ್ಯಾಳುಗಳು ಕೆಲಸ ಮಾಡುವುದನ್ನು ಕಾಣುತ್ತೇವೆ.

**ಗುತ್ತಿಗೆ:** ಗುತ್ತಿಗೆಯಿಂದ ನಮ್ಮ ಹಣ ಸಂಪಾದನೆ ಹೆಚ್ಚಾಗುತ್ತದೆ. ಕೂಲಿ ಅಂದರೆ ಕೆಲಸ ಕಡಿಮೆ, ಹಣವೂ ಕಡಿಮೆ. ಗುತ್ತಿಗೆ ಅಂದರೆ ಕೆಲಸನೂ ಜಾಸ್ತಿ ಹಾಗೆಯೇ ಹಣವೂ ಜಾಸ್ತಿ ಸಾವಿರರೂಗಳಿಗೆ ಗುತ್ತಿಗೆಯನ್ನು ಹಿಡಿದು ಒಂದು ಕೆಲಸ ಪೂರ್ಣಗೊಳಿಸಲು ಗುತ್ತಿಗೆ ಎನ್ನುತ್ತಾರೆ.

**ಪಾಲು:** ರೈತನು ತಾನು ಬೆಳೆದಂತಹ ಬೆಳೆಯಲ್ಲಿಯೇ ಭೂ ಒಡೆಯನಿಗೆ ಅರ್ಧದಷ್ಟು ಕೊಟ್ಟು ಇನ್ನು ಅರ್ಧದಷ್ಟು ತಾನು ಬಳಸಿಕೊಳ್ಳಬಹುದಾಗಿದೆ. ಹಾಗೆಯೇ ಪಾಲುಗಾರಿಕೆಯ ಅತಿ ಹೆಚ್ಚಾಗಿ ಈ ಗ್ರಾಮದಲ್ಲಿ ಮುಸ್ಲಿಂರು ಮಾಡುವರು.

**ಮಳೆ:** ಮಳೆ ಎಂಬುದು ಸಕಲ ಜೀವರಾಶಿಗಳಿಗೂ ಅತ್ಯಾವಶ್ಯಕ. ಮಳೆ ಇಲ್ಲದೆ ಹೋದರೆ ಈ ಭೂಮಿಯು ಸರ್ವನಾಶವಾಗುತ್ತದೆ. ಆದ್ದರಿಂದ ರೈತರಿಗೆ ಮಳೆ ಬಹಳ ಮುಖ್ಯ ಪಾತ್ರವಹಿಸುತ್ತದೆ. ಮಳೆ ಬಂದರೆ ಬೆಳೆ, ಬೆಳೆ ಬಂದರೆ ಬದುಕು ಎನ್ನುವಂತೆ ರೈತರ ಜೀವನವಾಗಿರುತ್ತದೆ. ಜನರಿಗೆ ಮಳೆಯಿಂದ ಬೆಳೆ ಚೆನ್ನಾಗಿ ಬಂದರೆ ಅವರು ಜೀವನವನ್ನು ಸಾಗಿಸಲು ಸಹಾಯಕವಾಗಿದೆ. ರೈತರ ಸಮೃದ್ಧವಾದ ಜೀವನ ನಡೆಸಬೇಕಾದರೆ ಕಾಲಕಾಲಕ್ಕೆ ಮಳೆ ಬರಬೇಕಾದ್ದು ಅಗತ್ಯವಾಗಿದೆ. ಗ್ರಾಮದಲ್ಲಿ ಮಳೆ ಬಾರದಿದ್ದಾಗ ಮಳೆರಾಯನ ಕುರಿತು ಅನೇಕ ರೀತಿಯಾದ ಹಾಡುಗಳನ್ನು ಮೆರವಣಿಗೆಯನ್ನು ಮಾಡುವುದು ಈಗಲೂ ಕಡಲಬಾಳು ಗ್ರಾಮದಲ್ಲಿ ಜೀವಂತವಾಗಿದೆ.

**ಮಳೆಯ ನಕ್ಷತ್ರಗಳು:** ಈ ನಕ್ಷತ್ರಗಳನ್ನು ವಿವರವಾಗಿ ಈ ಕೆಳಗಿನಂತೆ ವಿವರಯನ್ನು ನೀಡಬಹುದು.

**ಮಳೆ ನಕ್ಷತ್ರಗಳು**

| | | |
|---|---|---|
| ಉತ್ತರಾಷಾಢ | : | ಜನವರಿ ೧೧ ರಿಂದ ೩೧ |
| ಶ್ರಾವಣ | : | ಜನವರಿ ೨೪ ರಿಂದ ಫೆಬ್ರವರಿ ೫ |
| ಧನಿಷ್ಠ | : | ಫೆಬ್ರವರಿ ೬ ರಿಂದ ಫೆಬ್ರವರಿ ೧೮ |
| ಶತಬಿಷ್ಮ | : | ಫೆಬ್ರವರಿ ೧೫ ರಿಂದ ಮಾರ್ಚ್ ೦೩ |
| ಪೂರ್ವಭಾದ್ರ | : | ಮಾರ್ಚ್ ೪ ರಿಂದ ಮಾರ್ಚ್ ೧೬ |
| ಉತ್ತರ ಭಾದ್ರ | : | ಮಾರ್ಚ್ ೧೭ ರಿಂದ ಮಾರ್ಚ್ ೨೯ |
| ರೇವತಿ | : | ಮಾರ್ಚ್ ೩೦ ರಿಂದ ಏಪ್ರಿಲ್ ೧೨ |
| ಅಶ್ವಿನಿ | : | ಏಪ್ರಿಲ್ ೧೩ ರಿಂದ ಏಪ್ರಿಲ್ ೨೬ |
| ಭರಣಿ | : | ಏಪ್ರಿಲ್ ೨೭ ರಿಂದ ಮೇ ೧೦ |
| ಕೃತ್ತಿಕ | : | ಮೇ ೧೧ ರಿಂದ ಮೇ ೨೩ |
| ರೋಹಿಣಿ | : | ಮೇ ೨೪ ರಿಂದ ಜೂನ್ ೬ |
| ಮೃಗಶಿರ | : | ಜೂನ್ ೭ ರಿಂದ ಜೂನ್ ೨೦ |
| ಆರಿದ್ರಾ | : | ಜೂನ್ ೨೧ ರಿಂದ ಜುಲೈ ೨೧ |
| ಪುನರ್ವಸು | : | ಜುಲೈ ೫ ರಿಂದ ಜುಲೈ ೧೯ |
| ಪುಷ್ಯ | : | ಜುಲೈ ೨೦ ರಿಂದ ಆಗಸ್ಟ್ ೨ |
| ಆಶ್ಲೇಷ | : | ಆಗಸ್ಟ್ ೩ ರಿಂದ ಆಗಸ್ಟ್ ೧೬ |

ಮಾಘ : ಆಗಸ್ಟ್ ೧೩ ರಿಂದ ಆಗಸ್ಟ್ ೨೯

ಪಾಲ್ಗುಣ : ಆಗಸ್ಟ್ ೩೦ ರಿಂದ ಸೆಪ್ಟೆಂಬರ್ ೧೨

ಉತ್ತರ : ಸೆಪ್ಟೆಂಬರ್ ೧೩ ರಿಂದ ಸೆಪ್ಟೆಂಬರ್ ೨೬

ಹಸ್ತ : ಸೆಪ್ಟೆಂಬರ್ ೨೭ ರಿಂದ ಅಕ್ಟೋಬರ್ ೯

: ಅಕ್ಟೋಬರ್ ೧೦ ರಿಂದ ಅಕ್ಟೋಬರ್ ೨೪

ಸ್ವಾತಿ : ಅಕ್ಟೋಬರ್ ೨೫ ರಿಂದ ನವೆಂಬರ್

ವಿಶಾಖ : ನವೆಂಬರ್ ೬ ರಿಂದ ನವೆಂಬರ್ ೧೮

ಅನುರಾಧ : ನವೆಂಬರ್ ೧೯ ರಿಂದ ಡಿಸೆಂಬರ್ ೧

ನಮ್ಮ ರಾಶಿ ಚಕ್ರದಲ್ಲಿ ಅಶ್ವಿನಿಯಿಂದ ರೇವತಿಯವರೆಗೆ ೨೭ ನಕ್ಷತ್ರಗಳಿವೆ. ಜನಪದರು ತಮಗೆ ಬೇಕಾದಂತಹ ಜ್ಯೋತಿಷ್ಯರ ಹಾಗೆಯೇ ಪಂಚಾಂಗವನ್ನು ಸಹ ರಚಿಸಿಕೊಂಡಿದ್ದಾರೆ. ರೈತರು, ಹಿರಿಯರ, ಅನುಭವ ಅವರ ಮಾತು ವೇದ ವಾಕ್ಯವಾಗಿದೆ. ಕೆಲವರು ಅವರ ನಿಯಮ ಪಾಲನೆಯನ್ನು ಮಾಡಿದ್ದಾರೆ. ಹಾಗೆಯೇ ಮಳೆ ಬಗ್ಗೆ ಅಪಾರವಾದ ನಂಬಿಕೆ ಉಳ್ಳವರಾಗಿದ್ದಾರೆ.

**ಮಳೆಯ ಶಾಸ್ತ್ರಗಳು:** ರೈತರು ಮಳೆಯನ್ನು ಆಶ್ರಯಿಸಿ ಜೀವನವನ್ನು ನಡೆಸುತ್ತಾರೆ. ಮಳೆ-ಬೆಳೆ ಚೆನ್ನಾಗಿದ್ದರೆ ಅವರು ಸುಖ ನೆಮ್ಮದಿಯುಕ್ತವಾದ ಜೀವನವನ್ನು ನಡೆಸುವರು. ಹೊಲ-ಗದ್ದೆಗಳಲ್ಲಿ ಬಿತ್ತನೆ ಮಾಡುತ್ತಾರೆ. ಮಳೆ ಬಾರದಿದ್ದರೆ ಕಡಲಬಾಳಿನ ಜನರು ಅಯ್ಯೋ! ದೇವರು ಕೋಪಗೊಂಡಿರಬಹುದು ಎಂದು ಅವರು ಮಳೆಗಾಗಿಯೇ ಹಲವು ರೀತಿಯಾದಂತಹ ಮೆರವಣಿಗೆ ಪೂಜೆ-ಪುನಸ್ಕಾರಗಳನ್ನು ಮಾಡುವಂತಹ ರೀತಿಯು ಈಗಲೂ ನೋಡಬಹುದಾದಂತಹ ವಿಷಯವಾಗಿದೆ.

**ಧೂಳ್ ಮರಿ:** ಅಂದರೆ ಮಳೆ ಬಾರದ ಊರಿನಲ್ಲಿ ಬರಗಾಲ ಬಂದಾಗ ಪ್ರಾಣಿಯ ಬಲಿಯನ್ನು ನೀಡುವರು. ಇದನ್ನು ಧೂಳ್ ಮರಿ ಎಂದು ಕರೆಯುವರು. ಊರಿನ ಎಲ್ಲರೂ ಸೇರಿಕೊಂಡು ಊರಿಗೆ ಹೂವಿನ ಹಾರದಿಂದ ಅಲಂಕಾರ ಮಾಡಿ ಹಲಗೆಯಿಂದ ಮೆರವಣಿಗೆ ಮಾಡಿಕೊಂಡು ಹೋಗುವುದನ್ನು ಕಾಣಬಹುದಾಗಿದೆ. ಊರಿನ ಪೂಜಾರಿ ಬೇವಿನ ಸೊಪ್ಪಿನಿಂದ ಪೂಜೆ ಮಾಡುತ್ತಾನೆ. ಮರಿಯನ್ನು ಬಲಿಕೊಟ್ಟು, ಅದರ ರಕ್ತದಿಂದ ಬೆಳೆ-ಮಳೆ ಬರಲಿ ಎಂದು ಜನರು ದೇವರಲ್ಲಿ ಪ್ರಾರ್ಥನೆ ಮಾಡುವುದನ್ನು ಈಗಲೂ ನೋಡಬಹುದಾಗಿದೆ.

**ಎತ್ತಿನ ಶಾಸ್ತ್ರ:** ಕಡಲಬಾಳು ಗ್ರಾಮದಲ್ಲಿ ಅತ್ಯಂತ ಪ್ರೀತಿಯಿಂದ ಒಗ್ಗಟಾಗಿ ಎಲ್ಲ ಹಿರಿಯರು ಸೇರಿಕೊಂಡು ಮಾಡುವಂತಹ ಶಾಸ್ತ್ರ ಇದಾಗಿದೆ. ಅವರು ಸಾಕಿದ ಬಸವ, ಎತ್ತುಗಳನ್ನು ಅಲಂಕಾರಮಾಡಿ ಅರಿಶಿನ ಕುಂಕುಮದಿಂದ ಶೃಂಗಾರ ಮಾಡುವರು. ಮಾಡಿದ ನಂತರದಲ್ಲಿಯೇ ಎತ್ತನ್ನು ಗ್ರಾಮದ ಜನರು ಊರ ತುಂಬಾ ಬೇಗನೇ ಮಳೆ ಬರಬೇಕು ಎಂದು ಪ್ರಾರ್ಥನೆ ಮಾಡುತ್ತಾರೆ.

**ಮಳೆರಾಯನ ಮಾಡುವುದು:** ಮಳೆರಾಯನನ್ನು ಮಾಡುವ ರೂಢಿಯೂ ಇದೆ. ಮಣ್ಣಿನ ಬಸವನ ಮೂರ್ತಿಯನ್ನು ಊರಲ್ಲಿ ಮೆರವಣಿಗೆ ಮಾಡುವುದು ಆಕರ್ಷಕವೂ, ಅರ್ಥಪೂರ್ಣವೂ ಆಗಿದೆ.

**ಮಳೆಯಲ್ಲಿ ತಪ್ಲೆಶಾಸ್ತ್ರ:** ಈ ಶಾಸ್ತ್ರವನ್ನು ಮಳೆ ಬಾರದೆ ಇದ್ದಾಗ ಮಾಡುತ್ತಾರೆ. ಹೊಸ ನೀರನ್ನು ತುಂಬಿ ಅದಕ್ಕೆ ಚೊಂಬಿನಲ್ಲಿನ ಎಲೆ ಎಲ್ಲಿ ಕಳಚಿ ಬೀಳುತ್ತದೆಯೋ ಅದರ ಮೇಲೆ ಮಳೆ ಬೇಗನೆ ಬರುತ್ತದೆ ಎಂದು ಭಾವಿಸುತ್ತಾರೆ.

**ವಾಣಿಜ್ಯ ಕೃಷಿ:** ಯಾವುದೇ ಗ್ರಾಮದಲ್ಲಿ ಹೋದರು ಆರ್ಥಿಕವಾದ ಪರಿಸ್ಥಿತಿಯನ್ನು ನಿರ್ಧರಿಸುವಲ್ಲಿ, ಕೃಷಿಯೇ ಮುಖ್ಯವಾದ ಪಾತ್ರವನ್ನು ನಿರ್ವಹಿಸುತ್ತದೆ. ಎಲ್ಲಾ ಕರೆಗಳು ವ್ಯವಸಾಯಕ್ಕೆ ಯೋಗ್ಯವಾಗಿವೆ ಎನ್ನಲಾಗಿದೆ. ಹಲವು ರೀತಿಯ ಕೆರೆ ಕಟ್ಟೆಗಳು ನೀರಾವರಿ ವ್ಯವಸ್ಥೆಯಾಗಿರಬಹುದು ಮಳೆಗಾಲದಲ್ಲಿ ಇಲ್ಲಿನ ನೀರು ಉಪಯೋಗವಾಗುತ್ತದೆ. ಕಡಲಬಾಳು ಗ್ರಾಮದಲ್ಲಿ ಬೆಟ್ಟ-ಗುಡ್ಡಗಳಿಂದ ಕೂಡಿದ ಪ್ರದೇಶವಾಗಿದೆ. ಅಂತರ್ ಜಲದ ಮಟ್ಟ ತುಂಬಾ ಆಳಕ್ಕೆ ಕುಸಿದಿದೆ. ಕಡಲಬಾಳು ಗ್ರಾಮ ಅತಿ ಹೆಚ್ಚಾಗಿ ಬಾಳೆ, ಮಾವು, ನೆಲಗಡಲೆ, ಎಳ್ಳು, ತೊಗರಿ, ತರಕಾರಿಗಳನ್ನು ಬೆಳೆಯುತ್ತಾರೆ. ರೇಷ್ಮೆಗೆ ಹೆಚ್ಚಿನ ಬೆಲೆ, ಬೇಡಿಕೆ ಇರುವುದರಿಂದ ಇಲ್ಲಿ ರೇಷ್ಮೆ ಹುಳುಗಳ ಸಾಕಾಣಿಕೆ ಕಂಡುಬರುತ್ತದೆ.

**ಹೈನುಗಾರಿಕೆ:** ಆರ್ಥಿಕತೆಯನ್ನು ಸುಧಾರಿಸುವ ಸಲುವಾಗಿಯೇ ಹೈನುಗಾರಿಕೆ, ಕೋಳಿಸಾಕಾಣಿಕೆ, ಮೊಲಸಾಕಾಣಿಕೆ, ಹಸುಗಳು ಸಾಕಣಿಕೆಯನ್ನು ನಾವು ಕಾಣಬಹುದಾಗಿದೆ. ಇಲ್ಲಿಯ ಮುಕ್ಕಾಲು ಭಾಗದಷ್ಟು ಜನರು ಹಾಲನ್ನು, ಹಾಲಿನ ಡೈರಿಯನ್ನು ನಂಬಿಕೊಂಡು ಜೀವನವನ್ನು ನಡೆಸುತ್ತಾರೆ. ಹಾಗೆಯೇ ತಮ್ಮ ಹಸುಗಳಿಂದ ತಮ್ಮ ಸಂಸಾರದ ಆರ್ಥಿಕ ಸಂಕಷ್ಟಗಳನ್ನು ಪರಿಹರಿಸಿಕೊಳ್ಳುವ ಮಾರ್ಗವಾಗಿದೆ ಎನ್ನಬಹುದು.

**ಹಾಲಿನ ಡೈರಿ:** ಹಾಲಿನ ಡೈರಿಯನ್ನು ಈ ಕಡಲಬಾಳು ಗ್ರಾಮದಲ್ಲಿ ನೋಡಬಹುದಾಗಿದೆ. ಈ ಗ್ರಾಮದಲ್ಲಿ ಪ್ರತಿಯೊಂದು ಓಣಿಯಿಂದಲೂ ಹಾಲಿನ ಡೈರಿಗೆ ಹಾಕುವ ಪ್ರಮಾಣ ಹೆಚ್ಚಾಗುತ್ತದೆ. ಪ್ರತಿದಿನ ಬೆಳಿಗ್ಗೆ ೩೫೦ ಲೀಟರುಗಳಿಗಿಂತ ಹೆಚ್ಚು ಹಾಲು ಸಂಗ್ರಹಣ ಮಾಡುತ್ತಾರೆ. ಸಂಜೆ ಹೊತ್ತಿಗೆ ೨೫೦ ಲೀಟರಗಳಿಗಿಂತ ಹೆಚ್ಚು ಸಂಗ್ರಹಣೆಯಾಗುತ್ತದೆ. ಒಂದೊಂದು ಕ್ಯಾನ್‌ನಲ್ಲಿ

೧೫ ಲೀಟರ ತುಂಬುತ್ತಾರೆ. ಇವುಗಳನ್ನು ಸಾಕುವುದರ ಮೂಲಕ ತಮ್ಮ ಕೌಟುಂಬಿಕ ಆರ್ಥಿಕ ಸಮಸ್ಯೆಗಳನ್ನು ನಿವಾರಿಸಿಕೊಳ್ಳುತ್ತಾರೆ.

**ವ್ಯಾಪಾರ:** ಈ ಗ್ರಾಮದಲ್ಲಿ ಹೆಚ್ಚಾಗಿ ವ್ಯಾಪಾರಿಗಳು ಪೂಜಾ ಸಾಮಗ್ರಿಗಳು ಇಟ್ಟುಕೊಂಡು ವ್ಯಾಪಾರ ಮಾಡುತ್ತಾರೆ. ಪೂಜಾ ಸಾಮಗ್ರಿಗಳನ್ನು ಇಟ್ಟುಕೊಂಡೆ ಅವುಗಳಿಂದ ಬಂದಂತಹ ಹಣದಿಂದಲೇ ತಮ್ಮ ಜೀವನವನ್ನು ಸಹ ನಡೆಸುವರು. ಹಾಗೆಯೇ ಹೂವು, ಹಣ್ಣು, ಕಾಯಿ, ನಿಂಬೆಹಣ್ಣು, ಸೀರೆ ಮುಂತಾದ ಸಾಮಾನುಗಳನ್ನು ನಾವು ಈ ಗ್ರಾಮದಲ್ಲಿ ನೋಡಬಹುದಾಗಿದೆ. ಬಹು ಆದಾಯ ತರುವಂತಹ ಅಂಗಡಿಗಳಾಗಿವೆ. ಅಕ್ಕಿ, ಬೇಳೆ, ಎಣ್ಣೆ, ಊಟದ ಎಲೆಗಳು ಇನ್ನು ಮುಂತಾದ ಆಹಾರದ ಪ್ರತಿಯೊಂದು ವಸ್ತುಗಳು ಇಲ್ಲಿ ಮಾರಾಟವಾಗುತ್ತವೆ. ವಾರದಲ್ಲಿ ಎರಡು ದಿನ ಹರಕೆಯನ್ನು ಸೇವೆ ಮಾಡುತ್ತಾರೆ.

### ೩.೩. ರಾಜಕೀಯಸ್ಥಿತಿ

ಕಡಲಬಾಳು ಗ್ರಾಮದಲ್ಲಿ ಸಾಮಾಜಿಕ ಹಾಗೂ ಶೈಕ್ಷಣಿಕ ಸ್ಥಿತಿಗಿಂತಲೂ ರಾಜಕೀಯ ಸ್ಥಿತಿಯ ಪಾತ್ರ ಮಹತ್ವದ್ದಾಗಿದೆ. ಸಾಮಾನ್ಯ ಜನರಿಗೆ ರಾಜಕೀಯದ ಹಾದಿಯು ಮುಚ್ಚಿದ ಬಾಗಿಲಾಗಿದೆ. ಬಹುಜನರು ಅದರಲ್ಲೂ ವಿಶಿಷ್ಟವಾಗಿ ಕಡಲಬಾಳು ನಾಡು, ಸ್ವಾತಂತ್ರ್ಯ ಹೋರಾಟ ದಲ್ಲಿ ಅನೇಕ ಕೆಚ್ಚೆದೆಯ ವೀರ ವನಿತೆಯರನ್ನು/ವೀರರನ್ನು ಕೊಟ್ಟಿರುವುದು ಮಹತ್ವದ ಅಂಶಗಳಲ್ಲಿ ಒಂದಾಗಿದೆ. ಸ್ವಾತಂತ್ರ್ಯ ಹೋರಾಟಗಾರರು ನಿಸ್ವಾರ್ಥ ಮನೋಭಾವನೆಯಿಂದಲೇ ಸೇವೆ ಮಾಡಿರುವುದು ಪ್ರತಿಷ್ಠೆಯಾಗಿದೆ.

ಇತಿಹಾಸ ಮತ್ತು ಸಾಹಿತ್ಯದುದ್ದಕ್ಕೂ ಚರಿತ್ರೆಯ ಪುಟಗಳನ್ನು ಸೇರಿವೆ. ಕನ್ನಡ ಅಭಿಮಾನ ಮತ್ತು ಸ್ವಾತಂತ್ರ್ಯ ಚಳುವಳಿಯ ಹೋರಾಟ ನಡೆಸಿದ ವೀರರು ಚಳುವಳಿಯ ಜೊತೆಗೆ ಕನ್ನಡ ಭಾಷೆ ಏಕೀಕರಣಗಳ ಬಗ್ಗೆ ಆಸಕ್ತಿತೋರಿ, ಅಲ್ಲಿಪುರ ಜೈಲಿನಲ್ಲಿ ಸೇರಿ ಅನೇಕ ರೀತಿಯ ಕಾರ್ಯಕ್ರಮಗಳನ್ನು ಸಹ ಕೈಗೊಂಡರು. ಜೈಲಿನಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ದಿನಾಚರಣೆ ನಾಡಹಬ್ಬಗಳಿಗೆ ಇವರು ಹಾಡುಗಳನ್ನು ಬರೆದು ಕೊಡುವ ಕೆಲಸವನ್ನು ಮಾಡಿದರು. ಬಳ್ಳಾರಿಯಲ್ಲಿ 'ಗೆಳೆಯರ ಬಳಗ/ ಗುಂಪು' ಎಂಬ ತರುಣ ಸಂಘವನ್ನು ಕಟ್ಟಿ, ೧೯೨೯ರಲ್ಲಿ ಗೆಳೆಯರ ಗುಂಪು ಮದ್ರಾಸಿನ ಇಂಡಿಯಾ ರೇಡಿಯೋ ಕೇಂದ್ರ ಗುಂಪು ವಾರ್ತೆಗಳನ್ನು ಕನ್ನಡ ದಲ್ಲಿ ಬಿತ್ತಿರಿಸುವಂತಹ ಚಳುವಳಿಯನ್ನು ನಡೆಸಿದರು. ಶವಸಂಸ್ಕಾರ ಎಂಬ ನಾಟಕವನ್ನು ಬರೆದು ಆಡಿದರು. ಬಳ್ಳಾರಿ ನಗರದಲ್ಲಿ ರಸ್ತೆಗಳ ನಾಮ ಫಲಕಗಳನ್ನು ಸಹ ಕನ್ನಡದಲ್ಲಿ ಬರೆಸುವಂತೆಯೂ ಇವರು ಹೋರಾಟ ಮಾಡಿದರು. ೧೯೩೯ರಲ್ಲಿ ಚಳುವಳಿಗಳನ್ನು ನಡೆಸಿದರು. ಚಳುವಳಿಗಾಗಿಯೇ ಉಗ್ರ ಸ್ವರೂಪದ ಅನೇಕ ಕಾರ್ಯಗಳು ರೂಪಿಸತೊಡಗಿದರು.

೧. ವಿದ್ಯಾರ್ಥಿ ಯುವಕರು ಶಾಲೆ ಬಹಿಷ್ಕರಿಸಿ ಚಳುವಳಿಯಲ್ಲಿಯೇ ಪಾಲುಗೊಂಡರು.

೨. ಅಂಗಡಿ ಮುಗ್ಗಟ್ಟು ಮುಚ್ಚಿ ಮುಷ್ಕರ ಕೈಗೊಂಡರು.

೩. ಟೆಲಿಫೋನ್ ತಂತಿಯನ್ನು ಕತ್ತರಿಸಿ ಹಾಕಿದರು.

೪. ಸರಕಾರಿ ವಿರೋಧಿ ಭಿತ್ತಿ ಚಿತ್ರಗಳನ್ನು ಕರಪತ್ರಗಳನ್ನು ಹಂಚಿದರು.

೫. ಪ್ರತಿಬಂಧಿತ ಸಾಹಿತ್ಯವನ್ನು ಮನೆ-ಮನೆಗೆ ಹೋಗಿ ಅದರ ಬಗ್ಗೆ ಪ್ರಚಾರ ಮಾಡಿದರು.

೬. ಈಚಲು ಮರಗಳನ್ನು ಕಡಿದು ಉರುಳಿಸಲಾಯಿತು.

೭. ನಗರದ ಪ್ರಮುಖ ಗೋಡೆಗಳಲ್ಲಿ ಭಾರತ ಬಿಟ್ಟು ತೊಲಗಿ ಘೋಷಣೆಯನ್ನು ವಿದ್ಯಾರ್ಥಿಗಳು ಯುವಕರು ಬರೆದು ಹಾಕಿದರು.

೮. ನಗರದ ಪ್ರಮುಖ ಕಬ್ಬಿಣ ಪೆಟ್ಟಿಗೆಯನ್ನು ಕದ್ದುಕೊಂಡು ಹೋಗಿ ಬಾವಿಯಲ್ಲಿ ಹಾಕಿದರು.

೮. ಪೊಲೀಸ್ ಠಾಣೆಯಿಂದ ಗುಂಡುಗಳನ್ನು ನೀರಿಗೆ ಎಸೆದರು.

೯. ರಸ್ತೆಯ ಅಕ್ಕ-ಪಕ್ಕದಲ್ಲಿರುವ ಪ್ರಮುಖ ಸೇತುವೆಗಳನ್ನು ಕಡಿದು ಹಾಕಲಾಯಿತು. ಹಾಗೇ ಮುಂದುವರಿದರು.

೧೦. ಸರಕಾರಿ ಪ್ರವಾಸಿ ಬಂಗಲೆಯನ್ನು ಸುಟ್ಟು ಹಾಕಿದರು.

೧೧. ಹೈಸ್ಕೂಲಿನ ವಿಭಾಗದ ಕೊಠಡಿಗಳನ್ನು ಸುಡುವುದು

೧೨. ಸಬ್‌ರಿಜಿಸ್ಟ್ರಾರ್ ಕಚೇರಿಗೆ ಬೆಂಕಿ ಇಡುವ ಪ್ರಯತ್ನ ಮಾಡಿದರು.

೧೩. ಅನೇಕ ರೀತಿಯ ಕರ ಪತ್ರವನ್ನು ಹಂಚಿದರು.

ಹೀಗೆ ಅನೇಕ ಕೃತ್ಯಗಳನ್ನು ಮಾಡುವುದರ ಜೊತೆಗೆ ಚಳುವಳಿಯಲ್ಲಿ ಎಲ್ಲಾ ಸಮುದಾಯದ ಹೋರಾಟಗಾರರು ಸೇರಿಕೊಂಡು ಸ್ವತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡರು. ಗಾಂಧೀಜಿಯವರು ಹಮ್ಮಿಕೊಂಡ ರಚನಾತ್ಮಕ ಕಾರ್ಯಾಚರಣೆಗಳಿಗೆ ಮಾರುಹೋಗಿ ಚಳುವಳಿಯ ನಾಯಕರು ಅನೇಕ ವಿಷಯಗಳ ಬಗ್ಗೆ ಸಮುದಾಯಗಳ ನಡುವೆ ಸಾಮರಸ್ಯ ಮನೋಭಾವನೆ ಮೂಡಿಸಿದರು.[೫]

* ಮದ್ಯಪಾನ ನಿಷೇಧದಂತಹ ಕಾರ್ಯಗಳನ್ನು ಕ್ರಮಬದ್ಧರೂಪದಲ್ಲಿ ಜಾರಿಗೆ ತಂದರು.
* ಖಾದಿ ಬಟ್ಟೆಗಳನ್ನು ಧರಿಸುವಂತೆ ಪ್ರಸಾರ ಮಾಡಿದರು.
* ಗ್ರಾಮೋದ್ಯೋಗಿಗಳನ್ನು ಕೈಗೊಳ್ಳುವಂತೆ ಸಲಹೆಯನ್ನು ನೀಡಿದರು.

* ಸ್ತ್ರೀಯರಿಗೆ ಉನ್ನತವಾದ ಸ್ಥಾನಮಾನವನ್ನು ಕೊಡುವುದನ್ನು ತಿಳಿಸಿದರು.

* ಆರೋಗ್ಯ ಸ್ಥಿತಿ ಬಗ್ಗೆ ಕ್ರಮಗಳನ್ನು ಕೈಗೊಳ್ಳುವಿಕೆಯನ್ನು ಕಾಣುತ್ತೇವೆ.

* ರೈತರು ಕಾರ್ಮಿಕರು ಮತ್ತು ವಿದ್ಯಾರ್ಥಿಗಳಲ್ಲಿ ಜಾಗೃತಿ ಮೂಡಿಸಿದರು

ಹೀಗೆ ಹಲವು ವಿಷಯಗಳ ಬಗ್ಗೆ ಕುರಿತು ಚಳುವಳಿಯ ನಾಯಕರು ನಿರ್ಧಾರಗಳನ್ನು ಕೈಗೊಂಡರು ಎಂದು ಹೇಳಬಹುದಾಗಿದೆ.

೧೯೮೦ರಲ್ಲಿ ರೈತ ಹೋರಾಟದಲ್ಲಿ ಕಡಲಬಾಳಿನ ಪಾತ್ರ

| | | |
|---|---|---|
| ಪೂಜಾರ ಕಾಂತಪ್ಪ | : | ಅಧ್ಯಕ್ಷತೆ ಕಡಲಬಾಳು |
| ಚನ್ನಬಸವನ ಗೌಡ್ರು | : | ಬಾಚಿಗೊಂಡನ ಹಳ್ಳಿ |
| ಅಕ್ಕಿ ಕೊಟ್ರಪ್ಪ | : | ತಂಬ್ರಹಳ್ಳಿ |
| ನಾಗನ ಗೌಡ್ರು | : | ತಂಬ್ರಹಳ್ಳಿ |
| ಕಟ್ಟಿ ಕೊಟ್ರಪ್ಪ | : | ತಂಬ್ರಹಳ್ಳಿ |
| ಆದಿರಾಜಪ್ಪ | : | ಹೂವಿನ ಹಡಗಲಿ |
| ಜಂಬಯ್ಯ | : | ಕಾತ್ಯಾಯನ ಮರಡಿ |
| ನೀಲಗಿರಿ ಹನುಮಂತಪ್ಪ | : | ಕಡಲಬಾಳು |
| ಬ್ಯಾಟಗಿಡ್ಡಪ್ಪ | : | ಕಡಲಬಾಳು |
| ಶೆಟ್ರು ಕೊಟ್ಟಬಸಪ್ಪ | : | ಕಡಲಬಾಳು |
| ಅಣಜಿ ಕೆಂಚಪ್ಪ | : | ಕಡಲಬಾಳು |
| ವಸ್ತವಧರ ಕೊಟ್ರಯ್ಯ | : | ಕಡಲಬಾಳು |
| ಸರಾಯದ ಮೋತಪ್ಪ | : | ಕಡಲಬಾಳು |
| ಬೆಳಗುಂದಿ ಹನುಮಂತಪ್ಪ | : | ಕಡಲಬಾಳು |
| ಗುಣಸಾಗರ ಬಸಪ್ಪ | : | ಕಡಲಬಾಳು |
| ಛಲವಾದಿ ಭೀಮಪ್ಪ | : | ಕಡಲಬಾಳು |

| | | |
|---|---|---|
| ಅಗಸರ ಕಡ್ಲೆಪ್ಪ | : | ಕಡಲಬಾಳು |
| ಮುನಸಾಬ | : | ಕಡಲಬಾಳು |
| ಮಾಂಡಗಪ್ಪರ ಭೀಮಪ್ಪ | : | ಕಡಲಬಾಳು |
| ಒಂಟಿಗೋಡಿ ಬಸವರಾಜಪ್ಪ | : | ಕಡಲಬಾಳು |

ಹೀಗೆ ಹಲವರು ಮಂದಿಯನ್ನು ಈ ಕಡಲಬಾಳು ಗ್ರಾಮದಲ್ಲಿ ನಾವು ನೋಡಬಹುದಾಗಿದೆ.

### ೩.೪. ಧಾರ್ಮಿಕ ಸ್ಥಿತಿಗತಿ

ಭಾರತ ರಾಷ್ಟ್ರ ಹಲವು ಮತ-ಧರ್ಮಗಳಿಂದ ಕೂಡಿದ ದೇಶ. ಪ್ರತಿಯೊಂದು ಮತ-ಧರ್ಮಗಳಿಗೆ ನೂರಾರು ಸಮುದಾಯಗಳಿವೆ. ಆ ಸಮುದಾಯಗಳು ತನ್ನದೇ ಆದಂತಹ ರೂಢಿ, ಸಂಪ್ರದಾಯ, ಆಚರಣೆಗಳನ್ನು ರೂಢಿಸಿಕೊಂಡು ಬಂದಿರುತ್ತಾರೆ. ಹಾಗೆಯೇ ಪ್ರತಿಯೊಂದು ಸಮುದಾಯಗಳಲ್ಲಿ ಧಾರ್ಮಿಕ ಆಚರಣೆಗಳಿಗೆ ಹೆಚ್ಚಿನ ಮಹತ್ವವಿದೆ. ಆಚರಣೆ ಎಂಬುದು ಮಾನವನ ಅವಿಭಾಜ್ಯ ಅಂಗವಾಗಿವೆ. ಅವು ಮುಂದೆ ಬೆಳೆದು ಸಂಪ್ರದಾಯವಾಗಿ ರೂಢಿಗೆ ಬರುತ್ತವೆ. ವೈಯಕ್ತಿಕವಾಗಿ ರೂಪಗೊಳ್ಳುವ ಆಚರಣೆಗಳು ಸಮೂಹವಾಗಿ ಮಹತ್ವವೆನಿಸಿಕೊಳ್ಳುತ್ತವೆ. ಮನುಷ್ಯನ ನಂಬಿಕೆಗಳ ಅನುಸಾರವಾಗಿ ನಿಸರ್ಗದೊಂದಿಗೆ ತನ್ನ ಸಮುದಾಯದೊಂದಿಗೆ ಬೆರೆತು ತನ್ನ ಸುಖ, ಸಂತೋಷ, ಸಂಭ್ರಮಗಳನ್ನು ಅಭಿವ್ಯಕ್ತಪಡಿಸುವ ಸಲುವಾಗಿ ಧಾರ್ಮಿಕ ವಿಧಿ-ವಿಧಾನಗಳನ್ನು ರೂಢಿಸಿಕೊಂಡಿದ್ದಾರೆ. ಆ ಕಾರಣದಿಂದ ಧಾರ್ಮಿಕ ಆಚರಣೆಗಳು ರೂಢಿಗತವಾಗಿ ಬೆಳೆದುಬಂದಿವೆ.

ಹೀಗೆ ಭಾರತದಲ್ಲಿ ಎಲ್ಲಾ ಮತಧರ್ಮಗಳು ಕೂಡ ತಮ್ಮ ತಮ್ಮ ಧರ್ಮದ ತತ್ವ ಮತ್ತು ಧಾರ್ಮಿಕ ವಿಧಿ-ವಿಧಾನಗಳು ತಮ್ಮ ಸಮುದಾಯಗಳ ಮೇಲೆ ಹೇರುತ್ತಾ ಬಂದಿವೆ. ಇಂತಹ ಅಂಶಗಳನ್ನು ಜನಸಮುದಾಯಗಳು ಧಾರ್ಮಿಕವಾಗಿ ಆಚರಿಸಿಕೊಂಡು ಬಂದಿವೆ.

ಹಾಗೆಯೇ ಗ್ರಾಮೀಣ ಪ್ರದೇಶಗಳಲ್ಲಿ ಧಾರ್ಮಿಕ ಆಚರಣೆಗಳನ್ನು, ರೀತಿ-ನೀತಿ, ಶಿಸ್ತು-ನಿಯಮ, ಭಯ-ಭಕ್ತಿಯಿಂದ ಧಾರ್ಮಿಕ ಕ್ರಿಯೆಗಳನ್ನು ನೇರವೇರಿಸಿಕೊಂಡು ಹೋಗುತ್ತಿದ್ದಾರೆ. ಇದಕ್ಕೆ ಕಡಲಬಾಳು ಗ್ರಾಮವು ಹೊರತಾಗಿಲ್ಲ. ಇಲ್ಲಿ ಹಲವಾರು ಧಾರ್ಮಿಕ ವಿಧಿ ಕ್ರಿಯೆಗಳನ್ನು ನಿಯಮಬದ್ಧವಾಗಿ ಆಚರಿಸಿಕೊಂಡು ಹೋಗುತ್ತಿದ್ದಾರೆ. ಅವುಗಳಿಗೆ ತನ್ನದೇ ಆದಂತಹ ಮಹತ್ವಗಳನ್ನು ನೀಡಿ ದೈವಿ ನೆಲೆಯಲ್ಲಿ ನೋಡುತ್ತಿದ್ದಾರೆ.

ಈ ಕಡಲಬಾಳು ಗ್ರಾಮದ ಪರಿಸರವನ್ನು ಮರೆಯುವಂತಿಲ್ಲ. ಏಕೆಂದರೆ ಬದುಕಿನ

ನಡುವೆಯೂ ಧಾರ್ಮಿಕ ಆಚರಣೆಗಳನ್ನು, ದೇವಾಲಯಗಳ ಜಾತ್ರೆ, ಉತ್ಸವಗಳು, ಹರಕೆಗಳು ಹಾಗೆ ಪೂಜಾಕ್ರಮ, ಸಾಮಾಜಿಕ ಭಾವನಾತ್ಮಕ ಸಂಬಂಧಗಳು ವಿಶಿಷ್ಟವಾಗಿವೆ. ಇವುಗಳು ಅವರ ಧಾರ್ಮಿಕ ಸ್ಥಿತಿಯನ್ನು ಪರಿಗಣಿಸಲ್ಪಡುತ್ತವೆ. ದೈವ ಭಕ್ತಿ ಮತ್ತು ಈ ಭಕ್ತಿಯ ಆಶ್ರಯದಲ್ಲಿ ಬೆಳೆದು ಬಂದ ಭಾವನಾತ್ಮಕವಾದಂತಹ ಈ ಸಾಂಪ್ರದಾಯಿಕ ಆಚರಣೆಗಳು ಪಾರಂಪರಾಗತ ನಂಬಿಕೆಗಳ ಮೂಲವನ್ನು ತಿಳಿಸುವವು. ವರ್ಷಕೊಮ್ಮೆಯಾದರೂ ಕಡ್ಡಾಯವಾಗಿ ಹೋಗಿ ಪೂಜೆ ಸಲ್ಲಿಸಿ ಇಂತಹ ಸಾಂಸ್ಕತಿಕ ಸಂದರ್ಭದಲ್ಲಿ ಮತ್ತು ತಮ್ಮ ದಿನ ನಿತ್ಯದ ಆಚರಣೆ ಆಚಾರ-ವಿಚಾರಗಳಲ್ಲಿ ಕೆಲವು ಧರ್ಮಗಳ ಪ್ರಭುತ್ವ ಪ್ರಭಾವ ಬೀರಿರುವುದು ಕಂಡುಬರುತ್ತದೆ.

ಇಲ್ಲಿ ಸಾಮಾನ್ಯವಾಗಿ ಯಾವುದೇ ಪರಿಕಲ್ಪನೆ ಇಲ್ಲ. ಧರ್ಮ ಎಂದರೆ ಒಳ್ಳೆಯದು ಒಳ್ಳೆಯದು ಎಂದರೆ ಧರ್ಮ. ಸಾಮಾನ್ಯವಾಗಿ ಇಲ್ಲಿನ ಜನರಿಗೆ ಧರ್ಮದ ಬಗ್ಗೆ ನಾವು ಬೌದ್ಧ ನಾವು ಜೈನರು ಎಂಬ ಯಾವುದೇ ಪರಿಕಲ್ಪನೆ ಇಲ್ಲ. ಅದರ ಅರಿವು ಇಲ್ಲಿನವರಿಗೆ ಇಲ್ಲ. ಹಿಂದೂ ಧರ್ಮದಲ್ಲಿ ವಿಧವೆಯರಿಗೆ ತಲೆಬೋಳಿಸುವುದು ಅವಳು ಕುರೂಪಿಯಾಗಲಿ ಎಂದು ಅವಳನ್ನು ಯಾರು ಕಣ್ಣೆತ್ತಿಯೂ ಸಹ ನೋಡಬಾರದು. ಇವರು ದೀಕ್ಷೆ ಪಡೆದ ಮೇಲೆ ನಲವತ್ತೆರಡು ದಿನ ಮಾಂಸಾಹಾರವೂ ಸೇವಿಸುವಂತಿಲ್ಲ. ಬೇರೊಬ್ಬರ ಎಂಜಲನ್ನು ತಿನ್ನುವಂತಿಲ್ಲ. ಹಾಗೆಯೇ ಸುಳ್ಳು ಹೇಳುವಂತಿಲ್ಲ. ಕಳ್ಳತನ ಮಾಡುವಂತಿಲ್ಲ. ಪ್ರತಿ ದಿನ ಆಹಾರ ಸೇವನೆ ಮಾಡಲು ತಮ್ಮ ಮನೆಯಲ್ಲಿನ ದೇವರನ್ನು ಪೂಜೆ ಧಾನ್ಯವನ್ನು ಮಾಡಿ ನಂತರದಲ್ಲಿ ಆಹಾರವನ್ನು ಸೇವಿಸಬೇಕು.

ಇವುಗಳು ಅಲ್ಲದೆ ಅನೇಕ ಸಂಘ-ಸಂಸ್ಥೆಗಳು ಮತ್ತು ವೈಯಕ್ತಿಕವಾಗಿ ಮುಂದೆ ಬಂದ ರಾಷ್ಟ್ರಾಭಿಮಾನಿಗಳ ಚಳುವಳಿಯಲ್ಲಿ ಸ್ವಾತಂತ್ರ್ಯ ಕುರಿತು ಬೆಂಬಲ ಸೂಚಿಸಿದರು. ಆಂಧ್ರಪ್ರದೇಶದ ಪ್ರಖ್ಯಾತ ಸ್ವಾತಂತ್ರ್ಯದ ಹೋರಾಟಗಾರರು ಇವರು ಸ್ವಾತಂತ್ರ ಚಳುವಳಿಗೆ ಸ್ಪೂರ್ತಿಸೆರೆಯಾಗಿ ನಿಂತರು ಇದರಿಂದ ಬಳ್ಳಾರಿಯಲ್ಲಿ ಮತದಾನ ತಲೆಎತ್ತಿ ಚಳುವಳಿಯಲ್ಲಿ ಪ್ರಮುಖ ಪಾತ್ರವಹಿಸಿದೆ. ವಿದ್ಯಾರ್ಥಿಗಳು ವಿದ್ಯಾಭಿವೃದ್ಧಿಗೆ ಸಹಾಯ ಸಹಕಾರವನ್ನು ಕಲ್ಪಿಸಿತು ಹಾಗೇ ಎಲ್ಲ ಸಜ್ಜನ ವ್ಯಾಯಾಮ ಶಾಲೆ ಬಳ್ಳಾರಿ ಹರಿಜನರ ವಿದ್ಯಾರ್ಥಿನಿಯರ ಹಾಸ್ಟೆಲ್ ದೀನ ಸೇವಾ ಸಂಘ ಕೊಟ್ಟು ಭಾರತದ ವ್ಯಾಯಾಮ ಶಾಲೆ ಇವುಗಳ ಸೇವೆ ಸ್ವಾತಂತ್ರ್ಯ ಚಳುವಳಿಯಲ್ಲಿ ಗಮನೀಯವಾಗಿದೆ. ಬಳ್ಳಾರಿಯ ಜಿಲ್ಲೆಯಲ್ಲಿ ಅನೇಕ ಹೋರಾಟಗಳು ನಡೆದಿರುವಂತಹ ದಾಖಲೆ ಮಹಿಳೆಯರು ಹಿಂದೆ ಬೀಳಲಿಲ್ಲ ಎಂದೇ ಹೇಳಬೇಕು.

ಮಹಿಳೆಯರು ಸ್ವಾತಂತ್ರ್ಯ ಹೋರಾಟದಲ್ಲಿ ಕ್ರಿಯಾಶೀಲರಾಗಿದ್ದರು ಇವರಿಬ್ಬರು ವಿಧವಾ ಪುನರ್ ವಿವಾಹವಾಗಿದ್ದರು. ಕಡಲಬಾಳು ವಿವಾಹ ೭ನೇ ವರ್ಷ ವಯಸ್ಸಿಗೆ ನಡೆಯಿತು.

ದುರಾದೃಷ್ಟವಶ ಇವರ ಗಂಡ ತೀರಿಕೊಂಡರು. ಗಾಂಧೀಜಿಯವರ ವಿಚಾರ ರಾಷ್ಟ್ರೀಯ ಶ್ರೀಮಂತ ಒಂದು ವರ್ಷದಲ್ಲಿ ಸತ್ತರೂ ಈ ಸ್ವಾತಂತ್ರ್ಯ ಚಳುವಳಿಗೆ ತಮ್ಮ ಜೀವನವನ್ನು ಮುಡುಪಾಗಿಟ್ಟರು. ದೀನ ಸೇವಾ ಕ್ರಮ ಭಾರತ ವ್ಯಾಯಾಮ ಶಾಲೆ ಕಡಲಬಾಳಿನಲ್ಲಿ ಕಟ್ಟಿ ಬೆಳೆಸಿದರು. ಒಂದು ಸಮಾಜದ ಸುಧಾರಣೆಗೆ ಜೈಲಿಗೆ ಹೋದರು ಅಲ್ಲಿಯೇ ಹೋರಾಟ ನಡೆಸಿದರು. ಸ್ವಾತಂತ್ರ್ಯ ಹೋರಾಟಗಾರ್ತಿ ಎಂದು ಪರಿಗಣಿಸುವುದರಲ್ಲಿ ತಪ್ಪಲ್ಲ. ಇಂಥಹ ಸ್ವಾತಂತ್ರ್ಯ ಹೋರಾಟ ಮಹಿಳೆಯರು ಕಡಲಬಾಳಿನಲ್ಲಿ ನೋಡಬಹುದಾಗಿದೆ.

ಸಾಧ್ಯವಾದಷ್ಟು ಹಣಕಾಸಿನ ಬೆಂಬಲವನ್ನು ಸಹ ನೀಡಿದರು. ಇಂತಹ ಸಂದರ್ಭದಲ್ಲಿ ಖಾದಿ ಧರಿಸುತ್ತಿದ್ದ ಅಧಿಕಾರಿಗಳು ಗಾಂಧಿಯವರು ಮಾಡಿದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಲು ಮುಂದಾದರು. ೧೯೨೦ರ ನಂತರ ಸ್ವಾತಂತ್ರ್ಯ ಹೋರಾಟವು ಸಂಪೂರ್ಣವಾಗಿ ಸಮಾಜ ಮುಖಿಯಾಯಿತು. ಈ ಕಾಲ ಘಟ್ಟದಲ್ಲಿ ಜಿಲ್ಲೆಯ ಸಣ್ಣ-ಮಟ್ಟ ಹಳ್ಳಿಗಳು ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲ್ಗೊಂಡವು ಬಳ್ಳಾರಿಯ ನಗರ ಹರಪನಹಳ್ಳಿ ಹೊಸಪೇಟೆ ಮುಂತಾದ ಕೆಲವು ನಗರ ಕೇಂದ್ರದಲ್ಲಿ ನೆಲೆಗೊಂಡಿದಂತಹ ಸ್ವಾತಂತ್ರ್ಯ ಹೋರಾಟವು ೧೯೨೦ರ ನಂತರ ಹಡಗಲಿ, ಕೂಡ್ಲಿಗಿ, ಆಲೂರು, ಆದವಾನಿ, ರಾಯದುರ್ಗ ಮುಂತಾದ ತಾಲೂಕುಗಳಿಗೆ ಹರಡಿತು. ಈ ಕಾಲ ಘಟ್ಟದಲ್ಲಿ ಜಿಲ್ಲೆಯ ಹರಿಜನರು, ವೀರಶೈವರು, ವಾಲ್ಮೀಕಿ ವಂಶಸ್ಥರು ಗಂಗಾಮತಸ್ಥರು ರೆಡ್ಡಿ ಜನಾಂಗದವರು ಮರಾಠರು ಮುಸ್ಲಿಂರು ಹೀಗೆ ನೂರಾರು ಬಗೆಯ ಜನವರ್ಗವು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸತೊಡಗಿದರು. ಬಳ್ಳಾರಿ ಜಿಲ್ಲೆಯಲ್ಲಿ ಕಂಚಿ ಕೆರೆ, ಹರಾಳ, ತೆಲಿಗಿ, ತೂಲಹಳ್ಳಿ, ಕೊಟ್ಟೂರು, ಬೆಳಗಲ್, ಅರಸಿನಾಳ, ದಾಸನಪುರ, ರಾಮಸಾಗರ, ಬೆಣ್ಣಹಳ್ಳಿ, ಉಜ್ಜನಿ, ಶೃಂಗಾರ ತೋಟ, ನಾಗೇನಹಳ್ಳಿ, ಕಂಪಲಿ ಕುರುಗೋಡು ಕೊಲ್ಲುರೇವನ ಕುಂಟೆ ಬಾಚಿಕೊಂಡನ ಹಳ್ಳಿ ಕೋಗಳಿ ಕಡಲಬಾಳಿನಿಂದ "ಅಂಗಡಿ ಗುರು ಸಿದ್ದಪ್ಪ" ಮುಂತಾದ ನೂರಾರು ಗ್ರಾಮಗಳಿಗೆ ಸ್ವಾತಂತ್ರ್ಯ ಹೋರಾಟದ ಜ್ವಾಲೆಯನ್ನು ಹಬ್ಬಿತು.

ದೇಶ ಪ್ರೇಮದಿಂದ ಪ್ರೇರಿತರಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ಅನೇಕ ಬಗೆಯ ಹಿಂಸೆ ನೋವು ಅವಮಾನಗಳನ್ನು ಅನುಭವಿಸಿದ ಕಷ್ಟ ಕರ್ಪಣ್ಯಗಳ ಚಿತ್ರಣ ಚರಿತ್ರೆಯಲ್ಲಿ ದಾಖಲೆಯಾಗಿದೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ರಾಷ್ಟ್ರಮಟ್ಟದಲ್ಲಿ ಪ್ರಾಂತ್ಯ ಮಟ್ಟದಲ್ಲಿ ಹಾಗೆಯೇ ಸ್ಥಳೀಯ ಮಟ್ಟದಲ್ಲಿ ಅನೇಕ ಸಂಘ ಸಂಸ್ಥೆಗಳು ಹುಟ್ಟಿಕೊಂಡವು. ಸ್ವಾತಂತ್ರ್ಯ ಹೋರಾಟದ ಸಲುವಾಗಿಯೇ ಅವು ಕಾರ್ಯ ಪ್ರವೃತ್ತಿವಾಗಿದ್ದವು. ವ್ಯಾಯಾಮ ಶಾಲೆಗಳು, ಗರಡಿ ಮನೆಗಳು, ಗ್ರಂಥಾಲಯಗಳು, ಭಜನಾ ಮಂದಿರಗಳು, ಸಂಗೀತದ ಪಾಠಶಾಲೆಗಳು, ನಾಟಕ ಸಂಸ್ಥೆಗಳು, ಖಾದಿ ಸಂಸ್ಥೆಗಳು, ಶಿಕ್ಷಣ

ಸಂಸ್ಥೆಗಳು ಮುಂತಾದವು ತನ್ನದೆಯಾದಂತಹ ರೀತಿಯಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಕಾಣಿಕೆ ನೀಡಿದೆ. ಇಂತಹ ಸಂಸ್ಥೆಗಳಿಂದಲೇ ಪ್ರೇರಣೆ ವಿವಿಧ ಮೂಲಗಳಿಂದ ಬಂದಿರುವುದು ತಿಳಿದು ಬಂದಿರುತ್ತದೆ. ಸ್ವಾತಂತ್ರ್ಯದ ಈ ಸಂಘ-ಸಂಸ್ಥೆಗಳ ಮೂಲ ಉದ್ದೇಶವಲ್ಲದಿದ್ದರೂ ಅವು ಸ್ವಾತಂತ್ರ್ಯ ಚಳುವಳಿಗೆ ನಿಂತು ಕೆಲಸ ಮಾಡಿವೆ. ಜನರಲ್ಲಿ ಜಾಗೃತಿಯನ್ನು ಮೂಡಿಸುವಲ್ಲಿ ಇವುಗಳ ಪಾತ್ರ ಮಹತ್ವ ಬ್ರಿಟೀಷರು ಭಾರತದಲ್ಲಿ ಆಳ್ವಿಕೆ ನಡೆಸುತ್ತಿದ್ದ ಸಂದರ್ಭದಲ್ಲಿ ಸರ್ಕಾರಿ ಅಧಿಕಾರಿಗಳೆಲ್ಲರೂ ಬ್ರಿಟಿಷರೇ ಭಾರತೀಯರಾಗಿದ್ದರು. ಆದ್ದರಿಂದ ಸ್ವಾತಂತ್ರ್ಯ ಹೋರಾಟ ಸಂದರ್ಭದಲ್ಲಿ ಅವರು ವಿರೋಧಿಗಳಾಗಿರದೆ ಸಹಕಾರಿಗಳಾಗಿ ಕೆಲಸ ಮಾಡಿದರು. ಇದರಿಂದ ಮತ್ತಷ್ಟು ಚಾಲನೆ ದೊರೆಯಿತು. ಶಾಲಾ ಕಾಲೇಜುಗಳಲ್ಲಿರುವಂತಹ ಅಧ್ಯಾಪಕರು ಶಿಕ್ಷಕರು ಸ್ವಾತಂತ್ರ್ಯ ಹೋರಾಟ ಚಳುವಳಿಗೆ ಸ್ಪೂರ್ತಿ ಪ್ರೇರಣೆಯ ಸೆಲೆಗಳಾಗಿ ನಿಂತರು. ಪೋಲಿಸ್ ಅಧಿಕಾರಿಗಳು, ಶಿಕ್ಷಣಾಧಿಕಾರಿಗಳು, ತಹಶೀಲ್ದಾರರು ಮುಂತಾದವರು ತಮ್ಮದೆ ರೀತಿಯಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಬೆಂಬಲ ನೀಡಿದರು.

**೩.೫. ಶೈಕ್ಷಣಿಕ ಸ್ಥಿತಿಗತಿ**

ನಮಗೆ ಕಷ್ಟ ಬಂದಾಗ ಮಹಾರಾಜನ ದರ್ಶನ ಮಾಡಿದರೆ ರಾಜ ಪ್ರಸನ್ನನಾದರೆ ನಮ್ಮ ನೋವನ್ನು ನೋಡಿ ದನ, ಕನಕ, ಭೂಮಿ ಏನಾದರೂ ದಾನ ಮಾಡುತ್ತಾನೆ. ಅದರೆ ನಾವು ಅಕ್ಷರ ಕಲಿತರೆ ಮುಂದಿನ ಸಮಾಜಕ್ಕೆ ಮಾರ್ಗದರ್ಶನ ಮಾಡಬಹುದು. ಹೀಗಾಗಿ ಹುಟ್ಟಿದ ಮನುಷ್ಯ ಶಾಲೆಗೆ ಹೋಗಬೇಕೆಂದು ನಮ್ಮ ಪ್ರಾಚೀನ ಬದುಕಿನ ಭಾಗವಾಗಿತ್ತು. ಹಳ್ಳಿಯ ಪ್ರಾಚೀನ ಶಾಲೆಗಳ ಸ್ವರೂಪವೇ ಬದುಕಿಗೆ ಮಾರ್ಗದರ್ಶನ ಮಾಡುವಂತಿತ್ತು. ಆರಂಭದಲ್ಲಿ ಪ್ರಾರ್ಥನೆ ನಂತರ ಪಾಠ ಪ್ರವಚನ ಸಂಜೆ ಆಟ ಮತ್ತು ಮಗ್ಗಿಯ ವಾಚನ ಹೀಗೆ ಮನುಷ್ಯನಿಗೆ ಬೇಕಾದ ಅವಶ್ಯಕ ಜ್ಞಾನವನ್ನು ಈ ದೇವಾಲಯಗಳು ನೀಡುತ್ತಿದ್ದವು.

ಇಂದಿನ ದಿನಮಾನ ಶಾಲೆಗಳನ್ನು ಜ್ಞಾನ ದೇಗುಲಗಳೆಂದು ಕರೆಯುತ್ತಾರೆ. ಶಾಲೆಗಳಿಗೆ ಮತ್ತೆ ಅಲ್ಲಿ ಕಲಿಯುತ್ತಿರುವ ವಿದ್ಯಾರ್ಥಿಗಳಿಗೆ ಸರ್ಕಾರದಿಂದ ಅನೇಕ ಮಹನೀಯರು ದುಡಿದಿದ್ದಾರೆ. ಪ್ರಸ್ತುತ ವರ್ಷದಲ್ಲಿ ಸರ್ಕಾರದಿಂದ ಲಭ್ಯವಾಗುವಂತಹ ಬಿಸಿಊಟ, ಪಠ್ಯ ಪುಸ್ತಕ, ಸಮವಸ್ತ್ರ ವಿತರಣೆಗಳಂತಹ ಕಾರ್ಯಗಳನ್ನು ಅನುಷ್ಠಾನಕ್ಕೆ ತರುವುದರ ಮೂಲಕ ಗ್ರಾಮಾಂತರ ಪ್ರದೇಶದ ವಿದ್ಯಾರ್ಥಿಗಳಿಗೆ ಅನುಕೂಲ ಮಾಡಿಕೊಡುತ್ತಿದ್ದಾರೆ. ಸರ್ವ ಶಿಕ್ಷಣ ಅಭಿಯಾನದಡಿಯಲ್ಲಿ ಶಾಲೆ ಬಿಟ್ಟ ಮಕ್ಕಳು ಮತ್ತೆ ಶಾಲೆಗೆ ಸೇರಿಸುವ ಕಾರ್ಯಯೋಜನೆಯನ್ನು ನಮ್ಮ ಶಾಲೆಯ ಶಿಕ್ಷಕ ವೃಂದದವರು ಸಹ ಜಾರಿಗೊಳಿಸಿದ್ದಾರೆ. ಇದರ ಜೊತೆಗೆ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಅನೇಕ ರೀತಿಯಾದಂತಹ ಪ್ರಾಯೋಗಿಕ ಸಾಂಸ್ಕೃತಿಕ ಕಾರ್ಯಕ್ರಮವನ್ನು

ಹಮ್ಮಿ ಕೊಂಡಿದ್ದಾರೆ.

ವೈಯಕ್ತಿಕವಾಗಿ ಹಲವಾರು ಜನ ಗ್ರಾಮಸ್ಥರು ಸಹ ಸಹಾಯದ ಹಸ್ತ ನೀಡಿದ್ದಾರೆ. ಇದುವರೆಗೆ ಅನೇಕ ಪ್ರತಿಭಾನ್ವಿತ ವಿದ್ಯಾರ್ಥಿಗಳನ್ನು ನಾಡಿಗೆ ನೀಡಿದ ಕೀರ್ತಿ ಈ ಶಾಲೆಗೆ ಸಲ್ಲುತ್ತದೆ. ಅವರೆಲ್ಲ ಒಂದಲ್ಲಾ ಒಂದು ಕ್ಷೇತ್ರದಲ್ಲಿ ಗಣನೀಯವಾದಂತಹ ಸಾಧನೆಯನ್ನು ಸಾಧಿಸಿದ್ದಾರೆ. ಅದಕ್ಕೆ ಕಾರಣವಾದದ್ದು ನಮ್ಮ ಶಾಲೆ ಎಂಬುವುದು ಹೆಮ್ಮೆಯ ಸಂಗತಿ ಶತಮಾನದ ಸಮಾರಂಭದ ಆಚರಣೆಯಲ್ಲಿ ದುಡಿಯಲು ಅವಕಾಶ ಮಾಡಿಕೊಟ್ಟ ಗ್ರಾಮದ ಗುರು ಹಿರಿಯರನ್ನು ಶಾಲೆಯ ಶಿಕ್ಷಕರು ಅಲ್ಲಿಯ ವಿದ್ಯಾರ್ಥಿಗಳು ನೆನೆಯುತ್ತಾರೆ. ಅಕ್ಷರಜ್ಞಾನ ವನ್ನು ಎಲ್ಲಾ ಕಾಲಕ್ಕೆ ಬೆಳೆಸುವುದೇ ಸೇವೆಯೇ ನಮ್ಮ ಗುರಿಯಾಗಿದೆ.

**ಅಡಿಟಿಪ್ಪಣಿಗಳು**

೧. ರಮೇಶ ಸ.ಚಿ., **ಕರ್ನಾಟಕ ಜನಪದ ಆಚರಣೆಗಳು**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು.೨೧೦

೨. ಹನುಮಗೌಡ ಸಿ., **ಕುಷ್ಟಗಿ ತಾಲೂಕು ದರ್ಶನ**, ಕಾಂತಳ ಪ್ರಕಾಶನ ಕೊರಡಕೇರೆ, ಪು. ೬

೩. ಚಕ್ಕರೆ ಶಿವಶಂಕರ, **ಜನಪದ ತಿಳುವಳಿಕೆ**, ಸಾಗರ್ ಪ್ರಕಾಶನ ಬೆಂಗಳೂರು, ೨೦೦೮, ಪು.೧೯೦-೧೯೨

೪. ನೇತ್ರಾವತಿ ಕೆ.ವಿ., **ಕಮಲಾಪುರದ ಕೊರವರ ಸಮುದಾಯ**, ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩, ಪು.೯

೫. ಪ್ರಹ್ಲಾದಾಚಾರ್ಯ, **ಕಡಲಬಾಳು ರಾಯರ ಚರಿತ್ರೆ**, ಜನದನಿ ಪ್ರಕಾಶನ, ಹೊಸಪೇಟೆ, ೧೯೧೫, ಪು.೭೨

# ಅಧ್ಯಾಯ ನಾಲ್ಕು

## ಕಡಲಬಾಳು ಗ್ರಾಮದ ದೈವಗಳು

ಅಧ್ಯಾಯ ನಾಲ್ಕು

# ಕಡಲಬಾಳು ಗ್ರಾಮದ ದೈವಗಳು

**ಪೀಠಿಕೆ**

ಯಾವುದೇ ಒಂದು ಗ್ರಾಮದ ಅಧ್ಯಯನ ಕೈಕೊಳ್ಳುವಾಗ ಗ್ರಾಮದ ಹಿನ್ನೆಲೆಯಲ್ಲಿನ ಹಲವಾರು ಅಂಶಗಳು ನಮಗೆ ಸಹಾಯಕವಾಗಿರುತ್ತವೆ. ಈ ಹಿನ್ನೆಲೆಯಲ್ಲಿ ಗ್ರಾಮದ ಚಾರಿತ್ರಿಕ ಮತ್ತು ಜಾನಪದೀಯ ಅಂಶಗಳನ್ನು ಹೊಂದಿರುವ ಗ್ರಾಮದ ಎಲ್ಲಾ ದೈವಗಳ ಮತ್ತು ದೇವಾಲಯಗಳ ಕುರಿತು ಅಧ್ಯಯನ ಮಾಡುವುದು ಅಗತ್ಯವಾಗಿದೆ.

ಪ್ರಕೃತಿಯ ಮಡಿಲಲ್ಲಿ ಯಾವುದೊ ಒಂದು ಅದ್ಭುತವಾದ ಶಕ್ತಿ ಇದೆ. ಅದು ಅಗೋಚರ ಶಕ್ತಿಯು ಕೂಡ ಆಗಿದೆ. ಮಾನವನ ಊಹೆಗೆ ಎಟುಕಲಾರದ ಅದ್ಭುತ ಶಕ್ತಿಗಳ ಹಿಂದೆ ದೈವಗಳ ಪಾತ್ರ ಬಹಳವಿದೆ ಎಂಬುದು ತಿಳಿಯುತ್ತದೆ. ಅಂದರೆ ನಾವು ಸೇವಿಸುವ ಆಹಾರಗಳಲ್ಲೂ ದೈವಗಳ ಶಕ್ತಿಯಿದೆ ಎಂದು ನಂಬಿರುತ್ತೇವೆ. ಒಟ್ಟಿನಲ್ಲಿ ಒಂದಿಲ್ಲೊಂದು ಕಾರಣದಿಂದ ದೇವರನ್ನು ಪ್ರತಿಯೊಬ್ಬರೂ ನಂಬಿರುತ್ತಾರೆ. ಪ್ರಾಚೀನ ಕಾಲದಲ್ಲಿ ಅಲೆಮಾರಿಯಾಗಿದ್ದ ಮಾನವ ತನ್ನ ಆಹಾರದ ಹುಡುಕಾಟದಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆ ಹೋಗುತ್ತಿದ್ದ. ಆಗ ಅವನಿಗೆ ನಿರ್ಧಿಷ್ಟವಾದ ನೆಲೆ ಎಂಬುದು ಇರಲಿಲ್ಲ. ಜಗತ್ತೆಲ್ಲಾ ವಿಸ್ಮಯವಾಗಿ ಕಾಣುತ್ತಿತ್ತು. ಅಂದರೆ ಪ್ರಕೃತಿಯಲ್ಲಿ ನಡೆಯುವ ಘಟನೆಗಳು, ಬಿಸಿಲು, ಗಾಳಿ, ಚಳಿ, ಮಿಂಚು, ಗುಡುಗು, ಬಿರುಗಾಳಿ, ಪ್ರವಾಹ, ಭೂಕಂಪ, ಕಾಡ್ಗಿಚ್ಚು ಮುಂತಾದ ಘಟನೆಗಳು ಮನುಷ್ಯನಿಗೆ ಅಪಾಯಕಾರಿ ಇದೆ ಎಂಬುದು ಗೊತ್ತಾಗುತ್ತಿತ್ತು. ಮನುಷ್ಯನಿಗೆ ಆಪತ್ತು ತರುವ ಪ್ರಕೃತಿಯ ವಿಶೇಷಗಳಿಗೆ ಹೆದರುವ ಅವುಗಳನ್ನು ವಿನಯದಿಂದ ಒಲಿಸಿಕೊಳ್ಳುವ ಪ್ರಯತ್ನ ಸದಾ ನಡೆಯುತ್ತಾ ಬಂದಿದೆ.

"ಹೀಗೆ ಮನುಷ್ಯ ಅಗೋಚರ ಶಕ್ತಿಗಳ ಮೇಲೆ ಅಪಾರ ನಂಬಿಕೆ ಇಟ್ಟಿದ್ದಾನೆ. ಪ್ರಕೃತಿಯಲ್ಲಿ ಕಾಣಿಸಿಕೊಳ್ಳುವ ಮಳೆ, ಗುಡುಗು, ಸಿಡಿಲು, ಮಿಂಚು ಅಗೋಚರವಾಗಿವೆ. ಕಲ್ಲು, ಮರ,

ಮಣ್ಣುಗಳಲ್ಲಿ ದೈವತ್ವದ ಅಂಶಗಳನ್ನು ಕಾಣುತ್ತ ಬಂದಿದ್ದಾನೆ. ಇದರ ಹಿಂದೆ ಒಂದು ಅದ್ಭುತ ಶಕ್ತಿ ಇದೆ ಎಂಬುದನ್ನು ಕಂಡುಕೊಂಡಿದ್ದಾನೆ. ದೇವರು ಎಂಬ ಪರಿಕಲ್ಪನೆಯಿಂದ ಭಯ, ಭಕ್ತಿ, ಆಶ್ಚರ್ಯ, ಬೇಡುವ ಮನೋವೃತ್ತಿ ಮುಂತಾದವುಗಳನ್ನು ಕಾಣಬಹುದಾಗಿದೆ."[೧]

ಕಡಲಬಾಳು ಗ್ರಾಮದ ಜನರಿಗೆ ಶಾಂತಿಯುತವಾದ ನೆಮ್ಮದಿಯುಕ್ತ ಜೀವನ ನಡೆಸುವುದಕ್ಕೆ ಅಲ್ಲಿರುವ ದೈವಗಳೇ ಪ್ರಮುಖವಾದ ಪ್ರಭಾವ ಬೀರಿವೆ. ಕಡಲಬಾಳು ಗ್ರಾಮದಲ್ಲಿ ಅನ್ನ ನೀಡುವ ರೈತ, ಕುಶಲಕರ್ಮಿಗಳು, ವಿದ್ಯಾವಂತ ಯುವಕರು ಹಾಗೆಯೇ ಧಾರ್ಮಿಕ ಪರಂಪರೆ ಸಾರಿ ಸಾರಿ ಹೇಳುತ್ತದೆ. ಧಾರ್ಮಿಕತೆಯ ಹೆಮ್ಮೆಯ ಕೊಡುಗೆಗಳೆಂದರೆ ಗುಡಿ ಗೋಪುರಗಳು, ಅವುಗಳ ಮೂಲಕ ಕಡಲಬಾಳು ಗ್ರಾಮದಲ್ಲಿ ಸಂಸ್ಕೃತಿ ಹೀಗೆ ಇದೆ ಎಂದು ತಿಳಿಯ ಬಹುದಾಗಿದೆ.

**೪.೧. ಆಂಜನೇಯಸ್ವಾಮಿ ದೇವಸ್ಥಾನ**

| | | |
|---|---|---|
| **ದೇವರು** | : | ಹನುಮಂತ ದೇವರು |
| **ಕಾಲ** | : | ಸುಮಾರು ೩೫೦ ವರ್ಷಗಳ ಹಳೆಯದು |
| **ಅಭಿಮುಖ** | : | ದಕ್ಷಿಣ |
| **ಸ್ಥಿತಿ** | : | ಉತ್ತಮ |
| **ಸಂರಕ್ಷಣೆ** | : | ಊರಿನ ನಾಗರಿಕರು |

ಆಂಜನೇಯ ದೇವಾಲಯ ಶಿಲೆಯಿಂದ ಕೂಡಿದ್ದು, ಗರ್ಭ ಗುಡಿಯಲ್ಲಿ ಆಳೆತ್ತರದ ಆಂಜನೇಯ ವಿಗ್ರಹವಿದ್ದು, ಉಬ್ಬು ಶಿಲ್ಪಕಲೆಗಳಿಂದ ಕೂಡಿದೆ. ಮುಂದಿನ ಸಭಾಮಂಟಪ, ಪೂರ್ವದಲ್ಲಿ ಮಣ್ಣಿನಿಂದಲೇ ನಿರ್ಮಿಸಲ್ಪಟ್ಟಿತೆಂದು, ನಂತರ ಶಿಲ್ಪ ಮಂಟಪವಾಗಿ ಪರಿವರ್ತನೆ ಯಾಯಿತು ಎಂದು ಹಿರಿಯರು ಹೇಳುವರು. ಈ ದೇವಾಲಯದ ಗರ್ಭಗೃಹದ ಮೇಲೆ ಅಷ್ಟೇನು ಕಲಾನೈಪುಣ್ಯವಿಲ್ಲದ ಗೋಪುರವಿದೆ. ಅದರ ಮೇಲೆ ಹಿತ್ತಾಳೆ ಕಳಸ ಕೂಡಿಸಲಾಗಿದೆ. ಈ ದೇವಾಲಯದ ಆವರಣದಲ್ಲಿ ತುಳಸಿಕಟ್ಟೆ, ಗರುಡಗಂಬ, ಅಗ್ನಿಹೊಂಡ ಇದ್ದು ಇತ್ತೀಚಿಗೆ ನವಗ್ರಹ ಮಂಟಪವನ್ನು ದೇವಸ್ಥಾನದ ಬಲಬದಿಯ ಆವರಣದಲ್ಲಿ ನಿರ್ಮಿಸಿದ್ದಾರೆ.

**ನಾಗರಕಲ್ಲು:** ಆವರಣದ ಹೊರ ಮುಂಭಾಗದಲ್ಲಿ ಹೊಸದಾಗಿ ಕಮಾನುಗಳಿಂದ ಕೂಡಿದ ದೊಡ್ಡದಾದ ಪ್ರವೇಶ ಮಹಾದ್ವಾರವಿದ್ದು, ಅದರ ಮೇಲ್ಭಾಗದಲ್ಲಿ ರಾಮ, ಲಕ್ಷ್ಮಣ, ಸೀತೆ, ಹನುಮಂತ ಹಾಗೂ ಇತರೆ ಪುರಾತನ ದೇವತೆಗಳ ವಿಗ್ರಹಗಳನ್ನು ರಂಜನೀಯವಾಗಿ

ನಿರ್ಮಿಸಿದ್ದಾರೆ. ದೇವಾಲಯದ ಹೊರಗೆ ಯುಗಾದಿ ಹಬ್ಬದಲ್ಲಿ ಕೊಂಡ ಹಾರಲಿಕ್ಕಾಗಿಯೇ ಪುರಾತನ ಕಲ್ಲು ಗಚ್ಚಿನಿಂದ ಕೂಡಿದ ಒಕುಳಿ ಹೊಂಡವೂ ಇದೆ. ಅಲ್ಲದೆ ದೇವಸ್ಥಾನದ ಒಳಗೆ ಆಂಜನೇಯನ ಚಮ್ಮರವಿದ್ದು(ಪಾದರಕ್ಷೆ), ಆವರಣದ ಒಳಾಂಗಣದಲ್ಲಿ ಚಿಕ್ಕದಾದ ಗುಡಿಯಲ್ಲಿ ಚರ್ಮದಿಂದ ಮಾಡಿರುವಂತಹ ಪಾದರಕ್ಷೆಗಳನ್ನು ಭಕ್ತರು ತಂದು ಪ್ರತಿವರ್ಷ ಇಡುತ್ತಾರೆ. ಈ ಚಪ್ಪಲಿಗಳು ವರ್ಷಪೂರ್ತಿ ಅಲ್ಲಿಯೇ ಇದ್ದು ಸವೆಯುತ್ತವೆ. ಹನುಮಂತನು ಇವುಗಳನ್ನು ಧರಿಸುತ್ತಾನೆಂದು ನಂಬಿರುತ್ತಾರೆ. ಭಕ್ತರು ಅವುಗಳಿಂದ ತಮ್ಮ ಮೈಗಳಿಗೆ ಬಡಿದುಕೊಳ್ಳುತ್ತಾರೆ. ನೂತನವಾಗಿ ಸರ್ಕಾರಿ ಅನುದಾನದೊಂದಿಗೆ ಸಮುದಾಯ ಭವನವನ್ನು ಸಹ ಇಲ್ಲಿ ನಿರ್ಮಿಸಲಾಗಿದೆ. ೩೫೦ ವರ್ಷಗಳ ಹಿಂದೆ ಈ ದೇವಾಲಯದ ಪೂಜಾರಗಿರಿಯ ತಾಯಿ ಪೂಜಾರಿ ವೆಂಕಮ್ಮ ಭೀಮವ್ವ ಎಂಬುವರು ಆಂಜನೇಯ ದೇವಸ್ಥಾನದ ಮೇಲೆ ಇರುವ ಮೊದಲ ಗೋಪುರವನ್ನು ಕಟ್ಟಿಸಿದ್ದು ಎಂದೂ, ಇತ್ತೀಚೆಗೆ ಆಂಜನೇಯನ ಮೇಲೆ ಇರುವಂತಹ ಗೋಪುರವನ್ನು ಸಹ ಹೊಸದಾಗಿ ನಿರ್ಮಾಣ ಮಾಡಲಾಗಿದೆ ಎಂದು ಹೇಳುವರು.

ಬೆಳ್ಳಿ ಮೂರ್ತಿಯನ್ನು ಚೌರದ ಸಣ್ಣ ಮೂಕಪ್ಪರು ಕೊಡಿಸಿರುತ್ತಾರೆ. ಜೊತೆಗೆ ಇನ್ನೊಂದು ಮೂರ್ತಿಯನ್ನು ಕೊಟ್ರೇಶ ಆಚಾರಿ ಕೊಡಿಸಿರುತ್ತಾರೆ. ಟೈಲ್ಸನ್ನು ಹನುಮಚಾರಿಯ ಮಗನಾದ ಮೌನೇಶಾಚಾರಿ ಕೊಡಿಸಿದ್ದಾರೆ. ದೇವಸ್ಥಾನದ ಹೊರಗೆ ಹಾಕಲಾದ ಟೈಲ್ಸ್ ಊರಿನ ಜನರೇ ಕೊಡಿಸಿದ್ದಾರೆ. ಕಾರ್ತಿಕ ಮಾಸದಲ್ಲಿ ದೀಪ ಹಚ್ಚುವ ಪ್ರಣತಿಗಳನ್ನು ಪೇವನ ದುರುಗುಪ್ಪನ ಮಗಳಾದ ಮಂಜಮ್ಮ ಕೊಡಿಸಿರುತ್ತಾಳೆ. ದೇವಾಲಯದಲ್ಲಿನ ಹುಂಡಿಯನ್ನು ಬಣಕಾರ ಬಸವರಾಜ ಕೊಡಿಸಿರುತ್ತಾರೆ. ಪೂಜೆಮಾಡುವ ಸಾಮಾನುಗಳನ್ನು ಸಹ ಊರಿನ ದೈವಸ್ಥರೇ ಕೊಡಿಸಿದ್ದಾರೆ.

### ೪.೨. ದುರ್ಗಾಂಬಿಕಾ ದೇವಸ್ಥಾನ

**ಹೆಸರು** : ದುರ್ಗಾಂಬಿಕಾದೇವಿ

**ಶೈಲಿ** : ಆಧುನಿಕ ಶೈಲಿ

**ಕಾಲ** : ಸುಮಾರು ೩೫೦ ವರ್ಷ

**ಸ್ಥಳ** : ಊರಕೇರಿ ಮಧ್ಯ

**ಅಭಿಮುಖ** : ಪೂರ್ವಾಭಿಮುಖ

**ಸ್ಥಿತಿ** : ಉತ್ತಮ

ದೇವಾಲಯದಲ್ಲಿ ಮೊದಲನೇ ಮೂರ್ತಿ ಚೆನ್ನಾಗಿದ್ದು, ೧೫ ವರ್ಷಗಳ ಈಚೆಗೆ ಹೊಸದಾದ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ಮೂರ್ತಿಯನ್ನು ಪುನಃ ತೆಗೆದು

ಮೊದಲಿದ್ದ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಿದ್ದರು. ಪ್ರತಿ ವರ್ಷ ಪದ್ಧತಿಯಂತೆ ಶ್ರಾವಣ ಮಾಸದಲ್ಲಿ ದುರ್ಗಮ್ಮ ಅಮ್ಮನ ಪಲ್ಲಕ್ಕಿ ಮತ್ತು ಛತ್ರಿಯನ್ನು ತೆಗೆದುಕೊಂಡು ಬರುತ್ತಾರೆ. ಹನ್ನೊಂದು ವರ್ಷಗಳಿಗೊಮ್ಮೆ ಜಾತ್ರೆ ನಡೆಯುತ್ತದೆ. ದೇವಾಲಯದ ಸ್ಥಿತಿ ಉತ್ತಮವಾಗಿದ್ದು, ನೆಲಕ್ಕೆ ಟೈಲ್ಸ್ ಮತ್ತು ಗೋಡೆಯ ಕೆಳಗೆ ಟೈಲ್ಸ್ ಹಾಕಿರುತ್ತಾರೆ. ಮೇಲ್ಭಾಗದಲ್ಲಿ ಆರ್.ಸಿ.ಸಿ ಹಾಕಿರುವರು. ಜೊತೆಗೆ ಗುಡಿಯ ಮೇಲ್ಭಾಗದಲ್ಲಿ ಗೋಪುರವಿದ್ದು ಅದರ ಮೇಲೆ ಮೂರು ಕಳಸಗಳಿವೆ.

**ವಿಶೇಷತೆ:** ಶ್ರಾವಣ ಮಾಸದಲ್ಲಿ ಬ್ರಾಹ್ಮಣರು ೯ ದಿನ ಆಂಜನೇಯ, ರಾಮ ಮತ್ತು ಸೀತೆಯನ್ನು ಪೂಜಿಸುತ್ತಾರೆ. ಪ್ರತಿವರ್ಷವೂ ಕೂಡ ತೇರು ಎಳೆಯುವಾಗ ಬ್ರಾಹ್ಮಣರು ತೇರನ್ನು ಏರುವುದು ರೂಢಿಯಾಗಿದೆ.

### ೪.೩. ಊರಮ್ಮನ ದೇವಸ್ಥಾನ

**ದೇವರು** : ಊರಮ್ಮ ದೇವಿ

**ಕಾಲ** : ಸುಮಾರು ೩೫೦ ವರ್ಷ ಹಳೆಯದು

**ಅಭಿಮುಖ** : ಪೂರ್ವಾಭಿಮುಖ

**ಸ್ಥಿತಿ** : ಉತ್ತಮ

ಬಡಿಗೇರ ಹನುಮಂತಚಾರಿಯವರು ಊರಮ್ಮನ ಪುರಾಣ ಓದುವಾಗ ನಾಗರ ಹಾವು ಬಂದು ಅವರ ತೊಡೆಯ ಮೇಲೆ ಹೆಡೆಯತ್ತಿ ಆಡಿ ದೇವಿಗೆ ನೈವೇದ್ಯ ಮಾಡಿದಂತಹ ಹಾಲನ್ನು ಕುಡಿದು, ಹಾವು ತನ್ನಷ್ಟಕ್ಕೆ ತಾನೇ ಹೋಗುತ್ತಿತ್ತು. ಇವರ ಮಕ್ಕಳಾದ ಬಡಿಗೇರ ಕಾಳಾಚಾರಿ, ಈಶ್ವರಾಚಾರಿ ತಂದೆ ಹನುಮಂತಾಚಾರಿ ಇವರು ಪೂಜೆ ಮಾಡುವಾಗ ಊರಮ್ಮ ತಾಯಿ ಕುಂಕುಮ ಹಚ್ಚಿಕೊಳ್ಳುವ ಸಮಯದಲ್ಲಿ ಊರಮ್ಮ ದೇವಿ ಸ್ವತಃ ಭಾಗಿಯೇ ಕುಂಕುಮ ಹಚ್ಚಿಕೊಂಡು ಪೂಜೆ ಮಾಡಿಸಿಕೊಳ್ಳುತ್ತಾಳೆ ಎಂದು ಹೇಳುವರು. ಇವರ ಮಕ್ಕಳು ಕಾಳಪ್ಪಚಾರಿಯ ಮಗನಾದ ಹನುಮಂತಾಚಾರಿ ಮತ್ತು ಈಶ್ವರಾಚಾರಿ ಮಕ್ಕಳಾದ ನಾಗರಾಜಾಚಾರ್ಯ ಮತ್ತು ಕೊಟ್ರೇಶ ಆಚಾರ್ಯ ಇವರುಗಳು ಪೂಜೆಯನ್ನು ಮಾಡುತ್ತಾ ಬಂದಿದ್ದಾರೆ. ಹನುಮಂತಾಚಾರಿ ಪ್ರಸ್ತುತ ಪೂಜೆ ಮಾಡುತ್ತಿದ್ದಾರೆ. ಸುಮಾರು ೩೫೦ ವರ್ಷಗಳ ಹಿಂದೆ ನಡೆದ ಜಾತ್ರೆ ನಂತರ ೨೧.೦೧.೨೦೧೨ರಲ್ಲಿ ಜಾತ್ರೆ ಪುನಃ ಮತ್ತೆ ಪ್ರಾರಂಭವಾಗಿ ೨.೨.೨೦೧೨ ರಂದು ಜಾತ್ರೆ ಮುಗಿಯಿತು.

**ಸ್ಥಿತಿ:** ೩೫೦ ವರ್ಷಗಳ ಹಿಂದೆ ಸ್ಥಾಪನೆಯಾದ ದೇವಸ್ಥಾನವು ಈಗಲೂ ಹಾಗೆಯೇ ಇದೆ. ಆದರೆ ವಾಸ್ತವವಾಗಿ ಅದರ ಸುತ್ತಲೂ ಜಾಲಿ ಬೆಳೆದಿತ್ತು, ಅದನ್ನು ಸ್ವಚ್ಛಗೊಳಿಸಿ ಅಲ್ಲಿ ಇದ್ದ ಬಾವಿಯನ್ನು ಮುಚ್ಚಿ ಸುತ್ತಲೂ ಕಾಂಪೌಂಡ್ ನಿರ್ಮಿಸಿದ್ದಾರೆ. ಹಾಗೆಯೇ ಹೊಸದಾಗಿ ಗೋಪುರ ನಿರ್ಮಾಣ ಕಳಸ ನಿರ್ಮಾಣವಾಗಿದೆ. ದೇವಿ ವಿಗ್ರಹ ಹೊಸದಾಗಿದೆ. ಅದರ ಸುತ್ತಲೂ ಕಾಂಕ್ರಿಟ್ ಹಾಕಲಾಗಿದ್ದು, ತೆಂಗಿನ ಮರ, ಹೂವಿನಗಿಡ ಬೆಳೆಸಿ ಅದರ ಕೆಳಗೆ ಊರಮ್ಮನ ಪಾದರಕ್ಷೆಗಳನ್ನು ಇಡಲಾಗಿದೆ. ಇತ್ತೀಚೆಗೆ ಊರಮ್ಮ ದೇವಿಯ ಮಹತ್ವವೇನೋ ಮಂಟಪದ ಕೆಲಸ ಪೂರ್ಣಗೊಳ್ಳುತ್ತಾ ಬಂದಿಲ್ಲ. ದ್ವಾರಬಾಗಿಲ ಮೇಲೆ ಬಲಭಾಗಕ್ಕೆ ಊರಮ್ಮ ದೇವಿ ಮತ್ತು ಎಡಭಾಗಕ್ಕೆ ಸಿಂಹ ರಾಘವೇಂದ್ರ ಸ್ವಾಮಿ ಮಠ ಮತ್ತು ಆಂಜನೇಯ ಸ್ವಾಮಿ ಮೂರ್ತಿಯೂ ಇದೆ. ಊರಮ್ಮನ ಮೂರ್ತಿ ೩೫೦ ವರ್ಷ ಹಿಂದಿನದ್ದು. ಮೂರ್ತಿಯು ಈಗಲೂ ಹಾಗೆಯೇ ಇದ್ದು, ಇದನ್ನು ದಿನನಿತ್ಯ ಪೂಜೆ ಮಾಡುತ್ತಾರೆ.

**ಊರಮ್ಮನ ಪವಾಡಗಳು:** ೧. ಹೆಣ್ಣುಮಕ್ಕಳಿಗೆ ಮಕ್ಕಳ ಭಾಗ್ಯ ನೀಡುತ್ತಾಳೆ. ೨. ಬೇಡಿದ ವರವನ್ನು ದಯಪಾಲಿಸಿದ್ದಕ್ಕಾಗಿ ಅವರೇ ಸ್ವಯಿಚ್ಛೆಯಿಂದ ಸೀರೆ ಉಡಿಯಕ್ಕಿ, ಸಾಮಾನು, ಬಂಗಾರ, ಬೆಳ್ಳಿ, ಚಿಕ್ಕ ಮೂರ್ತಿ ದೀಪ ಹಚ್ಚುವ ಕಳಸವನ್ನು ಒಪ್ಪಿಸಿದ್ದಾರೆ. ೩. ತಾಯಿಯು ದೇವಸ್ಥಾನಕ್ಕೆ ಹೋದಾಗ ಭಕ್ತಿಯಿಂದ ಮನಸ್ಸಿನಲ್ಲಿರುವಂತಹ ಆಸೆಯನ್ನು ದಯಪಾಲಿಸುತ್ತಾಳೆ. ೪. ಅಮ್ಮ ಕಾಣಿಸಿಕೊಂಡ ಮಕ್ಕಳಿಗೆ ೯ ದಿನಗಳ ಒಳಗಾಗಿಯೇ ಉಡಿ ತುಂಬಿದರೆ ಅಥವಾ ಉಡಿ ತುಂಬಿ ಉಡಿಯಕ್ಕಿ ಹಾಕಿಸಿಕೊಂಡರೆ ಯಾವ ರೀತಿಯಾದ ಕಾಯಿಲೆಗಳು ಇರುವುದಿಲ್ಲವೆಂಬ ನಂಬಿಕೆ ಇದೆ.

**ಪೂಜಾ ವಿಧಾನ:** ಮಂಗಳವಾರ ಮತ್ತು ಶುಕ್ರವಾರ ಹಾಗೂ ಅಮವಾಸ್ಯೆ, ಹುಣ್ಣಿಮೆ, ತಿಥಿ, ವಾರ ನಕ್ಷತ್ರಗಳಲ್ಲಿ ಪೂಜೆ ಮತ್ತು ಗ್ರಹಣ ಹಿಡಿದಾಗ ಪೂಜೆ ಮಾಡುತ್ತಾರೆ. ಊರಮ್ಮ ದೇವಿಯ ಮೈಮೇಲೆ ಇರುವ ತಾಳಿ ಬಂಗಾರದಾಗಿದ್ದು, ಇದನ್ನು ದೈವಸ್ಥರು ಕೊಡಿಸಿರುತ್ತಾರೆ.

### ೪.೪. ಈಶ್ವರ/ಕಲ್ಲೇಶ್ವರ ದೇವಸ್ಥಾನ

ಈ ದೇವಾಲಯವು ಸುಮಾರು ೩೦೦ ವರ್ಷಗಳ ಹಳೆಯದಾಗಿದ್ದು, ಈ ದೇವಾಲಯವು ಊರಿನ ದಕ್ಷಿಣಕ್ಕೆ ಇದೆ. ಶಿವರಾತ್ರಿ ದಿನ ವಿಶೇಷ ಪೂಜೆಯನ್ನು ಮಾಡುತ್ತಾರೆ. ಕೊಪ್ಪಳ ಶಿವಶಾಂತವೀರ ಸ್ವಾಮಿಗಳು, ಕಡಲ ಬಾಳಿನ ಶಶಿಧರ ಶಿವಶಾಂತವೀರ ಸ್ವಾಮಿಗಳು ಸೇರಿ ಕಲ್ಲೇಶ್ವರ ದೇವಸ್ಥಾನದ ಬಾಗಿಲನ್ನು ಪೂರ್ವಕ್ಕೆ ಮುಖ ಮಾಡಿ ೨೦ ವರ್ಷಗಳ ನಂತರ ಪೂಜೆಯನ್ನು ಪ್ರಾರಂಭಿಸಿದ್ದಾರೆ. ಈ ದೇವಾಲಯದ ಪ್ರಥಮ ಪೂಜಾರಿ ಸಿರಿಯಾರ ಸಿದ್ದರಾಮಜ್ಜ ಮತ್ತು ಅಣ್ಣ ತಮ್ಮಂದಿರು. ಮಕ್ಕಳು ಕೂಡ ಅದೇ ರೀತಿಯಾಗಿ ಪೂಜೆ ಮಾಡುತ್ತ ಬಂದರು.

ಆ ಮೇಲೆ ಬೇರೆಯವರಿಗೆ ವಹಿಸಲಾಗಿದೆ. ಈ ದೇವಾಲಯಕ್ಕೆ ಶಶಿಧರ ಶಿವಾಚಾರ್ಯ ಸ್ವಾಮಿಗಳು ಮತ್ತು ಒಂಟಿಗೋಡಿ ಬಳಗದವರು ವೀರಭದ್ರೇಶ್ವರ ಮೂರ್ತಿಯನ್ನು ತಂದು ಸ್ಥಾಪಿಸಿದ್ದಾರೆ. ಅದಲ್ಲದೇ ವರ್ಷಕ್ಕೆ ಒಮ್ಮೆ ಸೀಗೆ ಹುಣ್ಣಿಮೆಯಲ್ಲಿ ಊರಿನ ಜನರು ಶಸ್ತ್ರ ಹಾಕಿಕೊಳ್ಳುವ ಮೂಲಕ ಕಾರ್ಯಕ್ರಮಗಳನ್ನು ನಡೆಸುತ್ತಾರೆ.

### ೪.೫. ಬಸವೇಶ್ವರ ದೇವಸ್ಥಾನ

ಈ ದೇವಾಲಯವು ಸುಮಾರು ೩೦೦ ವರ್ಷಗಳ ಹಳೆಯದು. ಇಲ್ಲಿ ವರ್ಷಕ್ಕೆ ಒಮ್ಮೆ ಬಸವ ಜಯಂತಿಯಂದು ಎತ್ತುಗಳ ಮೆರವಣಿಗೆ ಮಾಡುತ್ತ ಬಂದಿದ್ದಾರೆ. ಇತ್ತೀಚೆಗೆ ಗ್ರಾಮದ ಪ್ರಮುಖರು ಸೇರಿ ಬಸವಣ್ಣನ ದೇವಸ್ಥಾನದಲ್ಲಿ ವಿಶೇಷವಾದ ಆಧುನಿಕ ಶೈಲಿಯಲ್ಲಿ ದೇವಾಲಯವನ್ನು ನಿರ್ಮಿಸಿ, ೨೦೧೫ರಲ್ಲಿ ಗೋಪುರ ಕಟ್ಟಿಸಿ, ವಿಶೇಷವಾದ ಕಳಸ ಇಟ್ಟು ಗೋಪುರ ಪ್ರತಿಷ್ಠಾಪನೆಯನ್ನು ಮಾಡಲಾಗಿದೆ. ಇತ್ತೀಚೆಗೆ ಈ ದೇವಾಲಯದಲ್ಲಿ ವಿಶೇಷವಾದ ಪೂಜಾ ಕಾರ್ಯಕ್ರಮಗಳು ನಡೆಯುತ್ತಿವೆ.

### ೪.೬. ಕಾಳಮ್ಮನ ದೇವಸ್ಥಾನ

ಈ ದೇವಾಲಯವು ಮೊಟ್ಟಮೊದಲಿಗೆ ಶಶಿಧರ ಶಿವಾಚಾರ್ಯಸ್ವಾಮಿಗಳಿಂದ ಪ್ರಾರಂಭ ವಾಗಿದ್ದು, ಇಲ್ಲಿ ಪ್ರತಿ ವರ್ಷ 'ಬನ್ನಿ ಮುಡಿಯಲಿಕ್ಕೆ' ಈ ದೇವಾಲಯಕ್ಕೆ ಬರುತ್ತಾರೆ ಮತ್ತು ಇತ್ತೀಚಿಗೆ ಅದೇ ಕಾಳಿಕಾ ನಗರದ ಎಲ್ಲಾ ಸಮುದಾಯದ ಬಾಂಧವರು ಕೂಡಿ ಗೋಪುರ ಕಟ್ಟಿಸಿದ್ದು, ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಿದ್ದಾರೆ. ಪ್ರತಿವರ್ಷ ನವರಾತ್ರಿಯಲ್ಲಿ ಪುರಾಣ ಓದಿಸುವಿಕೆ ಕಾರ್ಯಕ್ರಮ ನಡೆಯುತ್ತಿದೆ.

### ೪.೭. ಗುಂಡಭರ್ಮಪ್ಪ ದೇವಸ್ಥಾನ

ಇದು ಕಡಲಬಾಳಿನಿಂದ ಅಡವಿ ಆನಂದೇವನಹಳ್ಳಿ ರಸ್ತೆಯಲ್ಲಿದ್ದು, ಹಿಂದಿನಿಂದಲೂ ಪೂಜೆ-ಪುನಸ್ಕಾರ ಪ್ರತಿವರ್ಷ ನಡೆಯುತ್ತಿದೆ. ಪ್ರತಿ ವರ್ಷ ಆಂಜನೇಯನ ಸ್ವಾಮಿಯನ್ನು ಶ್ರಾವಣ ಮಾಸದಲ್ಲಿ ಇಲ್ಲಿಗೆ ತಂದು ಪೂಜೆ ಮಾಡಿಕೊಂಡು ಬರುತ್ತಾರೆ. ಅಲ್ಲದೆ ಹೊಳಿಗೆ ಹೋಗುವ ಸಮಯದಲ್ಲಿ ಬಂದು ಹೋಗುತ್ತಾರೆ. ಸಣ್ಣ ಗುಡ್ಡಕ್ಕೆ ಹೋಗುವ ಸಮಯದಲ್ಲಿ ಗುಂಡಭರ್ಮಪ್ಪಗೆ ಬಂದು ಹೋಗುವ ಪದ್ಧತಿ ಇದೆ.

### ೪.೮. ಮಸೀದಿ

ಈ ಮಂದಿರವು ಸುಮಾರು ೩೦೦ ವರ್ಷಗಳ ಹಳೆಯದಿದ್ದು, ಮುಸ್ಲಿಂ ಬಾಂಧವರು ಪ್ರತಿ ಶುಕ್ರವಾದ ನಮಾಜು ಮಾಡಿ, ಭಕ್ತಿ ಭಾವಪೂರಕ ನಮನ ಸಲ್ಲಿಸುತ್ತಾರೆ. ಅಲ್ಲದೆ

ಮೋಹರಂ ಹಬ್ಬದಂದು ಭಾರಿ ವಿಜೃಂಭಣೆಯಿಂದ ಹಿಂದೂ-ಮುಸ್ಲಿಂ ಬಾಂಧವರೆಲ್ಲಾ ಸೇರಿ ಹಬ್ಬ ಆಚರಿಸುತ್ತಾರೆ. ಅಲ್ಲದೆ ಈ ಹಬ್ಬಗಳಲ್ಲಿ ೭ ದಿನದ ಸವಾರಿ, ೮ ದಿನದ ಸವಾರಿ, ೯ ದಿನದ ಸವಾರಿ ಅಂದರೆ ದೇವರ ಮೂರ್ತಿಯನ್ನು ಊರ ಒಳಗೆ ತಂದು ಜೊತೆಗೆ ಬಂದು ಹೋಗುತ್ತಾರೆ. ಮಾಮ ಸುಲ್ತಾನರಿಂದ ಓದಿಕೆ ಮಾಡುವ ಪದ್ಧತಿ ಇದೆ ಹಾಗೂ ಸಾಲಿಯಾನ ಖಾಸಿಂ ಸಾಹೇಬ್ ಮತ್ತು ಮಕ್ಕಳಾದ ಸುಭಾನ ಸಾಬ್ ಅಣ್ಣ ತಮ್ಮಂದಿರು ಸೇರಿ ಖದಿರ ನಡೆಸಿಕೊಡುತ್ತಾರೆ. ಮಳೆ ಬಾರದಿದ್ದ ಸಮಯದಲ್ಲಿ ಝುಂಡಾವನ್ನು ಊರ ಒಳಗೆ ತಂದು ಭಕ್ತಿಯ ಹಾಡುಗಳಿಂದ ಪೂಜೆ ಮಾಡುತ್ತಾರೆ.

### ೪.೯. ಪಾದಗಟ್ಟೆ ದೇವಸ್ಥಾನ

ಇದು ಸುಮಾರು ೩೦೦ ವರ್ಷಗಳ ಹಳೆಯದಾಗಿದ್ದು, ಈ ದೇವಾಲಯವು ಚಿಕ್ಕದಾಗಿದೆ. ಇದರಲ್ಲಿ ಆಂಜನೇಯನ ಮೂರ್ತಿಯಿದ್ದು, ಅಲ್ಲಿ ಕೂಡ ಪ್ರತಿ ಶನಿವಾರ ವಿಶೇಷವಾದ ಪೂಜೆ, ಅಲ್ಲದೆ ವರ್ಷಕ್ಕೆ ಒಮ್ಮೆ ಅಂದರೆ ಯುಗಾದಿ ಅಮಾವಾಸ್ಯೆಯ ಶಿನೆಯ ದಿನಕ್ಕೆ ಆಂಜನೇಯನ ತೇರು ಎಳೆಯುವ ಸಮಯದಲ್ಲಿ ಈ ದೇವಾಲಯಕ್ಕೆ ಬಂದು ಹೋಗುತ್ತಾರೆ. ಮರುದಿನ ಪೂಜಾರಿ ಬಾಳೆಪ್ಪನಿಂದ ಮುಳ್ಳಿನ ಪವಾಡ ನಡೆಯುತ್ತಿದೆ. ಮಳೆ ಬಾರದಿದ್ದ ಸಮಯದಲ್ಲಿ ಊರಿನ ಜನ ಇಲ್ಲಿಗೆ ಬಂದು ವಿಶೇಷವಾದ ಪೂಜೆ ಮಾಡುತ್ತಾರೆ. ನಂತರ ಊರಿನ ಒಳಗೆ ಕರೆಯುತ್ತಾರೆ ಮತ್ತು ಪ್ರತಿವರ್ಷ ಕಾರ್ತೀಕಮಾಸದಲ್ಲಿ ದೀಪ ಹಚ್ಚುವ ಕಾರ್ಯಕ್ರಮ ನಡೆಯುತ್ತದೆ.

### ೪.೧೦. ಹಳ್ಳಿ ಹನುಮಪ್ಪ ದೇವಸ್ಥಾನ

ಹಳ್ಳಿ ಅಂಜನೇಯನ ದೇವಸ್ಥಾನವು ಸುಮಾರು ೩೦೦ ವರ್ಷಗಳ ಹಳೆಯದು. ಈ ದೇವಸ್ಥಾನದಲ್ಲಿ ದಿನ ಪೂಜೆ ನಡೆಯುತ್ತಿದ್ದು, ಪ್ರತಿ ಶನಿವಾರ ಅಲ್ಲಿನ ಸುತ್ತಮುತ್ತಲಿನ ಹೊಲದ ಜನರು ವಿಶೇಷ ಪೂಜೆ ಮಾಡುತ್ತಾರೆ. ಕಡಲಬಾಳು ಆಂಜನೇಯಸ್ವಾಮಿ ಹೊಳೆಗೆ ಹೋಗುವ ಸಮಯದಲ್ಲಿ ಕಾಯಿ-ಕರ್ಪೂರ ಮಾಡಿಸಿಕೊಂಡು ಹೋಗುತ್ತಾರೆ. ಇತ್ತೀಚಿಗೆ ಅಲ್ಲಿ ಕೂಡ ಭಕ್ತರೂ ಸೇರಿ ಪ್ರತಿವರ್ಷ ಶ್ರಾವಣ ಮಾಸದಲ್ಲಿ ಹಳ್ಳಿ ಹನುಮಪ್ಪನ ಕಾರ್ತೀಕವನ್ನು ವಿಶೇಷವಾಗಿ ದೀಪಾಲಂಕಾರದೊಂದಿಗೆ ಮಾಡುತ್ತಾರೆ.

### ೪.೧೧. ಹುಲಿಗೆಮ್ಮ ದೇವಸ್ಥಾನ

ಈ ದೇವಸ್ಥಾನವು ಕೂಡ ೩೦೦ ವರ್ಷಗಳ ಹಳೆಯದಾದ ದೇವಸ್ಥಾನವಾಗಿದೆ. ಇಲ್ಲಿ ವಾಲ್ಮೀಕಿ ಬಂಧುಗಳು ಸೇರಿ ಪೂಜೆ ಮಾಡುತ್ತಾರೆ. ಈ ದೇವಾಲಯವೂ ಕೂಡ ಇತ್ತೀಚಿಗೆ

ಜೀರ್ಣೋದ್ಧಾರಗೊಂಡಿದೆ. ಆದರೆ ಮೂರ್ತಿಯನ್ನು ಇನ್ನೂ ಪ್ರತಿಷ್ಠಾಪನೆ ಮಾಡಿಲ್ಲ. ಪಕ್ಕದಲ್ಲಿಯೇ ಇರುವ ಹಳೆಯ ದೇವರ ಮೂರ್ತಿಯನ್ನು ಪೂಜೆ ಮಾಡುತ್ತಿದ್ದಾರೆ.

### ೪.೧೨. ದುರಗಮ್ಮ ಮತ್ತು ಮರುಗಮ್ಮ ದೇವಸ್ಥಾನ

ಹರಿಜನ ಕೇರಿಯಲ್ಲಿರುವ ಪ್ರಮುಖ ಹೆಣ್ಣು ದೇವತೆಗಳು. ಇಲ್ಲಿ ಮೂರ್ತಿಗಳಿಲ್ಲ. ಆದರೆ ಕೇಲ್ ಮಾತ್ರವಿದೆ. ಆ ಕೇಲನ್ನೇ ಮರುಗಮ್ಮ ಎನ್ನುವರು. ಅಲ್ಲದೆ ದುರಗಮ್ಮ ಮೂರ್ತಿಯು ಜೊತೆಗೆ ಕೇಲನ್ನು ಒಳಗೊಂಡಿದೆ. ಈ ಜನರಿಗೆ ಪವಿತ್ರ ದೇವತೆಗಳಾಗಿವೆ. ಈ ದೇವಾಲಯದ ಪ್ರಾಚೀನತೆಯ ಬಗ್ಗೆ ಕೇಳಿದರೆ ಬಹಳ ಹಿಂದಿನದು ಸುಮಾರು ೧೫೦ ವರ್ಷವಿರಬೇಕೆನ್ನುವರು. ಇದರ ಬಗ್ಗೆ ಮಾಹಿತಿ ನೀಡಿದ್ದ ಬಸಪ್ಪ, ದುರಗಪ್ಪ, ಕಾಡಮ್ಮ ಎಂಬ ಹಿರಿಯರು ಇದು ನಮ್ಮ ತಾತಾ ಮುತ್ತಾತರ ಕಾಲದ್ದೆಂದು ಹೇಳುವರು. ಹೋಳಿ ಹುಣ್ಣಿಮೆ ಆದ ಮೇಲೆ ೯ ದಿನಗಳ ನಂತರ ಈ ದೇವತೆಯ ದೊಡ್ಡ ಹಬ್ಬವನ್ನು ಆಚರಿಸುವರು.

### ೪.೧೩. ಅವಳಿ ದುರುಗಮ್ಮ ದೇವಸ್ಥಾನ

ದುರುಗಮ್ಮ ಗುಡಿಯ ಎದುರುಗಡೆ ಇರುವ ದೇವಾಲಯವೇ ಅವಳಿ ದುರುಗಮ್ಮ. ಇದೊಂದು ಸಮಾಧಿಯಾದ ಸ್ಥಳ. ಕೆಂಚಮ್ಮ ಎಂಬ ಮಹಿಳೆ ತುಂಬ ದೈವಭಕ್ತೆ. ಅಲ್ಲದೇ ಸಣ್ಣಪುಟ್ಟ ಸಾಂಕ್ರಮಿಕ ರೋಗಗಳು ಬಂದರೆ ವಾಸಿ ಮಾಡುವ ಪವಾಡ ಪುರುಷಿಣಿಯಾಗಿದ್ದಳು. ಇವಳು ಸಹ ಒಬ್ಬ ದೇವತೆಯಿರಬೇಕೆಂದು, ಕೆಂಚಮ್ಮ ಹೋಗಿ ಅವಳಿ ದುರುಗಮ್ಮ ಆಗಿರಬೇಕೆನಿಸುತ್ತದೆ. ಆಧುನಿಕತೆಯ ರೀತಿಯಲ್ಲಿ ಇತ್ತೀಚೆಗೆ ಹೊಸ ಗುಡಿ ಕಟ್ಟಿಸಲಾಗಿದೆ. ಇಲ್ಲಿಯ ಜನ ಈ ದೇವತೆಗೆ ತುಂಬ ಭಯ-ಭಕ್ತಿಯಿಂದ ನಡೆದುಕೊಳ್ಳುವರು. ಈಗಲೂ ಜ್ವರ, ತಲೆನೋವು ಮುಂತಾದ ಸಣ್ಣಪುಟ್ಟ ಕಾಯಿಲೆಗಳು ಬಂದರೆ ಗುಡಿಗೆ ಬಂದು ಪೂಜೆ ಮಾಡಿ, ಗುಡಿಗೆ ಏಳುಸುತ್ತು ಪ್ರದಕ್ಷಿಣೆ ಹಾಕುವರು. ನಂತರ ಗುಡಿಯ ಮುಂದಿರುವ ಗ್ವಾನಮರದ ತಪ್ಪಲನ್ನು ಹರಿದು ಮೈಮೇಲೆ ಹಚ್ಚುವರು. ಅಲ್ಲದೆ ಗ್ವಾನಮರದ ತಪ್ಪಲಿನಿಂದ ಸ್ನಾನ ಮಾಡಿದರೆ ಇವರ ಜಡ್ಡು-ಜಾಪತ್ರಯಗಳೆಲ್ಲ ವಾಸಿಯಾಗುತ್ತವೆ ಎಂಬ ನಂಬಿಕೆ ಈಗಲೂ ಸಹ ಇವರಲ್ಲಿ ಮನೆಮಾಡಿ ಕೊಂಡಿದೆ.

### ೪.೧೪. ರಾಘವೇಂದ್ರ ದೇವಸ್ಥಾನ

ಈ ದೇವಾಲಯ ಕೂಡ ಸುಮಾರು ೩೦೦ ವರ್ಷಗಳ ಹಳೆಯದು. ಅಷ್ಟೇಯಲ್ಲದೆ ಕಡಲಬಾಳಿನ ರಾಘವೇಂದ್ರ ಮಠವನ್ನು ಒಂದನೆಯ ಮಂತ್ರಾಲಯವೆಂದು ಕರೆಯುತ್ತಾರೆ. ಕಡಲ ಬಾಳಿನ ಬ್ರಾಹ್ಮಣ ಬಂಧುಗಳೆಲ್ಲ ಸೇರಿ ರಾಘವೇಂದ್ರ ಮಠವನ್ನು ಜೀರ್ಣೋದ್ಧಾರ

ಮಾಡಿಸಿದ್ದಾರೆ. ಪ್ರತಿವರ್ಷ ಯುಗಾದಿ ಆದ ೩ ದಿನದ ನಂತರ ರಾಘವೇಂದ್ರರ ತೇರನ್ನು ಎಳೆಯುತ್ತಾರೆ. ಇದರ ಪೂಜೆಯನ್ನು ಪ್ರಹ್ಲಾದಾಚಾರ, ವಿಠಲಾಚಾರಿ, ಹನುಮಂತಾಚಾರಿ ಅಲ್ಲದೆ ಸುಧಾಚಾರಿ, ಪ್ರಸಾದಾಚಾರಿ, ಮೋಹನಾಚಾರಿ, ವೀಣಾಚಾರಿ ನಡೆಸುತ್ತಾ ಬಂದಿದ್ದಾರೆ. ಅಲ್ಲದೆ ಪ್ರತಿವರ್ಷ ರಾಘವೇಂದ್ರ ಜಾತ್ರೆಯಲ್ಲಿ ೫ ದಿನ ವಿಶೇಷವಾದ ಕಾರ್ಯಕ್ರಮಗಳು ಮತ್ತು ವ್ಯವಸ್ಥೆಯನ್ನು ಕೂಡ ಮಾಡುತ್ತಾರೆ.

**೪.೧೫. ಗವಿಸಿದ್ದೇಶ್ವರ ದೇವಸ್ಥಾನ**

ಈ ದೇವಾಲಯವು ಕೂಡ ೩೦೦ ವರ್ಷಗಳ ಹಳೆಯದಾದ ದೇವಾಲಯವಾಗಿದೆ. ಈ ದೇವಾಲಯವು ಮೊದಲು ಗುಡ್ಡದಜ್ಜ ಕೊಪ್ಪಳ ಇವರಿಂದ ಸ್ಥಾಪನೆಯಾಗಿದೆ. ಅಲ್ಲದೆ ಶಿವಶಾಂತವೀರಸ್ವಾಮಿಗಳು ಕೊಪ್ಪಳದಿಂದ ಬಂದು ಕಡಲಬಾಳಿನಲ್ಲಿ ಮಹಾಪೂಜೆಯನ್ನು ಮಾಡುತ್ತ ಮಠವನ್ನು ಅಭಿವೃದ್ಧಿ ಮಾಡಲಾರಂಭಿಸಿದರು. ಕೊಪ್ಪಳದ ಗಡ್ಡದಜ್ಜ ಐಕ್ಯವಾದ ನಂತರ ಪ್ರತಿವರ್ಷ ಸೀಗೆಹುಣ್ಣಿಮೆ ದಿನ ಪುಣ್ಯಾರಾಧನೆಯನ್ನು ಮಾಡುತ್ತಾ, ಧಾರ್ಮಿಕ ಕಾರ್ಯಕ್ರಮ, ಕೀರ್ತನೆಯನ್ನು ಹಾಗೂ ಗವಿಸಿದ್ದೇಶ್ವರ ಪುರಾಣವನ್ನು ಹೇಳುತ್ತ ಬಂದಿದ್ದಾರೆ. ಇತ್ತೀಚೆಗೆ ಕೊಪ್ಪಳದ ಮರಿಶಾಂತವೀರಸ್ವಾಮಿಗಳು ಕೂಡ ಕೀರ್ತನೆಯನ್ನು ನಡೆಸುತ್ತಾ ಬಂದಿದ್ದಾರೆ.

**೪.೧೬. ಕಡಲಬಾಳು ಆಂಜನೇಯ ಪವಾಡಗಳು**

'ಪವಾಡ' ಎಂಬ ಶಬ್ದವನ್ನು ಆಂಗ್ಲ ಭಾಷೆಯ ಮಿರಾಕಲ್(Miracle) ಶಬ್ದಕ್ಕೆ ಸಂವಾದಿಯಾಗಿ ಬಳಸಲಾಗುತ್ತದೆ. Miracle is genarally difined by the etymology of the world us that which causes wounder and astoinshment being extrordinary in itself and incpil by normal standard of and sign of Indicating something other than itself(Encyclopedia Britanica, Vol-16). ಪವಾಡ ಎಂದರೆ ಅಸಾಮಾನ್ಯ ಘಟನೆ ಅಥವಾ ನಿಸರ್ಗದ ಯಾವುದೇ ನಿಬಂಧನೆಗಳಿಂದ ವಿವರಿಸಲಾಗುವ ಕಾರ್ಯಕಾರಣ ಸಂಬಂಧವಲ್ಲದ ಮತ್ತು ನಿಸರ್ಗದ ನಿಯಮಗಳಿಗೆ ಮೀರಿದ ಅಲೌಖಿಕ ಶಕ್ತಿಯ ಕಾರ್ಯ ಎನ್ನುವ ಅರ್ಥವಾಗಿದೆ.

ಪವಾಡ 'ಪ್ರಮಾದ' ಎಂಬ ಸಂಸ್ಕೃತದ ವಾದ ಪದಕ್ಕೆ ಪ ಉಪಸರ್ಗ ಸೇರಿ ಶ್ರವಣ ಆಗುತ್ತದೆ. ವಾದ ಎಂದರೆ ಚರ್ಚೆ, ತರ್ಕ, ಮಾತು ಸಂಭಾಷಣೆ ಎಂಬ ಅರ್ಥ ವಿವರಣೆ ಬರುತ್ತದೆ(ಕಸಾಪ ನಿಘಂಟು, ಪು.೭೬೨). ಪವಾಡ ಎಂಬ ಪದಕ್ಕೆ ನಿರ್ದಿಷ್ಟವಾದ ಒಂದು ಮಿತಿಯೊಳಗೆ ಸೇರಿಸಲು ಕಷ್ಟಸಾಧ್ಯ. ಏಕೆಂದರೆ ಅಲೌಕಿಕತೆಯ ಅದರ ಅಂತರಾಳ. ನಿರ್ಲಿಪ್ತವಾದ

ಜೀವನದ ಗುರಿಯನ್ನು ದಾಟಿದ ಪರಕಾಷ್ಠೆಯೇ ಶಿಬಿರದೊಳಗೆ ಪೂಜಿಸುವ ದೀವಿಗೆಯಂತಹ ಅಧ್ಯಾತ್ಮಕತೆಗೆ ಪ್ರತೀಕವಾಗಿದೆ.

**ವೇದಾಂತದ ಪ್ರಕಾರ**

"ಪವಾಡಗಳು ಒಬ್ಬ ಮಹಾಪುರುಷನಿಗೆ ಧಾರ್ಮಿಕ ಮುಂದಾಳತ್ವವನ್ನು ದೊರಕಿಸಿಕೊಂಡು ಯೋಗ್ಯತಾ ಪತ್ರಗಳಂತೆ ಅಥವಾ ಪ್ರತ್ಯೇಕ ಒಂದು ದೇವರ ಶ್ರೇಷ್ಠವಾದ ಶಕ್ತಿಯ ಪ್ರದರ್ಶನಕ್ಕೆ ದುಷ್ಟಾಂತವಾಗಿ ಇಲ್ಲಿನ ಒಂದು ನಿರ್ದಿಷ್ಟವಾದ ಧರ್ಮದ ಸತ್ಯದ ಸಾಕ್ಷಿಯನ್ನಾಗಿಸುವ ಸಾಧಕಗಳಾಗಿ ಕಾರ್ಯನಿರ್ವಹಿಸುವುದು."[೨]

**ಕೀ.ರಂ.ನಾಗರಾಜ**

"ಕಲ್ಪನೆಯೇ ಉನ್ನತ ಪವಾಡ. ಅದಕ್ಕೆ ದೊಡ್ಡ ರೂಪಗಳ ಶಕ್ತಿಯಾಗಿದೆ. ಭಿನ್ನಮತ ಮತ್ತೊಂದು ಸಹಮತ ನಂಬಿಕೆ ಮತ್ತು ಅಪನಂಬಿಕೆ ಇವುಗಳ ಮಧ್ಯೆ ಪವಾಡಗಳು ಸರಪಳಿಯ ಕೊಂಡಿಯಂತೆ ಬೇರ್ಪಡಿಸಲು ಸಮಾಜ ಧಾರ್ಮಿಕ ಪಲ್ಲಟಗಳಿಗೆ ಸವಾಲೊಡ್ಡಿ ನಿಲ್ಲುತ್ತವೆ.

ದೊಡ್ಡ-ದೊಡ್ಡ ಶರಣರು ಪವಾಡಗಳನ್ನು ಬರೆದಿದ್ದಾರೆ ಮತ್ತು ಮೆರೆದಿದ್ದಾರೆ. ದೊಡ್ಡವರ ಪವಾಡಗಳನ್ನು ನೋಡಿ ದೊಡ್ಡವರಾಗ ಬಯಸುವ ಸಣ್ಣತನದ ರುದ್ರಗುರುಗಳೂ ಇಲ್ಲದಿಲ್ಲ. ದುಡಿದ ದೊಡ್ಡವನು ಮೌಢ್ಯವಾಗುವಂತಹ ದುಡಿದು ಶಕ್ತಿಯನ್ನೋ ಪಡೆದ ಶಕ್ತಿಯನ್ನೋ ಹೇಗೆ ಬೇಕೋ ಹಾಗೆ ಹಾಳು ಮಾಡುವ ಸ್ವಾರ್ಥಕ್ಕಾಗಿ ದುರುಪಯೋಗ ಪಡಿಸುವ ಸ್ವಾಮಿಗಳ ರೂಪದಲ್ಲಿರುವ ಕಾಮಿಗಳು, ಯೋಗಿಗಳ ರೂಪದಲ್ಲಿರುವ ಭೋಗಿಗಳು ಬೇಕಾದಷ್ಟು ಜನ ಕಣ್ಣಿಗೆ ಕಾಣುತ್ತಾರೆ."[೩]

ಪವಾಡಗಳು ವರ್ಣನೆಯ ಪುರಾಣಗಳಲ್ಲಿ ಹೇರಳವಾಗಿ ಬರುತ್ತವೆ. ಶ್ರೀಶಂಕರಾಚಾರ್ಯರ ಪರಕಾಯ ಪ್ರವೇಶ ಮಾಡಿದ್ದಾಗಲೀ ಶ್ರೀ ಮಧ್ವಾಚಾರ್ಯರು ಹಡಗು ಮುಳುಗುವಾಗ ತಮ್ಮ ಕಾವಿಯಶಾಲೆಯನ್ನು ಜಾಡಿನ ಹಡಗನ್ನು ನಿಲ್ಲಿಸುವರು. ರಾಮದಾಸಸ್ವಾಮಿಗಳು ಗಂಡ ಸತ್ತವಳಿಗೆ ಅಷ್ಟ ಪುತ್ರ ಸೌಭಾಗ್ಯವತಿ ಎಂದು ಆಶೀರ್ವಾದ ಮಾಡಿದ್ದಾಗಲೀ, ಜ್ಞಾನ ದೇವರು ಕೋಣದಿಂದ ವೇದಗಳನ್ನು ಅಡಗಿಸಿದ್ದಾಗಲೀ, ಏಸು ಕ್ರಿಸ್ತರನು ಸತ್ತವರನ್ನು ಬದುಕಿಸಿದ್ದಾಗಲೀ ಇದರಂತೆಯೇ ಶ್ರೀ ಮಧ್ಯಮವೀರ ಪೈಗಂಬರೇ ಮೊದಲಾದ ಮಹಾನುಭಾವರ ಚರಿತ್ರೆಗಳಲ್ಲಿ ನಾವು ಬೇಕಾದಷ್ಟು ಪವಾಡಗಳನ್ನು ಕಾಣಬಹುದು. ಕಬೀರದಾಸರು ಸತ್ತ ಮೇಲೆ ಅವರ ಹೆಣದ ಸಲುವಾಗಿ ಹಿಂದೂಗಳು, ಮುಸಲ್ಮಾನರೂ ಹೀಗೆ ಎಂದೇ ಹೇಳಬೇಕಾದರೆ ಧಾರ್ಮಿಕ ಪರಿಕಲ್ಪನೆಯಲ್ಲೂ ಮನುಷ್ಯನ ಸಾಮಾನ್ಯವಾದ ರೂಪದ ಮತ್ತು ಅಸಹಜವಾದ ಘಟನೆ,

ಕ್ರಿಯೆ ಮತ್ತು ಹೇಳಿಕೆಗಳು ಈ ದಾಖಲೆಗಳನ್ನು ಪವಾಡಗಳೆಂದು ಅರ್ಥ. ಈ ಪವಾಡಗಳು ಸಾಮಾನ್ಯವಾಗಿ ಅತೀಂದ್ರೀಯ ಶಕ್ತಿಯನ್ನು ದೈವೀಕತೆಯನ್ನು ಪರಿಪೂರ್ಣಗೊಳಿಸುವ ಪ್ರಣಾಳಿಕೆಗಳಾಗಿ ಧಾರ್ಮಿಕ ಚರಿತ್ರೆಯಲ್ಲೂ ಬಳಕೆಗೊಂಡಿವೆ. ಅಂದರೆ ತಾಂತ್ರಿಕ ವಿದ್ಯೆಗಳಿಗೆ ದೈವೀಕತೆಯ ಸ್ಥಾನವನ್ನು ದೊರಕಿಸಿಕೊಡುವ ಕೆಲಸವಾಗಿದೆ. ಯಾರು ತನ್ನ ಪ್ರಜ್ಞೆಯನ್ನು ದರ್ಶನಗಳ ಕನಸುಗಳ ಅಥವಾ ಅಭ್ಯಾಸದ ಮೂಲಕ ನಿಯಂತ್ರಣದಲ್ಲಿಟ್ಟುಕೊಂಡಿರುತ್ತಾನೆ. ಅವರು ಪವಾಡ ಪುರುಷರೆನಿಸಿಕೊಳ್ಳುತ್ತಾರೆ.

ಶಿಶುನಾಳ ಷರೀಫ್, ಸಿದ್ಧಾರೂಢರು, ಶಿರಹಟ್ಟಿ ಸಂತ ಫಕೀರೇಶ್ವರರು, ಯಡಿಯೂರು ಸಿದ್ಧಲಿಂಗ, ಸೊನ್ನಲಿಗೆ ಸಿದ್ದರಾಮ, ಮುಳುಗುಂದದ ಬಾಲಲೀಲ ಮಹಾಂತ ಶೀವಯೋಗಿಗಳು ಮುಂತಾದವರು ತಮ್ಮ ಪವಾಡಗಳನ್ನು ತೋರಿದ್ದಾರೆ. ಅಷ್ಟೇ ಅಲ್ಲದೇ ಮಧ್ಯಕಾಲೀನ ಸ್ಥಿತಿಯಲ್ಲಿ ಸೂಫಿಗಳು ಅವಧೂತರು ನೂರೊಂದು ವಿರಕ್ತರು ಅರೂಢರು ಸಿದ್ದರನ್ನು ಪುರುಷರೆಂದು ಕರೆಯಲಾಗಿದೆ.

ಪವಾಡಗಳು ಆಯಾಕಾಲ ಪ್ರದೇಶದ ಸ್ಥಿತಿಗು ಗಂಭೀರ ಪರಿಣಾಮ ಬೀರುತ್ತವೆ. ಕೆಲವರು ಪವಾಡಗಳನ್ನು ತಿರಸ್ಕರಿಸಿದರು. ಬಹುತೇಕರ ಬದುಕಿನೊಂದಿಗೆ ಹಾಸುಹೊಕ್ಕಾಗಿ ಹಿಂದಿನ ವೈಚಾರಿಕ ಜಗತ್ತಿಗೆ ಸವಾಲೊಡ್ಡುವಂತೆ ಮೈದುಳಿದು ನಿಂತಿವೆ. ಒಂದೆಡೆ ಅವಮಾನ ಮತ್ತೊಂದೆಡೆ ಅಭಿಮಾನ ಅಷ್ಟೇ ಅಲ್ಲ ಸ್ವಾಮಿ ವಿವೇಕನಾಂದ ಬಸವಾದಿ ಪ್ರಮಥರ ಧ್ಯೇಯೋದ್ದೇಶಗಳು ಕೂಡ ಈ ಹಿನ್ನೆಲೆಯಲ್ಲಿ ಸೃಷ್ಟಿಯಾಗಿರಬೇಕು. ಏಕೆಂದರೆ ನಿಮಗೆ ನೀವೆ ದಾರಿ ದೀಪಗಳು ನಿಮ್ಮನ್ನು ನೀವೇ ರೂಪಿಸಿಕೊಳ್ಳಿ ಎನ್ನುವಂತಹ ಸಂದೇಶ ಒಡ ಮೂಡಿರಬೇಕು. ಕ್ರಿಸ್ತನದು ಜನಮುಖಿಯಾದ ದೋರಣೆ ಎಂಬುದು. ಆತನು ತನ್ನ ಶಿಷ್ಯರಿಗೆ ಹೇಳಿದ ಸಂದೇಶದಿಂದ ತಿಳಿಯಬಹುದೇನೆಂದರೆ ನೀವು ಭೂಲೋಕದ ಕಟ್ಟ ಕಡೆಗೆ ಹೋಗಿ ನನ್ನ ನಾಮದಲ್ಲಿ ದೆವ್ವಗಳನ್ನು ಬಿಡಿಸಿರಿ, ರೋಗಗಳನ್ನು ವಾಸಿ ಮಾಡಿರಿ, ಬಂಧನದಲ್ಲಿರುವವರಿಗೆ ಬಿಡುಗಡೆ ಮಾಡಿರಿ, ಕುಷ್ಠರೋಗಗಳನ್ನು ಗುಣಪಡಿಸಿರಿ ಮತ್ತು ಎಲ್ಲಾ ದೇಶಗಳಿಗೆ ಹೋಗಿ ಸಾಕ್ಷಿಗಳಾಗಿರಿ(ಬೈಬಲ್ ಹೊಸ ಒಡಂಬಡಿಕೆ ಮತ್ತಾಯನು ಬರೆದ ಸುವಾರ್ತೆ ಗಮನಿಸಬಹುದು) ಎನ್ನುವ ಚಿಂತನೆಯಿಂದಲೇ ಇಂದು ಪ್ರಪಂಚದ ಮೂಲೆ ಮೂಲೆಗಳಲ್ಲಿ ಕ್ರಿಸ್ತನ ಗಾಳಿ ಬೀಸಿರುವುದನ್ನು ಕಾಣಬಹುದು. ವಿಶ್ವದ ಜನಗಣತಿಯನ್ನು ಪರಿಗಣನೆಗೆ ತೆಗೆದುಕೊಂಡರೆ ಕ್ರೈಸ್ತರು ಅತಿ ಹೆಚ್ಚು ಎಂಬುದು ಗಮನಾರ್ಹವಾಗಿದೆ.

ಪರಸ್ಪರ ಹಲವು ಧರ್ಮಗಳಲ್ಲಿನ ಪವಾಡ ಸದೃಶ್ಯವಾಗಿವೆ. ವೈರುದ್ಧ್ಯವಿದ್ದರೂ ದೃಷ್ಟಿಯಲ್ಲಿ

ಭಿನ್ನತೆ ಇದ್ದರೂ ಅವರ ಅಂತರದ ಗುರಿ ಸಾಧನೆಗೆ ಇಂಬುಗೊಡುತ್ತದೆ. ಆಚರಣೆಯಲ್ಲಿ ಅಗಾಧ ವ್ಯತ್ಯಾಸವಿದ್ದರೂ ಅವರ ಗುರಿಸಾಧನೆಗೆ ಇಂಬುಗೊಳಿಸುತ್ತವೆ. ಕಟ್ಟಕಡೆಯ ಮೂಲ ತಿರುಳು ಒಂದೇ ಆಗಿದ್ದವು. ಅದಕ್ಕಾಗಿಯೇ ದೈವಕ್ಕೆ ಸಿಗುವಷ್ಟು ಮನ್ನಣೆ ಯಾವುದಕ್ಕೂ ಅಷ್ಟೊಂದು ಆದ್ಯತೆ ಸಿಗಲಾರದು. ಮೇಲೆ ಅರ್ಥೈಸಿದಂತೆ ಪವಾಡವೆಂದರೆ ಅಸಾಮಾನ್ಯ ಆಶ್ಚರ್ಯನ್ನುಂಟು ಮಾಡುವ ಲೋಕ ವಿಲಕ್ಷಣವಾದ ಅದ್ಭುತ ಘಟನೆ ಅಥವಾ ಸಂಗತಿ. ಕಾರ್ಯ ಕಾರಣವಿಲ್ಲದೆ ನಿಸರ್ಗನಿಯಮದ ವಿರುದ್ಧ ಘಟಿಸುವ ಇಂಥ ಘಟನೆ ಅಥವಾ ಸಂಗತಿಗಳನ್ನು ಮಾನವೀಯ ಶಕ್ತಿಯಿಂದ ಎಸಗುವುದು ಅಸಾಧ್ಯ. ಈ ರೀತಿ ಮಾನವೀಯ ಶಕ್ತಿಗೆ ಅಸಾಧ್ಯವೆನಿಸಿದ ಕಾರ್ಯ ಇಲ್ಲವೇ ಸಂಗತಿಗಳನ್ನು ದೇವರ ಪ್ರೀತಿಗೆ ವಿಶೇಷವಾಗಿ ಪಾತ್ರನಾದವನು ಮಾತ್ರ ದೈವೀಶಕ್ತಿಯ ಬಲದಿಂದ ಎಸಗಬಲ್ಲ ಪವಾಡಗಳು ದೇವರ ಪ್ರತಿರೂಪವೆನಿಸಿದ ವ್ಯಕ್ತಿಯಿಂದ ಪ್ರದರ್ಶನವಾಗು ವಂತವು ಎಂದಾಯಿತು.

ವಿಶ್ವದ ಪ್ರಮುಖ ಧರ್ಮಗಳು ವಿಭಿನ್ನವಾದ ನೆಲೆಯಲ್ಲಿ ಪವಾಡಗಳನ್ನು ಅರ್ಥೈಸಿವೆ. ಯೇಸು ಕ್ರಿಸ್ತನನ್ನು ಕುರಿತ ಪವಾಡಗಳನ್ನು ಅರ್ಥೈಸಲಾಗಿದೆ. ಯೇಸು ಕ್ರಿಸ್ತನನ್ನು ಕುರಿತ ಪವಾಡಗಳು ಜನರಿಗೆ ಹತ್ತಿರವಾದ ತತ್ವವನ್ನು ಪ್ರತಿಬಿಂಬಿಸಲಾಗಿದೆ. ಬುದ್ಧನು ತದ್ವಿರುದ್ಧ ಎಂಬಂತೆ ಓ ಭಿಕ್ಕುಗಳೇ। ನೀವು ಜ್ಞಾನದ ಪ್ರತಿಭೆಯನ್ನು ಹೊಂದುವುದಕ್ಕೆ ಮೊದಲು ಅತಿಮಾನುಷ ಶಕ್ತಿಯ ಪ್ರದರ್ಶನಕ್ಕೆ ತೊಡಗಬೇಡಿ. ಯಾರು ಅದನ್ನು ಮಾಡುತ್ತಾರೆ ಅವರು ದುಷ್ಟತೆಯ ಬಗ್ಗೆ ಅಳುಕುಳ್ಳವರಾಗಿರುತ್ತಾರೆ. ಪವಾಡಗಳನ್ನು ಆಧರಿಸಿ ಜೀವನ ರೂಪಿಸಬೇಡಿ. ಎಂದಿಗೂ ಇರುವ ಸನಾತನ ನಿಯಮದ ಮೇಲೆ ನೀವು ನಿಮ್ಮ ಬಾಳನ್ನು ರೂಪಿಸಿಕೊಳ್ಳಿ ಎಂಬುದು ಆತನ ಧೋರಣೆಯಾಗಿತ್ತು. ಯಾವುದೇ ಒಂದು ಅದೃಷ್ಟನಾಗಲಿ ಕೂತುಕೊಳ್ಳುವುದು ಪ್ರಯತ್ನ ಶೀಲರಾಗಿ ಎಂಬುದು ಅಂಬೇಡ್ಕರವಾದ.

ಮಾನವನು ತನ್ನ ಬದುಕಿನುದ್ದಕ್ಕೂ ಅನುಭವಿಸುವ ಅನಿಶ್ಚಿತ ಸಂಕಷ್ಟಗಳಿಂದ ಬಿಡುಗಡೆ ಹೊಂದಲು ತನಗಿಂತ ಅಗಮ್ಯ ಶಕ್ತಿಯೊಂದಕ್ಕೆ ಮೊರೆಹೋಗುತ್ತಾನೆ. ಈ ಅಗಮ್ಯ ಶಕ್ತಿಯೇ ಧರ್ಮ. "ಪ್ರಾಚೀನರು ಧಾರಣಾತ್ ಧರ್ಮ ಇತ್ಯಾಪು" ಎಂದರು. ಅಂದರೆ ಧರ್ಮವು ಮನುಷ್ಯನನ್ನು ಧರಿಸುತ್ತದೆ ಎನ್ನುವರು. ಧರ್ಮವು ಮನುಷ್ಯನ ಜೊತೆ-ಜೊತೆಗೆ ಹುಟ್ಟಿ ಬೆಳೆದು ನಿಂತಿದ್ದು, ಅದು ಅವನ ಅಂತರಂಗದ ನಿಧಿಯಂತಿರುವುದು.

ಪ್ರಪಂಚದಲ್ಲಿ ಯಾವುದೇ ಮನುಷ್ಯನು ಧರ್ಮವನ್ನು ತ್ಯಜಿಸಿ ಬಾಳಲಾರ. ಧರ್ಮವು ಸದಾ ಲೋಕಕಲ್ಯಾಣವನ್ನೇ ಬಯಸುವಂತದ್ದು. ಮಾನವನನ್ನು ಪಾರಮಾರ್ಥಿಕ ಕಡೆಗೆ ಕೈ ಹಿಡಿದು ಮುನ್ನಡೆಸುತ್ತದೆ. ಜೀವನದ ಬಗೆಗೆ ಗೌರವ ಆದರಗಳನ್ನು ಹುಟ್ಟಿಸಿ, ಅವನ

ಹೋರಾಟಕ್ಕೆ ಸಾರ್ಥಕತೆಯನ್ನು ನೀಡುತ್ತದೆ. ಆತನ ಬದುಕಿನಲ್ಲಿ ಶ್ರದ್ಧೆಯನ್ನು ಒಡಮೂಡಿಸುವುದು. ಇಂತಹ ಧರ್ಮಮಾರ್ಗದಲ್ಲಿ ನಡೆದ ಸಾಧು ಸಂತರು, ಅಂತರ್ಮುಖಿಗಳೂ, ಚೈತನ್ಯ ಮೂರ್ತಿಗಳು ಆಗಿದ್ದು, ಗೌರವ ಆದರಗಳಿಗೆ ಒಳಪಡುವರು. ಅಂತಹ ಸಾಧು, ಸತ್ಪುರುಷರು, ಸಂತರು, ಶರಣರು, ಭಾರತದಂತೆಯೇ ಕರ್ನಾಟಕದಲ್ಲಿಯೂ ಅಸಂಖ್ಯಾತರಿದ್ದಾರೆ. ಅವರ ಬದುಕು ನಡೆ–ನುಡಿಗಳು ಮಾನವನಿಗೆ ದಾರಿದೀಪವಾಗಿದೆ."೪

ಭಾರತವು ಅನಾದಿ ಕಾಲದಿಂದಲೂ ಆಧ್ಯಾತ್ಮಿಕ ತತ್ವಗಳಿಗೆ ಪ್ರಾಮುಖ್ಯ ನೀಡಿದೆ. ಆದ್ದರಿಂದ ಅದು ಉತ್ಕೃಷ್ಟ ಸಂಸ್ಕೃತಿಯನ್ನು ಬೆಳೆಸಿಕೊಂಡು ಬಂದಿದೆ. ಧಾರ್ಮಿಕ ತೊಟ್ಟಿಲೆನಿಸಿದ ಕರ್ನಾಟಕವು ಅನೇಕ ಧರ್ಮಗಳಿಗೆ ದಾರಿ ತೋರಿದ ಆಧ್ಯಾತ್ಮಿಕ ರಂಗಭೂಮಿ ಎನಿಸಿದೆ. ಈ ರಂಗಭೂಮಿಯಲ್ಲಿ ಸಂತರು. ಸತ್ಪುರುಷರು ಶಿವಶರಣರು, ಶರಣೆಯರು ಆಗಿ ಹೋಗಿರುವರು. ಅಂಥವರಲ್ಲಿ ಭಕ್ತಿ ಭಂಡಾರಿ ಬಸವಣ್ಣ, ಶೂನ್ಯ ಸಿಂಹಾಸನಾಧಿಪತಿ ಅಲ್ಲಮ, ಮಹಾಜ್ಞಾನಿ ಚೆನ್ನಬಸವಣ್ಣ, ಅಕ್ಕಮಹಾದೇವಿ, ಪುರಂದರದಾಸ, ಕನಕದಾಸರಂತಹ ಮಹಾನ್ ದೈವಿಪುರುಷರನ್ನು ಪಡೆದ ಪುಣ್ಯಭೂಮಿ ನಮ್ಮದು. ಇವರೆಲ್ಲರೂ ಧರ್ಮಮಾರ್ಗದಲ್ಲಿ ನಡೆದು. ಸಮಸ್ತ ಕುಲಕೋಟಿಯನ್ನು ಭಕ್ತಿ ಮಾರ್ಗದಲ್ಲಿ ನಡೆಸಿದರು. ಅವರು ಮಾನವ ಕೋಟಿಗೆ ಅಧ್ಯಾತ್ಮಿಕ ಅಮೃತವನ್ನುಣ್ಣಿಸಿದರು. ಈ ಅನುಭವಿಗಳು ಪರಮಾತ್ಮನಲ್ಲಿ ಅನನ್ಯ ಪ್ರೇಮದ ಬಗ್ಗೆ ಸೇವಾಕಾರ್ಯಗಳ ಬಗ್ಗೆ ಮನುಕುಲದ ಐಕತ್ಯೆಯ ಬಗ್ಗೆ ಬೋಧಿಸಿ ಭಾರತೀಯರ ಜೀವನದಲ್ಲಿ ಸಂಜೀವಿನಿ ಶಕ್ತಿಯನ್ನು ಪ್ರವಹಿಸಿ, ಅಧ್ಯಾತ್ಮಿಕತೆಗೆ ಭದ್ರವಾದ ತಳಹದಿಯನ್ನೊದಗಿಸಿದರು. ಇಂತಹ ಮಹಾತ್ಮರ ಪಂಕ್ತಿಯಲ್ಲಿ ಸೂಫಿಸಂತರು ಸೇರುತ್ತಾರೆ. ಈ ಸೂಫಿಗಳು ಲೋಕವೇ ತನ್ನ ಮನೆ. ಮಾನವ ಕುಲವೇ ಕುಟುಂಬವೆಂದು ನುಡಿದು ತೋರಿಸಿದ ಅವರು ಸಂಸ್ಕೃತಿ ಮತ್ತು ವೇದಾಂತಗಳಿಗೆ ತಮ್ಮ ಅಮೂಲ್ಯ ಕೊಡುಗೆಯನ್ನು ಸಲ್ಲಿಸಿರುವರು. ಹೀಗೆ ಪರಿಸರ, ಸಮಾಜ ಸುಧಾರಣೆಗಳ ಜೊತೆಗೆ ಆತ್ಮಸಂಸ್ಕಾರದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡ ಅನುಭಾವಿ ಸೂಫಿಗಳು ಕೇವಲ ಯೋಗಸಾಧಕರಾಗಿರದೇ ಕವಿಗಳು ವಿದ್ವಾಂಸರು ವಿರಕ್ತರಾಗಿದ್ದರು.

ಇವೆಲ್ಲ ಲಕ್ಷಣಗಳನ್ನು ನೋಡಿದಾಗ ಒಂದು ಸರ್ವಸಮ್ಮತವಾದ ಅಭಿಪ್ರಾಯಕ್ಕೆ ಬರಬೇಕಾಗುತ್ತದೆ. ಏಕೆಂದರೆ ಕಡಲಬಾಳಿನ, ಮುಳ್ಳಪವಾಡ, ಸೂಫಿಗಳ ಲಕ್ಷಣವನ್ನು ಹಾಗೂ ಒಬ್ಬ ಸಂತನ ಲಕ್ಷಣವನ್ನು ಹೊಂದಿದ್ದರು, ಇದರಿಂದ ಮುಸ್ಲಿಂರು ಸೂಫಿ ಎಂದರು, ಹಿಂದೂಗಳು ಸಂತ ಎಂದು ಪೂಜಿಸುತ್ತಾ ಕಡಲಬಾಳದಲ್ಲಿ ಇಂದಿಗೂ ಹಿಂದೂ–ಮುಸ್ಲಿಂ ಭಾವೈಕ್ಯತೆಯಿಂದ ಉರುಸಿನಲ್ಲಿ ಪಾಲ್ಗೊಳ್ಳುತ್ತಾರೆ.

ಎಲ್ಲಾ ಧರ್ಮಗಳ ಮೂಲ ಉದ್ದೇಶ. 'ಸರ್ವೇ ಜನಾಃ ಸುಖಿ ನೋ ಭವಂತು' ಎಂಬುದಾಗಿದೆ. ಅಂದರೆ ಭೂಮಿಯ ಮೇಲೆ ಎಲ್ಲಾ ಜೀವಿಗಳ ಒಳಿತನ್ನು ಹಾರೈಸುವುದಾಗಿರುತ್ತದೆ. ಪ್ರತಿಯೊಂದು ಧರ್ಮ ಸಂಸ್ಥಾಪಕರೂ ತಮ್ಮದೇ ಆದ ತತ್ವ ಆಚರಣೆಗಳ ಮೂಲಕ ಸಮುದಾಯದ ಒಳಿತಿಗಾಗಿ ಪ್ರಯತ್ನಿಸಿರುವುದನ್ನು ಇತಿಹಾಸದುದ್ದಕ್ಕೂ ಕಾಣುತ್ತ ಬಂದಿದ್ದೇವೆ. ಭಾರತ ಅನೇಕ ಧರ್ಮಗಳಿಗೆ ಜನ್ಮವಿತ್ತ ದೇಶ. ಅಷ್ಟೇ ಅಲ್ಲ ಜಗತ್ತಿನ ಹಲವು ಧರ್ಮಗಳಿಗೂ ಅದು ಆಶ್ರಯವಿತ್ತಿದೆ.

ಪ್ರಾಚೀನ ಪರಂಪರೆಯುಳ್ಳ ಭರತ ಖಂಡವು ಕಾಲ-ಕಾಲಕ್ಕೆ ಅನೇಕ ಏರಿಳಿತಗಳನ್ನು ಕಂಡಿದ್ದರೂ ಅದು ಭವ್ಯವೂ ಸಂಪದ್ಭರಿತವೂ ಆಗಿ ರೂಪಾಂತರಗೊಂಡಿದೆ. ನಮ್ಮ ದೇಶವು ಹಲವು ಧರ್ಮಗಳ ನೆಲೆಬೀಡಾಗಿದೆ. ಇಲ್ಲಿರುವಷ್ಟು ಧರ್ಮಗಳು ಮತ್ತು ಧಾರ್ಮಿಕ ಪ್ರಪಂಚ ಬೇರ್ಯಾವ ರಾಷ್ಟ್ರದಲ್ಲಿಯೂ ಕಂಡುಬರುವುದಿಲ್ಲ. ಆದರೆ ಅನೇಕತೆಯಲ್ಲಿ ಏಕತೆಯನ್ನು ಮೈಗೂಡಿಸಿ ಕೊಂಡಿರುವುದು ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯಗಳಲ್ಲೊಂದಾಗಿದೆ. ದೇಶದ ಒಳಗಿನ ಹಾಗೂ ಹೊರಗಿನ ಸಂಸ್ಕೃತಿಗಳ ಮೂಲಾಂಶವನ್ನು ಗರ್ಭೀಕರಿಸಿಕೊಂಡು ಸಮಷ್ಠಿ ಸಂಸ್ಕೃತಿಯಾಗಿ ಹೊರ ಹೊಮ್ಮಿದ್ದರಿಂದ ಜಗತ್ತಿನ ಸಂಸ್ಕೃತಿಗಳೆಲ್ಲಾ ಇಲ್ಲಿವೆ. ಭಾರತೀಯ ಸಂಸ್ಕೃತಿಗೆ ಶ್ರೇಷ್ಠಸ್ಥಾನಮಾನವಿದೆ. ಇಷ್ಟೊಂದು ಬಗೆಯ ವೈವಿಧ್ಯಪೂರ್ಣವಾದ ಭಾರತದ ಚರಿತ್ರೆಯನ್ನು ವಸ್ತುನಿಷ್ಠವಾಗಿ ಕಟ್ಟಿಕೊಡುವ ಕಾರ್ಯಸಮರ್ಪಕವಾಗಿ ನಡೆಯಬೇಕಾದುದರ ಅವಶ್ಯಕತೆ ಕಂಡುಬರುತ್ತದೆ.

"ಭಾರತ ಪರ್ಯಾಯ ದ್ವೀಪದ ಹೃದಯಭಾಗದಲ್ಲಿರುವ ದಕ್ಷಿಣ ಭಾರತವು ಐತಿಹಾಸಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಹಾಗೂ ಕಲಾಪರಂಪರೆಯಲ್ಲಿ ಅನನ್ಯವಾದ ಸ್ಥಾನಮಾನ ಗಳನ್ನು ಉಳಿಸಿಕೊಂಡು ಬಂದಿದೆ. ಅಲ್ಲದೆ ಅದು ತನ್ನದೇ ಆದ ಪುಣ್ಯ ಧಾರ್ಮಿಕ ಕ್ಷೇತ್ರಗಳನ್ನೂ, ಅಂಶಗಳನ್ನೂ ಹೊಂದಿದೆ. ಭಾರತದ ಚೌಕಟ್ಟಿನಲ್ಲಿ ಸುಂದರವಾಗಿ ಅರಳಿರುವ ಸಂಸ್ಕೃತಿ ಕುಸುಮಗಳಲ್ಲಿ ಕರ್ನಾಟಕದ ಸ್ಥಾನ ಹಿರಿದಾದುದು ಮತ್ತು ವಿಶಿಷ್ಟವಾದುದು. ಅದು ಸರ್ವಧರ್ಮಗಳ ತೊಟ್ಟಿಲು ಎಂದು ಹೆಸರು ಪಡೆದಿದ್ದಲ್ಲದೇ ವಿಫುಲವಾದ ನೈಸರ್ಗಿಕ ಸಂಪನ್ಮೂಲಗಳನ್ನು, ಧಾರ್ಮಿಕ ಪುಣ್ಯ ತಾಣಗಳನ್ನು ಒಳಗೊಂಡಿದೆ. ಒಟ್ಟಿನಲ್ಲಿ ಕರ್ನಾಟಕ ಸಂಸ್ಕೃತಿಯ ಸಾರ-ಸರ್ವಸ್ವವನ್ನು ಸಂಗ್ರಹಿಸಿ ಹೇಳುವುದಾದರೆ ಅದು ಇಹ-ಪರಗಳಲ್ಲಿ ಭಕ್ತಿ-ಜ್ಞಾನ-ಕರ್ಮಗಳಲ್ಲಿ ವ್ಯಕ್ತಿ-ಸಮಾಜಗಳಲ್ಲಿ, ಒಳಿತು-ಕೆಡಕುಗಳಲ್ಲಿ, ಹಳತು-ಹೊಸತರಲ್ಲಿ ಒಳಗೂ ಹಾಗೂ ಹೊರಗಿನವುಗಳಲ್ಲಿ ಸಮನ್ವತೆಯನ್ನು ಸಾಧಿಸಿರುವುದೊಂದು ಅದರ ವೈಶಿಷ್ಟ್ಯವಾಗಿದೆ.

ಅಧ್ಯಾತ್ಮಿಕ ಜೀವನವೇ ಭಾರತದ ಸಹಜ ಪ್ರವೃತ್ತಿ. ಈ ದೇಶದ ಪ್ರತಿಯೊಂದು ಭಾಗದಲ್ಲಿಯೂ ಪ್ರತಿ ತಲೆಮಾರಿನಲ್ಲಿಯೂ ಅತ್ಯುತ್ತಮರಾದ ಆಧ್ಯಾತ್ಮ ಯೋಗಿಗಳು ಇದ್ದರೆಂಬುದು ಚರಿತ್ರೆಯಿಂದ ತಿಳಿದುಬರುತ್ತದೆ. ಇವರು ಜನತೆಯ ಅಜ್ಞಾನ, ಅಂಧಕಾರವನ್ನು ಕಳೆದು ಜ್ಞಾನದ ಬೆಳಕನ್ನು ಬೆಳಗಿದ ಭವರೋಗ ವೈದ್ಯರಾಗಿದ್ದಾರೆ. ಸಮಾಜದ ಎಲ್ಲಾ ವರ್ಗದವರನ್ನು ಸಮಾನವಾಗಿ ನೋಡಿ ಕಾಪಾಡಿ ಲೋಕೋಪಕಾರಕ್ಕಾಗಿ ತಮ್ಮ ಸರ್ವಸ್ವವನ್ನು ತ್ಯಾಗ ಮಾಡಿದ್ದಾರೆ, ಬದುಕಿನ ಸಂಘರ್ಷದಿಂದ ದೂರವಾಗಿದ್ದ ಇವರು ಅಧ್ಯಾತ್ಮಿಕ ಶಕ್ತಿಯನ್ನು ತಮ್ಮ ಸಾಧನೆಯ ಸಿದ್ಧಿಯಿಂದ ಪಡೆದುಕೊಂಡಿರುತ್ತಾರೆ. ಅಧಿಕಾರ, ಅಹಂಕಾರ, ಐಶ್ವರ್ಯ, ವೈಭವ, ಸಂಸಾರ, ಮೋಹ ಇವೆಲ್ಲವುಗಳನ್ನು ತ್ಯಜಿಸಿ, ವೈರಾಗ್ಯ ತಾಳಿ, ಲೌಕಿಕ ಬಂಧನದಿಂಧ ಸಂಪೂರ್ಣ ಬಿಡುಗಡೆ ಹೊಂದಿರುತ್ತಾರೆ. ಏಕಾಂಗಿಯಾಗಿ ಊರೂರು ಅಲೆದಾಡುವುದು ಇವರ ವಿಶೇಷ ಗುಣವಾಗಿರುತ್ತದೆ. ಇವರು ಬೆಟ್ಟ–ಗುಡ್ಡ ಗುಹೆಗಳಲ್ಲಿ ಯೋಗ ಸಾಧನೆ ಮಾಡಿ, ಅವ್ಯಕ್ತ ಶಕ್ತಿಯನ್ನು ಪಡೆದಿರುತ್ತಾರೆ. ಮುಂದೆ ಮೋಕ್ಷ ಕಾಣಲು ಗುರುಗಳನ್ನು ಹುಡುಕುತ್ತಾ, ಗುರು ದೊರೆತ ಮೇಲೆ ಗುರುಕೃಪೆ ಮತ್ತು ಗುರೂಪದೇಶ ಪಡೆದು ಜೀವನ್ಮುಕ್ತ ಸ್ಥಿತಿಯನ್ನು ಪಡೆದಿರುತ್ತಾರೆ. ಆಗ ಜ್ಞಾನ ಸನ್ಯಾಸಿಗಳಾಗಿ, ಸದ್ಗುರುಗಳಾಗಿ, ವಿಭೂತಿಪುರುಷರಾಗಿ, ಅನೇಕ ಅದ್ಭುತ ಅತ್ಯಾಶ್ಚರ್ಯ ಭರಿತವಾದ ಊಹಾತೀತವಾದ ಪವಾಡಗಳನ್ನು ಸಹಜವಾಗಿಯೇ ತೋರಿದ್ದಾರೆ. ಇಂಥವರನ್ನು ಜೀವನ್ಮುಕ್ತ ಪರಬ್ರಹ್ಮ, ಪರಮಹಂಸ, ಪರಮರೂಢ, ಸಂತ, ಸೂಫಿ, ಅವಧೂತರೆಂದೂ ಕರೆಯಲಾಗಿದೆ.

ಇಂತಹ ಸಂತರು ಅವಧೂತರು, ಸೂಫಿಗಳು, ಸಮುದಾಯ, ಮತ ಪಂಥಗಳೆನ್ನದೆ ಭಕ್ತಿಪೂರ್ವಕ ಗೌರವ ಮನ್ನಣೆ ಪಡೆದು ಸಮಾಜಕ್ಕೆ ಕೋಮುಸೌಹಾರ್ದತೆಯನ್ನು, ಭಾವೈಕ್ಯತೆಯನ್ನು ಸಾರಿದ್ದಾರೆ. ತಮ್ಮನ್ನು ನಂಬಿದ್ದ ಭಕ್ತರ ವೈಯಕ್ತಿಕ ಹಾಗೂ ಸಮುದಾಯಿಕ ಜೀವನದಲ್ಲಿ ಎದುರಾಗುವ ಕಷ್ಟ–ನಷ್ಟಗಳಿಗೆ ಸಮಸ್ಯೆಗಳಿಗೆ ಪರಿಹಾರ ನೀಡುತ್ತಾರೆ.

ಸೂಫಿಸಂತರು, ಆರೂಢರು, ಅವಧೂತರು, ಸಿದ್ಧರು, ತತ್ವಪದಕಾರರು ಧರ್ಮವನ್ನು ಸಮುದಾಯ, ಮತ್ತು ಲಿಂಗಾತೀತವಾಗಿ ನೋಡಿದರು. ಖಾಜಾ ಅಮೀನಾಹೀನ್, ಶಿರಹಟ್ಟಿ ಫಕಿರೇಶ, ತಿಂತಣಿ ಮೋನಪ್ಪ, ಕಡಕೋಳ ಮಡಿವಾಳಪ್ಪ, ಶಿಶುನಾಳ ಶರೀಫ್, ಶಿಲವೇರಿ ಶಿವಪ್ಪ, ಕೈವಾರ ತಾತಯ್ಯ, ಹುಬ್ಬಳ್ಳಿಯ ಸಿದ್ಧಾರೂಢರು, ನವಲುಗುಂದದ ನಾಗಲಿಂಗ, ಗಂಗರ ಮಡಿವಾಳಪ್ಪ ಮೊದಲಾದವರು ಎಲ್ಲ ಜಾತಿಯ ಮರಗಳನ್ನು ಹೊಟ್ಟೆಯಲ್ಲಿಟ್ಟುಕೊಂಡು ಒಂದು ಕಾಡು ಇದ್ದಂತೆ. ಒಟ್ಟಾರೆ ಶರಣರಿಗೂ ಸೂಫಿಗಳಿಗೂ ಅವಧೂತರಿಗೂ ಹರಿದಾಸರಿಗೂ ಸಮಾನ ಅಂಶವಿರುವುದು. ಸಾಂಸ್ಥಿಕ ಧರ್ಮಗಳನ್ನು ವಿರೋಧಿಸುವ ವಿಷಯದಲ್ಲಿ, ಇವರೆಲ್ಲಾ

ಸಮುದಾಯ, ಮತ, ಲಿಂಗಬೇಧಗಳನ್ನು ಮುಖ್ಯವಾಗಿಸದೆ ಪ್ರಾಮಾಣಿಕ ಭಕ್ತಿ ಸಾಧನೆಯನ್ನು ಮೆರೆದವರಾಗಿದ್ದಾರೆ. ಮೌಖಿಕ ಪಂಥಗಳ ಅವಧೂತರು, ಆರೂಢರು, ಸಿದ್ಧರು, ನಾಥರು ಎಂದು ಕರೆಸಿಕೊಳ್ಳುವ ಸಂತರು ಅನಾಭಾವಿಗಳು.

೧೭-೧೮ನೇ ಶತಮಾನದಲ್ಲಿ ತಮ್ಮ ಅನುಭಾವಿಕ ವ್ಯಕ್ತಿತ್ವದಿಂದಲೇ ಜನ-ಸಾಮಾನ್ಯರನ್ನು ಆಕರ್ಷಿಸಿದರು. ಸಮಾಜದಲ್ಲಿ ತುಂಬಿದ್ದ ಅರಾಜಕತೆಯನ್ನು ಕಡಿಮೆ ಮಾಡಲು ಇವರು ಪರೋಕ್ಷವಾಗಿ ಕಾರಣರಾದರು. ಹಾಗೆ ನೋಡಿದರೆ ಈ ಸಂತ ಪರಂಪರೆಯನ್ನು ವ್ಯಕ್ತಿಗತವಾಗಿ ದೇವರನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂದು ನಂಬಿದ್ದರು. ಅಂಥ ಅನುಭವಕ್ಕಾಗಿ ತನ್ಮಯತೆಯನ್ನು ಪಡೆಯಲು ಲೌಕಿಕದ ಕಟ್ಟುಪಾಡುಗಳನ್ನು ಬದಿಗೊತ್ತಿ, ತಮ್ಮ ಒಳ ದನಿಗೆ ಮಾತ್ರ ಓಗುಡುವ ಸ್ಥಿತಿಗೆ ಬದ್ಧರಾದರು. ತಾವು ಸಾಧನೆಯಿಂದ ರಕ್ಷಿಸಿಕೊಳ್ಳುವ ಅನುಭಾವಿಕ ಶಕ್ತಿಗೆ ಶರಣಾಗಿ ಅದರ ಜೊತೆ ಮೌನಸಂಧಾನವನ್ನು ನಿರಂತರವಾಗಿ ನಡೆಸಿ, ಅನುಭವದ ಆತ್ಯಂತಿಕ ಗತಿಗೆ ಯತ್ನಿಸಿದರು. ತಮ್ಮ ಸಾಧನೆಗೆ ಆರಂಭದಲ್ಲಿ, ಗುರುವಿಗೆ ನೆರವನ್ನು ಉತ್ಕಟವಾಗಿ ಬಯಸಿದರು. ವ್ಯಕ್ತಿಗತವಾಗಿ ತಮ್ಮ ಅತ್ಮೋನ್ನತಿಗಾಗಿ ಧ್ಯಾನಯೋಗದಲ್ಲಿ ನಿರತರಾಗಿ ಲೌಕಿಕದ ವ್ಯಾಮೋಹವನ್ನು ಕಳೆದುಕೊಂಡು ಯೋಗಿಗಳಾದರು. ಇಂಥ ಯೋಗಿಗಳು ಯಾವುದೇ ಧರ್ಮವನ್ನು ಪ್ರತಿಪಾದಿಸಿದವರಲ್ಲ. ಅವರು ಯಾವುದೇ ಸಮುದಾಯದಲ್ಲಿ ಹುಟ್ಟಿರಬಹುದು. ಆ ಸಮುದಾಯ ಧರ್ಮವನ್ನು ಅವರು ಪ್ರಚಾರ ಮಾಡುವ ಯಾವುದೇ ಕೆಲಸಕ್ಕೆ ಕೈ ಹಾಕಿದವರಲ್ಲ. ಅಧಿಕಾರ, ಸಂಪತ್ತು ಹಾಗೂ ಭೋಗಸುಖವನ್ನು ಖಂಡಿಸಿದವರು.

೧೭ನೇ ಶತಮಾನ ಹಲವು ಬಗೆಯ ಸಂಕೀರ್ಣಗಳ ಆಗರ. ಕನ್ನಡದ ನೆಲದಲ್ಲಿ ಹಲವು ಬಗೆಯ ಚಿಂತನೆಗಳು ನಡೆಯುತ್ತಿದ್ದ ಕಾಲ. ಸೂಫಿಗಳು, ದಾಸರು, ತತ್ವಪದಕಾರರು, ಜಾನಪದಕಾರರು, ಅವಧೂತರು, ಸಿದ್ಧರು, ಇಂಥವರೆಲ್ಲ ಒಂದೇ ಕಾಲದಲ್ಲಿ ಇದ್ದುದನ್ನು ನೆನಪಿಸಿಕೊಳ್ಳಬೇಕು. ಇದು ಆ ಕಾಲದ ಸಂದರ್ಭ. ಈ ಸಂದರ್ಭವು ಪರಸ್ಪರ ಕೊಳು ಕೊಡುಗೆಗಳ ಮೂಲಕ ತಾನು ಮೈವೆತ್ತುಕೊಳ್ಳುತ್ತಿದ್ದುದನ್ನು ಗಮನಿಸಬೇಕಾದರೆ, ಇಲ್ಲಿ ಯಾವೊಂದು ಮತದ ಗೆಲುವು ಸೋಲುಗಳಲ್ಲ, ಅವೆಲ್ಲವು ಸಾಮರಸ್ಯದ ಕೊಂಡಿಗೆ ಬೆಸೆದುಕೊಂಡ ಸಂದರ್ಭ.

೧೮-೧೯ನೇ ಶತಮಾನದ ಕಾಲವನ್ನು ಅವಲೋಕಿಸಿದರೆ. ಭಾರತದ ಸ್ವಾತಂತ್ರ್ಯ ಸಂಗ್ರಾಮದ ಕಾಲಘಟ್ಟದ ಯುದ್ಧದ ಭೀತಿ, ಬರಗಾಲ, ಕಗ್ಗತ್ತಲು, ಕಾರ್ಮೋಡ ತುಂಬಿದ ಸಂದರ್ಭ ಪರಕೀಯರ ಆಕ್ರಮಣದಿಂದ ಸಾಮಾಜಿಕ ಮತ್ತು ಧಾರ್ಮಿಕ ಜೀವನ ತತ್ತರಿಸಿತ್ತು. ಬ್ರಿಟಿಷ್ ಮಿಶನರಿಗಳು ಹಿಂದೂ ಧರ್ಮವನ್ನು ಮನಸಾರೆ ತೆಗಳಿ, ಜನರನ್ನು ಆ ಧರ್ಮದಿಂದ ವಿಮುಖರನ್ನಾಗಿ ಮಾಡಬಯಸಿದರು. ಆದರೆ ಜನರಲ್ಲಿ ಪುರಾತನ ಮತತತ್ವ, ಪರಂಪರೆಗಳಲ್ಲಿ

ಅಭಿಮಾನ ಹೆಚ್ಚುತ್ತಾ ನಡೆಯಿತು. ಮುಂದಿನ ರಾಜಕೀಯ ಆಂದೋಲನಕ್ಕೆ ನೆಲವನ್ನು ಹರಗಿ ಸಜ್ಜುಗೊಳಿಸಿತ್ತು. ಜನತೆಗೆ ಅದೊಂದು ಉಪಕೃತಿಯಾಗಿ ಪರಿಣಮಿಸಿತು. ಪೂರ್ವಭಾರವೂ, ಭಕ್ತಿ-ಶ್ರದ್ಧೆಗಳೂ ಸಡಿಲವಾದವು. ಅಭಿವ್ಯಕ್ತಿಯಲ್ಲಿ ವೈಯಕ್ತಿಕ ವಿಚಾರ ಸರಣಿ, ತಾರ್ಕಿಕ ದೃಷ್ಟಿ ಮತ್ತು ವಾಸ್ತವತೆಯ ಪ್ರಜ್ಞೆ ಇವು ಒಡಮೂಡಿದ್ದವು. ಒಟ್ಟಾರೆ ದೇಶದಲ್ಲಿ ವಿಷಮ ಪರಿಸ್ಥಿತಿ ತಲೆದೋರಿತ್ತು. ಇಂತಹ ಪರಿಸ್ಥಿತಿಯಲ್ಲಿ ನಾಡಿನಾದ್ಯಂತ ಹಲವಾರು ಶಿವಯೋಗಿಗಳು, ಆರೂಢರು ಅವಧೂತರು ಅನುಭಾವಿಗಳು ತತ್ವಪದಕಾರರು, ಅವತರಿಸಿದರು. ನಂತರ ಅವರು ಜನತೆಯ ಬದುಕಿನಲ್ಲಿ ಕವಿದ ಕತ್ತಲೆಯನ್ನು ಹೋಗಲಾಡಿಸಿದರು. ಇವರುಗಳ ಯೋಗದಲ್ಲಿ, ಆಚರಣೆಯಲ್ಲಿ ವಿವಿಧತೆ ಇರಬಹುದು. ಸಾಧಿಸಿದ ಸಿದ್ಧಿಯಲ್ಲಿ ತಾರತಮ್ಯ ಇರಬಹುದು, ಆದರೆ ಅವರೆಲ್ಲರ ಗುರಿ ಮಾತ್ರ ಒಂದೇ ಆಗಿತ್ತು. ಹಾಗಾಗಿ ಇವರೆಲ್ಲಾ ಸದಾ ಅಭಿವಂದ್ಯರಾಗಿ ಮಹಾತ್ಮರಾಗಿದ್ದಾರೆ.

ಅಧ್ಯಾತ್ಮಿಕ ಜೀವನದಲ್ಲಿ ಜೀವನ್ಮುಕ್ತಿ ಸ್ಥಿತಿ ಅತ್ಯುತ್ತಮವಾದ ಆದರ್ಶ, ಈ ಸ್ಥಿತಿ ಮುಟ್ಟಿದವರು ಲೌಕಿಕ ಸಂಘರ್ಷಗಳಿಂದ ದೂರವಾಗಿ ಆಶಾಪಾಶಗಳಿಂದ ಮುಕ್ತರಾಗುತ್ತಾರೆ. ಮನುಷ್ಯರೇ ಸೃಷ್ಟಿಸಿಕೊಂಡ ದುಃಖಗಳಿಂದ ತಾಪತ್ರಯಗಳಿಂದ ಮುಕ್ತರಾಗಿದ್ದು ಶಾಂತ ಚಿತ್ತರಾಗಿರುತ್ತಾರೆ. ಇವರುಗಳ ಮುಖ್ಯ ಸ್ವಭಾವಗಳು ನಿರಹಂಕಾರಿಗಳು, ದ್ವೇಷರಹಿತರು, ಸಮುದಾಯತೀತರು, ಅತಿವರ್ಣಶ್ರಮಿಗಳು, ನಿಷ್ಪಕ್ಷಪಾತರು, ಭಯರಹಿತರು, ವಿಶಾಲ ಹೃದಯವುಳ್ಳವರು, ಪೂರ್ಣ ಪರಿಶುದ್ಧರು. ಇವರುಗಳ ವರ್ತನೆ ಲೌಕಿಕ ನೋಟಕ್ಕೆ ವಿಚಿತ್ರವಾಗಿ ಕಂಡರೂ, ಅಂತರಂಗದಲ್ಲಿ ಪರಶಿವನನ್ನು ಸಾಕ್ಷಾತ್ಕರಿಸಿಕೊಂಡವರು. ಅಧ್ಯಾತ್ಮ, ವೇದಾಂತ ಮುಂತಾದ ವಿಷಯಗಳನ್ನು ಜನರಿಗೆ ತಮ್ಮ ನಡೆ-ನುಡಿಗಳಿಂದ ಸಮಾಜದಲ್ಲಿ ಜನಜಾಗೃತಿಯನ್ನುಂಟು ಮಾಡುವಲ್ಲಿ ಶ್ರಮಿಸಿದವರಾಗಿದ್ದಾರೆ.

ಪ್ರತಿಯೊಬ್ಬ ಮಾನವನು ಮುಕ್ತಿಗಾಗಿ, ಶಾಂತಿ-ನೆಮ್ಮದಿಗಾಗಿ ಪರಿತಪಿಸುವುದು ಸಹಜ. ಅಂತಹ ಮುಕ್ತಿ ಪಡೆಯಲು ಭಕ್ತಿಯಿಂದ ಸಾಧ್ಯವೆಂದು ಅನೇಕ ಅನುಭಾವಿಗಳು ಜಗತ್ತಿನಾದ್ಯಂತ ಸಾರಿದ್ದಾರೆ. ಸಂತರು, ಶರಣರು, ದಾಸರು, ಸೂಫಿಗಳು ಮುಂತಾದ ಅನುಭಾವಿಗಳು ಜಗತ್ತಿನಾದ್ಯಂತ ಸಾರಿದ್ದಾರೆ. ಸಂತರು, ಶರಣರು, ದಾಸರು, ಸೂಫಿಗಳು ಮುಂತಾದ ಅನುಭಾವಿಗಳು ಮುಕ್ತಿ ಮಾರ್ಗದ ಮಹತ್ವ ಪಡೆದು ನುಡಿದಂತೆ ನಡೆದು ಜೀವನ್ಮುಕ್ತಿಯ ಸ್ಥಿತಿ ಪಡೆದಿದ್ದಾರೆ. ಅಧ್ಯಾತ್ಮಿಕ ಜೀವನದಲ್ಲಿ ಜೀವನ್ಮುಕ್ತಿಯ ಸ್ಥಿತಿ ಪಡೆದಿದ್ದಾರೆ. ಅಧ್ಯಾತ್ಮಿಕ ಜೀವನದಲ್ಲಿ ಜೀವನ್ಮುಕ್ತಿಯು ಅತ್ಯುತ್ತಮವಾಗಿದ್ದು, ಇದರಲ್ಲಿ ನೆಲೆನಿಂತುಕೊಂಡು ಲೌಕಿಕ ಸಂಘರ್ಷಗಳಿಂದ ದೂರವಾಗಿ ಎಲ್ಲಾ ಆಶಾ-ಪಾಶಗಳಿಂದ ಮುಕ್ತರಾಗಿರುತ್ತಾರೆ. ಸಮುದಾಯ, ಮತ, ಧರ್ಮ ಅಂತಸ್ತುಗಳನ್ನು ಮೀರಿ ನಿರಂಹಕಾರ ಮತ್ತು ದ್ವೇಷರಹಿತರಾಗಿದ್ದಾರೆ. ತಮ್ಮನ್ನು ನಂಬಿದ ಎಲ್ಲ ವರ್ಗದ ಜನತೆಯ ಮೇಲೆ ಪ್ರೀತಿ-ದಯೆ-ತೋರುತ್ತಾ ಮಾನವೀಯತೆ ಮೆರೆದಿದ್ದಾರೆ.

ಅವಧೂತರು ಸಂತರು ಹಾಗೂ ಸೂಫಿಗಳು ಮತ್ತು ಶರಣರ ಮಾರ್ಗದಲ್ಲಿ ಗುರುವಿಗೆ ಅಗ್ರಸ್ಥಾನವಿದೆ. ಪರಮಾತ್ಮನು ಗುರುವಿನ ರೂಪದಲ್ಲಿ ಬಂದಿರುವನೆಂದು ನಂಬಿರುತ್ತಾರೆ. ಶರಣರು ಸಂಗದಲ್ಲಿ ಬೆರೆತರೆ ಅವಧೂತರು ಸಂತರು ಏಕಾಂಗಿಗಳು, ಶರಣರ ಧರ್ಮವೀರಶೈವ ಧರ್ಮವಾದರೆ ಸಂತರದೇ ಒಂದು ಮಾರ್ಗವಾಗಿ ಬೆಳೆಯಿತು.

ಚೈತ್ರ ಮಾಸದ ಯುಗಾದಿ ಪಾಂಡ್ಯದಿಂದ ಹಬ್ಬಗಳ ಆಚರಣೆಗಳು ಪ್ರಾರಂಭವಾಗುತ್ತವೆ. ಆ ದಿನ ಎಲ್ಲಾ ಸ್ತ್ರೀ, ಪುರುಷರು ಎಣ್ಣೆ ಮಜ್ಜನ ಸ್ನಾನಮಾಡಿ ಹೊಸ ಬಟ್ಟೆಗಳನ್ನು ಧರಿಸಿ, ಮನೆಯ ಎಲ್ಲಾ ಸದಸ್ಯರು ಇಷ್ಟದೇವರ ದರ್ಶನ ಮಾಡಿಕೊಂಡು, ಎಲ್ಲರೂ ಸೇರಿ ಶ್ಯಾವಿಗೆ ಪಾಯಸ, ಬೇವು ಬೆಲ್ಲ ಸವಿಯುತ್ತಾರೆ. ಪರಸ್ಪರ ಬಂಧುಮಿತ್ರರು, ಬೇವು ಬೆಲ್ಲ, ಹಂಚಿಕೊಂಡು ಕಷ್ಟಸುಖಗಳನ್ನು ಸಮನಾಗಿ ಸ್ವೀಕರಿಸೋಣ ಎಂಬ ನುಡಿಯನ್ನು ಹೇಳುತ್ತಾರೆ.

ಅದೇ ದಿನ ಸಾಯಂಕಾಲ ಶ್ರೀ ಆಂಜನೇಯ ದೇವರ ರಥದ ಕಲಶವನ್ನು ಆರೋಹಣ ಮಾಡಲಾಗುತ್ತದೆ. ಮತ್ತು ರಾತ್ರಿ ಆಂಜನೇಯ ದೇವರ ಹೊಂಡಕ್ಕೆ ನೀರು ತುಂಬಿ ಅಲಂಕರಿಸಿ ಉತ್ಸವ ಮೂರ್ತಿಯನ್ನು ಕೂಡ್ರಿಸಿ ಪರಸ್ಪರ ಓಕಳಿ ಆಡುತ್ತಾರೆ. ಐದು ದಿನ ವಿಧ ವಿಧದ ವಾಹನಗಳ ಮೇಲೆ ಕೂಡಿಸಿ ಉಪ ಉತ್ಸವಗಳು ಜರುಗುತ್ತವೆ. ಮುಂದೆ ಐದನೆ(೫) ದಿನಕ್ಕೆ ಮಾರುತಿಯ ಬ್ರಹ್ಮರಥೋತ್ಸವ ಜರುಗುತ್ತದೆ. ಮರುದಿನ ಮುಳ್ಳುಗದ್ದುಗೆ ಪವಾಡ(ದೇವರು ಹೇಳುವವರು ಮುಳ್ಳುಗದ್ದುಗೆ ಪಲ್ಲಕ್ಕಿ ಏರುತ್ತಾರೆ), ಬ್ಯಾಟಗಿಡದ ಮೆರವಣಿಗೆ ಹೀಗೆ ಬೇರೆ ಬೇರೆ ಕಾರ್ಯಕ್ರಮಗಳಿಂದ ಕೂಡಿದ ದೊಡ್ಡ ಜಾತ್ರೆ ೫–೬ ದಿನಗಳವರೆಗೆ ವಿಜೃಂಭಣೆಯಿಂದ ಜರುಗುತ್ತವೆ. ಅದೇ ದಿನ ರಾತ್ರಿ ಕೆಂಡದ ಸೇವೆ, ಅಗ್ನಿಕುಂಡ ಹಾಯುವುದು, ಗಂಗಾ ಪೂಜೆ ಇರುತ್ತದೆ.

**ಕಡ್ಲಬಾಳು ಗ್ರಾಮದ ಆಂಜನೇಯನ ಮುಳ್ಳು ಪವಾಡ**

ನಮಗೆ ಸಾಧ್ಯವಾಗದ ಯಾವುದೇ ಕೆಲಸ ಕಾರ್ಯಗಳು ಮತ್ತೊಬ್ಬರಿಂದ ನಿರ್ಭಯವಾಗಿ ಅಷ್ಟೇ ಸಹಜ ರೀತಿಯಲ್ಲಿ ನಡೆದಾಗ ಅದನ್ನು 'ಕಣ್‌ಕಟ್' ಎಂದು ಅಥವಾ ಮಾಯಮಂತ್ರವೆಂದು ಅಥವಾ ವಿಶೇಷವಾಗಿ 'ಪವಾಡ' ಎಂದು ಕರೆಯುತ್ತಾರೆ. ಈ ಪವಾಡ ಎನ್ನುವುದು ಚಿಕ್ಕದಾಗಿರ ಬಹುದು ಅಥವಾ ದೊಡ್ಡದಾಗಿರಲೂಬಹುದು. ಉದಾಹರಣೆಗೆ ವೀರಭದ್ರ ದೇವರ ಭಕ್ತರು ಆ ದೇವರ ಮುಂದೆ ಆವೇಶದಿಂದ ಒಡುಪುಗಳನ್ನು ಹೇಳುತ್ತಾ ನಾಲಿಗೆ ಮತ್ತು ತುಟಿಗಳಿಗೆ ಶಸ್ತ್ರವನ್ನು ಚುಚ್ಚಿ(ಹಾಕಿ) ಕೊಳ್ಳುತ್ತಾರೆ. ಮೈಲಾರಲಿಂಗನ ಭಕ್ತರು ಭಕ್ತಿಯ ಆವೇಶದಲ್ಲಿ, ಮೈ

ಮರೆತು ಕಾಲಿಗೆ ಮಳೆ ಹೊಡೆದುಕೊಳ್ಳುತ್ತಾರೆ. ಅಲ್ಲದೆ ಹುಲಿಗೆಮ್ಮನ ಜೋಗತಿಯರು ತಲೆಯ ಮೇಲೆ ಯಾವುದೇ ಆಧಾರವಿಲ್ಲದೆ ನೀರಿನ ಕೊಡವನ್ನಿಟ್ಟು ತದೇಕ ಚಿತ್ತದಿಂದ ಕುಣಿಯುತ್ತಾರೆ. ಹೀಗೆ ಆ ದೇವರ ಭಕ್ತಿಯಲ್ಲಿ ತಲ್ಲೀನನಾದಾಗ ಬಾಹ್ಯ ಜಗತ್ತನ್ನೇ ಸಂಪೂರ್ಣ ಮೈಮರೆತು ಅಸಾಧ್ಯವಾದುದನ್ನು ಸಾಧಿಸುವುದರ ಮೂಲಕ ಆಶ್ಚರ್ಯಕರವಾದ ಕೆಲವು ಪವಾಡಗಳು ನಡೆಯಲ್ಪಡುತ್ತವೆ.

ಯಾವುದೇ ಜನಪದ ದೈವಗಳು ಪ್ರಸಿದ್ಧಿಯನ್ನು ಪಡೆದಿರುವುದು ಅಲ್ಲಿ ನಡೆದುಕೊಂಡು ಬಂದಿರುವ ವಿಶಿಷ್ಟವಾದ ಪವಾಡಗಳಿಂದ. ಒಂದೊಂದು ದೈವಕ್ಕೂ ಒಂದೊಂದು ರೀತಿಯ ಪವಾಡಗಳನ್ನು ಜಾತ್ರೆಯ ಸಂದರ್ಭದಲ್ಲಿ ಮಾಡುವುದನ್ನು ನಾವು ಇಂದಿಗೂ ಕಾಣಬಹುದು. ಈ ಪವಾಡಗಳು ವಿಶಿಷ್ಟವಾದ ಜನಪದ ಆಚರಣೆಗಳಾಗಿವೆ. ಪವಾಡ ಮಾಡುವ ವ್ಯಕ್ತಿ ಮತ್ತು ದೈವದ ನಡುವೆ ನಿಕಟ ಸಂಬಂಧವಿರುತ್ತದೆ. ಕೆಲವು ಪವಾಡಗಳು ವಂಶಪಾರಂಪರ್ಯವಾಗಿರುತ್ತವೆ. ಕೆಲವು ಪವಾಡಗಳು ವಂಶಪಾರಂಪರ್ಯವಾಗಿರುವುದಿಲ್ಲ. ಪವಾಡ ಮಾಡುವ ವ್ಯಕ್ತಿಯನ್ನು 'ಪವಾಡ ಪುರುಷ' ಎಂದೇ ಕರೆಯುತ್ತಾರೆ. ಸಮಾಜದಲ್ಲಿ ಈತನಿಗೆ ಒಳ್ಳೆಯ ಸ್ಥಾನಮಾನ ಇರುತ್ತದೆ. ಜನರು ಈತನಲ್ಲಿ ದೈವವನ್ನು ಕಾಣುತ್ತಾರೆ. ಊರಲ್ಲಿ ಹನುಪ್ಪನ ಗುಡಿ ಇದ್ದು, ಆತನ ರಥೋತ್ಸವ ನಡೆಯುತ್ತಿದ್ದರೆ ಅಲ್ಲಿ ಪವಾಡ ಮಾಡುವ ವ್ಯಕ್ತಿಗಳು ಇರುತ್ತಾರೆ.

ಹಾಗೆಯೇ ಕಡಲುಬಾಳಿನ ಆಂಜನೇಯಸ್ವಾಮಿ ಜಾತ್ರೆಯಲ್ಲಿ ಕೆಲವು ಪವಾಡಗಳು ನಡೆಯುತ್ತವೆ. ಆಂಜನೇಯಸ್ವಾಮಿ ನಂಬಿದಂತಹ ಭಕ್ತರಿಗೆ ವರಗಳನ್ನು ಪವಾಡದ ಮೂಲಕ ಅನುಗ್ರಹಿಸುತ್ತಾನೆ ಎನ್ನುವ ನಂಬಿಕೆ ಜನರಲ್ಲಿದೆ.

ಕಡಲಬಾಳು ಗ್ರಾಮದಲ್ಲಿ ಪ್ರತಿವರ್ಷ ಆಂಜನೇಯನ ರಥೋತ್ಸವದ ಮರುದಿನ ಬೆಳಿಗ್ಗೆ ಅಗ್ನಿಕುಂಡ ಹಾಗೂ ಸಾಯಂಕಾಲ ಮುಳ್ಳಿನ ಪವಾಡಗಳು ಬಹಳ ಕಾಲದಿಂದಲೂ ನಡೆದುಕೊಂಡು ಬಂದಿವೆ. ಈ ಪವಾಡಗಳು ಆರಂಭವಾಗುವುದಕ್ಕಿಂತ ಮೊದಲು ಪವಾಡದ ಕಳಸಪ್ಪ(ದಾಸಯ್ಯ)ನು ಬೇರೆ ಬೇರೆ ಪವಾಡಗಳನ್ನು ಮಾಡಿ ಅಮರನಾಗಿದ್ದಾನೆ. ನಂತರ ಬಂದ ಬ್ಯಾಟಿ ಕಡ್ಲೆಪ್ಪನಿಂದ ಅಗ್ನಿಕುಂಡ ಪವಾಡ ಮತ್ತು ಮುಳ್ಳು ಪವಾಡ ಆರಂಭವಾಗಿ ಆತನ ಮರಣಾನಂತರ ಆತನ ಕೊನೆಯ ತಮ್ಮನಾದ ಬ್ಯಾಟಿ ಬಾಳಪ್ಪನು ಈ ಪವಾಡಗಳನ್ನು ಪ್ರತಿವರ್ಷ ಮಾಡುತ್ತಿದ್ದಾನೆ. ಈ ಪವಾಡಗಳ ಜೊತೆ ಇವರು ಬೇರೆ ಬೇರೆ ಪವಾಡಗಳನ್ನು ಸಹ ತೋರಿಸಿದ್ದಾರೆ. ಅವುಗಳನ್ನು ಪ್ರತ್ಯಕ್ಷ ಕಂಡ ಜನರು ಇದ್ದಾರೆ. ಅವರು ತೋರಿದ ಪವಾಡಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

## ೧. ಪವಾಡ ಪುರುಷ ಕಳಸಪ್ಪ(ದಾಸಯ್ಯ)

ಕಳಸಪ್ಪನ ಉದ್ಯೋಗ ನೇಕಾರಿಕೆ. ಈತ ಸಮುದಾಯದಲ್ಲಿ ಪದ್ಮಶಾಲಿ. ಈತನು ಆಂಜನೇಯನ ಪರಮಭಕ್ತನಾಗಿದ್ದನು. ದೇವಸ್ಥಾನದ ಪೂಜಾ ಸಂದರ್ಭದಲ್ಲಿ ಮತ್ತು ಇತರೆ ಸಂದರ್ಭದಲ್ಲಿ ಶಂಖ ಊದುವುದರ ಮೂಲಕ ತನ್ನ ಸೇವೆಯನ್ನು ಸಲ್ಲಿಸುತ್ತಿದ್ದನು. ದಾಸಯ್ಯ ಹೆಚ್ಚಿನ ಸಮಯವನ್ನು ಆಂಜನೇಯನ ದೇವಸ್ಥಾನದಲ್ಲಿಯೇ ಕಳೆಯುತ್ತಿದ್ದನು.

ಆಗ ಬ್ರಿಟಿಷರ ಆಳ್ವಿಕೆ ಇತ್ತು. ಆಗ ದೇವಸ್ಥಾನದ ಆವರಣದಲ್ಲಿ ಬಹಳ ಹಳೆಯ ಕಾಲದ ಹುಣಸೆ ಮರಗಳಿದ್ದವು. ಬಹಳ ಹಳೆಯ ಮರಗಳಾದ್ದರಿಂದ ಜನರಿಗೆ ತೊಂದರೆಯಾಗ ಬಹುದೆಂಬ ದೃಷ್ಟಿಯಿಂದ ಅವುಗಳನ್ನು ಕಡಿಸಲು ಬ್ರಿಟಿಷ್ ಅಧಿಕಾರಿಗಳು ಊರಿಗೆ ಬಂದರು. ಜೊತೆಗೆ ಹುಣಸೆ ಮರದಲ್ಲಿ ದೆವ್ವಗಳು ವಾಸವಾಗಿರುತ್ತವೆ ಎಂಬ ನಂಬಿಕೆ ಆಗಿನ ಕಾಲದ ಜನರಲ್ಲಿತ್ತು. ಮರಗಳನ್ನು ಕಡಿಸಲು ಬ್ರಿಟಿಷ್ ಅಧಿಕಾರಿಗಳು ಊರಿಗೆ ಬಂದಾಗ ಜನರು ಅದಕ್ಕೆ ಯಾವುದೇ ತಕರಾರನ್ನು ಮಾಡಲಿಲ್ಲ. ಮರಗಳನ್ನು ಕಡಿಯುವ ವಿಚಾರ ದೇವಸ್ಥಾನದಲ್ಲಿದ್ದ ದಾಸಯ್ಯನ ಕಿವಿಗೆ ಬಿದ್ದಿತು. ದಾಸಯ್ಯ ಮರಗಳನ್ನು ಕಡಿಯದಂತೆ ಬ್ರಿಟಿಷ್ ಅಧಿಕಾರಿಗಳಿಗೆ ಅಡ್ಡಿ ಪಡಿಸಿದನು. "ಬೇಕಾದರೆ ನನ್ನನ್ನು ಕಡಿದು ಮರಗಳನ್ನು ಕಡಿಯಿರಿ" ಎಂದು ಎಚ್ಚರಿಸಿ ಮರದ ಹತ್ತಿರ ಹೋಗಿ ಕುಳಿತುಕೊಂಡನು. ಈ ಮಾತು ದಾಸಯ್ಯನಲ್ಲಿರುವ ಪರಿಸರ ಪ್ರಜ್ಞೆಯನ್ನು ನಮಗೆ ತೋರಿಸುತ್ತದೆ. ಆದರೂ ಬ್ರಿಟಿಷ್ ಅಧಿಕಾರಿಗಳು ಈತನ ಮಾತಿಗೆ ಒಪ್ಪಲಿಲ್ಲ, ಕೊನೆಗೆ ದಾಸಯ್ಯ ಅಧಿಕಾರಿಗಳಿಗೆ ಹೇಳಿ 'ನಾಳೆಯ ದಿವಸ ನಾನು ಒಂದು ಪವಾಡವನ್ನು ಮಾಡುತ್ತೇನೆ. ಆ ಪವಾಡವು ಯಶಸ್ವಿಯಾದರೆ ನೀವು ಮರ ಕಡಿಯಬಾರದು. ಒಂದು ವೇಳೆ ಪವಾಡವು ಯಶಸ್ವಿಯಾಗದಿದ್ದರೆ ನೀವು ಮರ ಕಡಿಯಬಹುದು ಎಂದು ಕರಾರು ಹಾಕಿ ಮನೆಗೆ ಹೋದನು ಅದರಂತೆ ಬ್ರಿಟೀಷ್ ಅಧಿಕಾರಿಗಳು ಈತನ ಪವಾಡವನ್ನು ನೋಡಲು ಕಾತುರರಾದರು.

ಇತ್ತ ಮನೆಯಲ್ಲಿ ದಾಸಯ್ಯ ಪ್ರತಿ ರಾತ್ರಿ ಮಲಗುವ ಮುಂಚೆ "ಮಾರುತಿ ನೀನೇ ನನ್ನನ್ನು ಈ ಕಷ್ಟದಿಂದ ಪಾರುಮಾಡಿ ಕಾಪಾಡು ತಂದೆ" ಎಂದು ಧ್ಯಾನಿಸುತ್ತಾ ಮಲಗಿದನು. ಆಗ ಮಾರುತಿ ಕನಸಿನಲ್ಲಿ ತಾನು ನೇಯುವ ಮಗ್ಗದ ಮೇಲೆ ನಾಟ್ಯವಾಡುತ್ತಾ ನಿಂತು "ಭಕ್ತನಾದ ದಾಸಯ್ಯನೇ ಹೆದರಬೇಡ. ಕತ್ಯಾಯನಮರಡಿ ಗ್ರಾಮದ ತೋಟದಲ್ಲಿ ಕರಿಕುಂಬಳ ಕಾಯಿಯನ್ನು ಹರಿದುಕೊಂಡು ಬಂದು ಅದನ್ನು ಸಣ್ಣ ಸಣ್ಣ ತುಂಡುಗಳನ್ನಾಗಿ ಮಾಡಿ ಖಾಲಿ ಗಡಿಗೆಯಲ್ಲಿ ಹಾಕಿ ಮುಚ್ಚಿಡು. ಸ್ವಲ್ಪ ಸಮಯದ ನಂತರ ಕೊಯ್ದು ಕುಂಬಳಕಾಯಿ ತುಂಡುಗಳೆಲ್ಲಾ

ಸೇರಿ ಮೊದಲಿನ ರೀತಿ ಕುಂಬಳಕಾಯಿ ಆದರೆ ನೀನು ಪವಾಡ ಮಾಡು ಇಲ್ಲದಿದ್ದರೆ ಮಾಡಬೇಡ" ಎಂದು ಮಾರುತಿ ಎಚ್ಚರಿಕೆ ನೀಡಿ ಮಾಯವಾದನು.

ಅದರಂತೆ ಬೆಳಿಗ್ಗೆ ಎದ್ದವನೇ ದಾಸಯ್ಯ ಕತ್ಯಾಯನ ಮರಡಿ ಗ್ರಾಮಕ್ಕೆ ಹೋಗಿ ಕರಿ ಕುಂಬಳಕಾಯಿಯನ್ನು ತಂದು ಅದನ್ನು ಸಣ್ಣ ಸಣ್ಣ ತುಂಡುಗಳನ್ನಾಗಿ ಮಾಡಿ ಖಾಲಿ ಗಡಿಗೆಯಲ್ಲಿ ಹಾಕಿ ಮುಚ್ಚಿಟ್ಟನು. ಸ್ವಲ್ಪ ಸಮಯದ ನಂತರ ಗಡಿಗೆಯನ್ನು ತೆರೆದಾಗ ಕುಂಬಳಕಾಯಿ ಮೊದಲಿನ ರೀತಿ ಆಗಿತ್ತು. ದಾಸಯ್ಯ ಪವಾಡ ಮಾಡಲು ಸಿದ್ಧನಾದ, ದಾಸಯ್ಯನ ಪವಾಡ ಮಾಡುವ ಸುದ್ಧಿ ಊರಿನ ಎಲ್ಲಾ ಜನರಿಗೆ ಗೊತ್ತಾಗಿ ನೋಡಲು ಆಗಮಿಸಿದರು. ದೇವಸ್ಥಾನದ ಸಂಭಾಂಗಣದಲ್ಲಿ ಊರಿನ ಎಲ್ಲಾ ದೈವಸ್ಥರು ಸೇರಿದರು.

ಆಗ ದಾಸಯ್ಯನು ದೇವಸ್ಥಾನದಲ್ಲಿದ್ದ ಕತ್ತಿಯನ್ನು ತೆಗೆದುಕೊಂಡು ತನ್ನ ನಾಲಿಗೆಯನ್ನು ಕೊಯ್ದುಕೊಂಡನು. ಕೊಯ್ದ ನಾಲಿಗೆಯ ತುಂಡನ್ನು ದೇವಸ್ಥಾನದ ಹೊಸ್ತಿಲ ಮೇಲೆ ಇಟ್ಟು ದೇವಸ್ಥಾನದ ಗರ್ಭಗುಡಿಯನ್ನು ಪ್ರವೇಶಿಸಿ ಕದವನ್ನು ಮುಚ್ಚಿ ಬೀಗ ಹಾಕಿ ಮೂರು ದಿನಗಳ ನಂತರ ತೆಗೆಯಿರಿ ಎಂದು ಹೇಳಿದನು. ಮೂರು ದಿನಗಳ ನಂತರ ದೇವಸ್ಥಾನದ ಒಳಗಿನಿಂದ ಶಂಖವೂ ಮೊಳಗಿತು. ಆಗ ಊರಿನ ದೈವಸ್ಥರು ಕದವನ್ನು ತೆಗೆದರು. ದಾಸಯ್ಯನ ನಾಲಿಗೆ ಮೊದಲಿನಂತೆ ಆಗಿತ್ತು. ದಾಸಯ್ಯನ ಪವಾಡಕ್ಕೆ ಊರಿಗೆ ಊರೇ ಬೆರಗಾಯಿತು. ಬ್ರಿಟಿಷ ಅಧಿಕಾರಿಗಳಿಗೂ ಸಹ ಆಶ್ಚರ್ಯವಾಯಿತು.

ಈತನನ್ನು ಮೇಲಿನ ಅಧಿಕಾರಿಗೆ ತೋರಿಸಲು ಬಳ್ಳಾರಿಗೆ ಕರೆದುಕೊಂಡು ಹೋಗಿ ನಡೆದ ಸಂಗತಿಯನ್ನೆಲ್ಲಾ ನಂಬದೆ ದಾಸಯ್ಯನನ್ನು ಜೈಲಿಗೆ ತಳ್ಳಿ ಚಿತ್ರಹಿಂಸೆ ಕೊಡಲು ಆದೇಶಿಸಿದನು. ಆಗ ದಾಸಯ್ಯನು ಜೈಲಿನಲ್ಲಿ "ಬಿಡಬ್ಯಾಡ ಎನಕೈಯ ಕಡಲಪುರ ಹನುಮಂತರಾಯ" ಎಂದು ಆಂಜನೇಯನನ್ನು ಪ್ರಾರ್ಥಿಸಲು ಜೈಲಿನ ಕೋಣೆಯ ಬೀಗಗಳು ತಾವಾಗಿಯೇ ಬಿಚ್ಚಿಕೊಂಡವು. ಇದನ್ನು ಕಂಡು ಜೈಲಿನ ಅಧಿಕಾರಿಗಳಿಗೆ ಆಶ್ಚರ್ಯವಾಯಿತು. ನಂತರ ಆತನನ್ನು ನ್ಯಾಯಾಲಕ್ಕೆ ಕರೆದೊಯ್ದರು. ಅಲ್ಲಿಯೂ ಸಹ ಆತನ ಕೈಗೆ ಹಾಕಿದ ಬೇಡಿಗಳು ತಾವಾಗಿಯೇ ಬಿಚ್ಚಿಕೊಂಡವು. ತನಗೆ ಚಿತ್ರಹಿಂಸೆ ನೀಡಲು ಆದೇಶಿಸಿದ ಅಧಿಕಾರಿಯ ಕಣ್ಣು ಕುರುಡಾದವು. ಆ ಅಧಿಕಾರಿ ದಾಸಯ್ಯನ ಮಹಿಮೆ ತಿಳಿದು "ತನ್ನದು ಸರ್ವತ್ ತಪ್ಪಾಯಿತು. ನನ್ನನ್ನು ಕ್ಷಮಿಸು ತಂದೆ ಎಂದು ನ್ಯಾಯಾಲಯದಲ್ಲಿ ದಾಸಯ್ಯನ ಕಾಲಿಗೆ ಬಿದ್ದಾಗ ಕಣ್ಣು ಮೊದಲಿನಂತೆ ಆದವು. ಈ ಅಧಿಕಾರಿ ಕಡಲಬಾಳು ಹನುಮಪ್ಪನ ನೆನಪಿಗಾಗಿ ಬಳ್ಳಾರಿ ನ್ಯಾಯಲಯದ ಆವರಣದಲ್ಲಿ ಹನುಮಂತನ ಗುಡಿಯನ್ನು ಕಟ್ಟಿಸಿದನು.

ನಂತರ ಅಧಿಕಾರಿ ದಾಸಯ್ಯನನ್ನು ಬಿಡುಗಡೆಗೊಳಿಸಿ ಊರಿಗೆ ಕಳುಹಿಸುವ ವ್ಯವಸ್ಥೆ ಮಾಡಿದ. ವಾಹನದಲ್ಲಿ ದಾಸಯ್ಯನನ್ನು ಕೊರಳಿಗೆ ಹೂವಿನ ಹಾರವನ್ನು ಹಾಕಿಕೊಂಡು ಬಹಳ ಮರ್ಯದೆಯಿಂದ ಊರಿಗೆ ಕರೆದುಕೊಂಡು ಬಂದರು. ದಾಸಯ್ಯನ ಜೀವನೋಪಾಯಕ್ಕೆ ಬೇಕಾದ ದವಸಧಾನ್ಯಗಳನ್ನು ವಾಹನದಲ್ಲಿ ಹೇರಿಕೊಂಡು ಬಂದು ದಾಸಯ್ಯನ ಮನೆಯ ಕಣಜದಲ್ಲಿ ಹಾಕಿದರು(ದಾಸಯ್ಯನ ಮನೆಯಲ್ಲಿ ಈಗಲೂ ನಾವು ಕಣಜಗಳನ್ನು ಕಾಣಬಹುದು). ದಾಸಯ್ಯ ವಾಹನದಲ್ಲಿ ಪುನಃ ವಾಪಸ್ಸು ಬಂದಿರುವುದನ್ನು ನೋಡಲು ಊರಿಗೇ ಊರೇ ಸೇರಿತು. ಆಂಜನೇಯನ ದೇವಸ್ಥಾನದಲ್ಲಿ ಬ್ರಿಟಿಷ್ ಅಧಿಕಾರಿಗಳು ಜೈಲು ಮತ್ತು ನ್ಯಾಯಾಲಯದಲ್ಲಿ ನಡೆದ ಸಂಗತಿಯನ್ನು ವಿವರಿಸಿದರು.

ದಾಸಯ್ಯನ ಮತ್ತೊಂದು ಪವಾಡಕ್ಕೆ ಜನ ಮಾರು ಹೋದರು. ಬ್ರಿಟಿಷ್ ಅಧಿಕಾರಿಗಳು ದಾಸಯ್ಯನಿಗೆ ನಿನಗೆ ಏನುಬೇಕು ಕೇಳು ಎಂದಾಗ ದಾಸಯ್ಯ "ನನಗೆ ಏನು ಬೇಡ ಐದು ಸಿವುಡುಮೇವು, ಒಂದು ನಿಧಿ(ರೈತರು ಬೆಳೆಯುವ ಬೆಳೆಯಲ್ಲಿ ಐದು ಸಿವುಡು ಮೇವು ಮತ್ತು ಕಾಳಿನರಾಶಿಯ ಒಂದು ನಿಧಿ), ತನ್ನ ಮರಣಾನಂತರ ಸಮಾಧಿಗಾಗಿ ಒಂದಿಷ್ಟು ಜಾಗ ಕೊಡುವಂತೆ ಮಾಡಿದರೆ ಸಾಕು" ಎಂದನು. ಆಗ ಬ್ರಿಟಿಷ್ ಅಧಿಕಾರಿ ದಾಸಯ್ಯನಿಗೆ ಐದು ಸಿವುಡು ಮೇವು, ಒಂದು ನಿಧಿಯನ್ನು ಕೊಡಲು ಗ್ರಾಮಸ್ಥರಿಗೆ ಆಜ್ಞೆ ಮಾಡಿ ಹೋದರು.

ಒಮ್ಮೆ ಊರಿನಲ್ಲಿ ಮಳೆ ಹೋಗಿ ಬರಗಾಲ ಉಂಟಾಗಿ ಜನರಿಗೆ ಬಹಳ ತೊಂದರೆ ಯಾಗಿತ್ತು. ಎಷ್ಟು ದಿನಗಳಾದರೂ ಮಳೆಯೇ ಆಗಲಿಲ್ಲ. ಆಗ ದಾಸಯ್ಯನು ನೀರು ಬಿಟ್ಟು ಕಡಲಬಾಳಿಗೆ ೧೦ ಕಿ.ಮೀ.ದೂರದಲ್ಲಿರುವ ತಿಮ್ಮಪ್ಪನ ಗುಡ್ಡದ ಮೇಲಿರುವ ಕೋತಿಕಲ್ಲು, ಗುಡ್ಡದ ಮೇಲೆ ೨೧ ದಿವಸ ತಪಸ್ಸು ಮಾಡಿದನು. ಆಗ ಮಳೆಯಾಯಿತು. ಇಡೀ ಊರಿಗೆ ಊರೇ ಹೋಗಿ ವಾದ್ಯಗಳ ಸಮೇತ ದಾಸಯ್ಯನನ್ನು ಮೆರವಣಿಗೆ ಮಾಡುತ್ತಾ ಕರೆದುಕೊಂಡು ಬಂದರು.

ಅಂದಿನಿಂದ ಈತನಿಗೆ 'ಪವಾಡದ ದಾಸಯ್ಯ'ನೆಂಬ ಹೆಸರು ಬಂದಿತು. ದಾಸಯ್ಯನಿಗೆ ಊರಿನಲ್ಲಿ ಗೌರವ ಹೆಚ್ಚಾಯಿತು. ದಾಸಯ್ಯ ಹೇಳಿದ್ದೇ ವೇದವಾಕ್ಯವಾಯಿತು. ಹೀಗೆ ದಾಸಯ್ಯನ ಪವಾಡಗಳು ಸುತ್ತಮುತ್ತಲಿನ ಗ್ರಾಮದಲ್ಲಿ ಹಬ್ಬಿದವು. ಕಡಲಬಾಳು ಹನುಮಪ್ಪನ ಮಹಿಮೆಯನ್ನು ಜನರು ಕೊಂಡಾಡುತ್ತಿದ್ದರು. ಭಕ್ತ ಸಮೂಹವೇ ಸ್ವಾಮಿಯ ದರ್ಶನಕ್ಕೆ ಬರುತ್ತಿತ್ತು. ದಾಸಯ್ಯ ಸಾಯುವ ಮುನ್ನ ಮುಂದೆ ತಮ್ಮ ವಂಶದಲ್ಲಿ ಆರು ಬೆರಳಿನ ಮಗು ಜನಿಸಿದಾಗ ಡೊಕ್ಕಿ ಪವಾಡ ಮಾಡುತ್ತದೆ ಎಂದು ತಿಳಿಸಿದ್ದಾನೆಂದು ಆತನ ವಂಶಜರು ಈಗಲೂ ಹೇಳುತ್ತಾರೆ.

ಈಗಲೂ ದಾಸಯ್ಯನ ಮನೆತನದವರು ಊರಲ್ಲಿಯೇ ಇದ್ದಾರೆ. ಅವರಿಗೆ 'ಪವಾಡದವರು' ಎಂದು ಕರೆಯುತ್ತಾರೆ. ಈಗಲೂ ಅವರು ದಾಸಯ್ಯ ಮಾಡುವ ಕಾಯಕ(ಶಂಖ ಊದುವುದು) ಮಾಡುತ್ತಿದ್ದಾರೆ. ದೇವರ ಪ್ರತಿಯೊಂದು ಕಾರ್ಯದಲ್ಲಿ ಅವರು ಭಾಗಿಯಾಗಿರುತ್ತಾರೆ. ಊರಿನ ಜನರು ರಾಶಿ ಮಾಡುವಾಗ ಒಂದು ನಿಧಿಯಲ್ಲಿ ಅವರಿಗೆ ಹಾಕುತ್ತಾರೆ. ಹಿಂದೆ ಬೆಳೆದ ಮೇವನ್ನು ಸಹ ಕೊಡುತ್ತಿದ್ದರು. ದಾಸಯ್ಯನ ಸಮಾಧಿಯನ್ನು ಊರಿನ ದಕ್ಷಿಣ ದಿಕ್ಕಿನ ಮಸೀದಿ ಹತ್ತಿರದಲ್ಲಿ ನಾವು ಇಂದಿಗೂ ಕಾಣಬಹುದು.

**೨. ಪವಾಡ ಪುರುಷ ಕಡ್ಲೆಪ್ಪ:**

ಕಳಸಪ್ಪ(ದಾಸಯ್ಯ)ನ ಮರಣಾನಂತರ ಕೆಲವು ವರ್ಷಗಳ ಕಾಲ ಊರಿನಲ್ಲಿ ಯಾವುದೇ ಆಂಜನೇಯನ ಪವಾಡಗಳು ಜರುಗಲಿಲ್ಲ. ಕ್ರಿ.ಶ.೧೯೩೨ರಲ್ಲಿ ಬ್ಯಾಟಿ ಕಡ್ಲೆಪ್ಪನಿಂದ ಮೊಟ್ಟಮೊದಲ ಬಾರಿಗೆ ಆಂಜನೇಯನ ರಥೋತ್ಸವದ ಮರುದಿನ ಬೆಳಿಗ್ಗೆ ಅಗ್ನಿಕುಂಡ, ಸಾಯಂಕಾಲ ಮುಳ್ಳುಪವಾಡ ಪ್ರಾರಂಭವಾದವು. ಆದರೆ ರಥೋತ್ಸವದ ಮರುದಿನ ಬೆಳಿಗ್ಗೆ ಅಗ್ನಿಕುಂಡ, ಬ್ಯಾಟಿಗಿಡದ ಆಚರಣೆ ಮೊದಲಿನಿಂದಲೂ ನಡೆದುಕೊಂಡು ಬಂದಿವೆ. ಇದನ್ನು ನಾಯಕರ ಒಂದು ಪ್ರಮುಖ ಮನೆತನದವರು ಮಾಡುವುದರಿಂದ ಅವರಿಗೆ 'ಬ್ಯಾಟೇರು' ಮನೆತನದವರು ಎಂದು ಕರೆಯುತ್ತಾರೆ. ಕಡ್ಲೆಪ್ಪ ಸಹ ಈ ಬ್ಯಾಟೇರು ಮನೆತನದಲ್ಲಿ ಜನಿಸಿದ್ದಾನೆ. ಈತನು ಮೊದಲಿನಿಂದಲೂ ಆಂಜನೇಯನ ಪರಮಭಕ್ತನಾಗಿದ್ದನು. ಸ್ವಾಮಿಯ ವಿವಿಧ ಸೇವೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದ. ವೃತ್ತಿಯಿಂದ ಕೃಷಿಕನಾಗಿದ್ದನು. ಈತ ಪಿಂಜಾರು ಹೆಗ್ಡಾಳು ಗ್ರಾಮದಲ್ಲಿ ಮದುವೆಯಾಗಿದ್ದನು. ಈತನಿಗೆ ಆಂಜನೇಯ ಒಲಿಯಲು ಮತ್ತು ಈತನಿಗೆ ಪವಾಡ ಮಾಡಲು ಪ್ರೇರಣೆಯಾದದ್ದು, ಪವಾಡ ಮಾಡಿದ ಬಗೆಯನ್ನು ಆ ಸಮಯದಲ್ಲಿ ಈತನ ಒಡನಾಡಿಯಾದ ಮಾಹಿತಿಯನ್ನು ನೀಡಿದ್ದಾರೆ.

**ಆಂಜನೇಯ ಒಲಿದದ್ದು:** ಕಡ್ಲೆಪ್ಪ ಮದುವೆಯಾದ ನಂತರ ಹೆಗ್ಡಾಳ ಗ್ರಾಮದಲ್ಲಿಯೇ ಹೆಚ್ಚಾಗಿ ವಾಸವಾಗಿರುತ್ತಿದ್ದ. ಈತನಿಗೆ ಪ್ರಾರಂಭದಲ್ಲಿ ಮಾರುತಿ ಮೈಮೇಲೆ ಆವೇಶವಾಗಿ ಬಂದಾಗ ಈತನ ವರ್ತನೆಯನ್ನು ಮನೆಯಲ್ಲಿ ಸಹೋದರರು ನಂಬಲಿಲ್ಲ. ಕೆಲಸ ಮಾಡಲಾಗದೆ ಸುಳ್ಳು ನಾಟಕ ಆಡುತ್ತಾನೆ ಅಂದರು. ಆತನಿಗೆ ಮಾನಸಿಕವಾಗಿ ಹಿಂಸೆ ನೀಡಿದರು. ಊಟವನ್ನು ಸಹ ಕೊಡಲಿಲ್ಲ. ಕೆಲವು ದಿನಗಳ ಕಾಲ ಈತನು ಅಡವಿಯಲ್ಲಿ ಬೇವಿನಸೊಪ್ಪು, ಕರ್ಕಿಸೊಪ್ಪು(ಅಂಜನೇಯ ಪತ್ರಿ) ತಿಂದು ಕಾಲಕಳೆದನು. ನಂತರ ಮನೆಯವರು ಈತನನ್ನು ಮನೆಯಲ್ಲಿ ಕೂಡಿಹಾಕಿ ಬೀಗ ಹಾಕಿದರು. ಆದರೆ ಹಾಕಿದ ಬೀಗ ಹಾಗೆಯಿತ್ತು. ಕಡ್ಲೆಪ್ಪ ಹೊರಗಡೆ ಬಂದಿದ್ದ. ಆಗ ಮನೆಯವರು ಈತನ ಮೈಯಲ್ಲಿ ಮಾರುತಿ ಆವೇಶವಾಗಿರುವುದು ನಿಜವೆಂದು ನಂಬಿದರು.

ಕಡ್ಡೆಪ್ಪ ಒಮ್ಮೆ ಕೃಷ್ಣಾಪುರ ಗ್ರಾಮಕ್ಕೆ ಹೋದಾಗ ಅಲ್ಲಿ ಮೈಮೇಲೆ ಮಾರುತಿ ಅವೇಶವಾಗಿ ಬಂದು ಅಲ್ಲಿಂದಲೇ ಓಡೋಡಿ ಕೇಕೆ ಹಾಕುತ್ತಾ ಕಡಲಬಾಳು ಆಂಜನೇಯನ ದೇವಸ್ಥಾನಕ್ಕೆ ಬಂದನು. ಆಗ ಊರಿನ ದೈವಸ್ಥರೆಲ್ಲಾ ಸೇರಿ ಈತನನ್ನು ವಿಚಾರಿಸಿದಾಗ ತಾನು ಇನ್ನು ಮುಂದೆ ಪ್ರತಿವರ್ಷ ಆಂಜನೇಯನ ರಥೋತ್ಸವದ ಮರುದಿನ ಅಗ್ನಿ ಪವಾಡ ಮತ್ತು ಮುಳ್ಳುಪವಾಡ ಮಾಡುವುದಾಗಿ ಹೇಳಿದನು. ಅದೇ ವರ್ಷ ೧೯೩೭ರಿಂದ ರಥೋತ್ಸವದ ಮರುದಿನ ಬೆಳಿಗ್ಗೆ ಅಗ್ನಿಪವಾಡ ಸಾಯಂಕಾಲ ಮುಳ್ಳುಪವಾಡ ಆರಂಭವಾದವು.

ಮುಳ್ಳುಪವಾಡ ಮಾಡುವುದಕ್ಕಿಂತ ಮುಂಚಿತವಾಗಿ ಆಂಜನೇಯನ ದೇವಸ್ಥಾನದಲ್ಲಿ ಈತ ಕೆಂಪು ಬಣ್ಣದ ಚಡ್ಡಿಯನ್ನು ಧರಿಸಿ ವಾದ್ಯಗಳ ಜೊತೆಗೆ ದೇವಸ್ಥಾನದ ಹೊರಗಡೆ ಓಡೋಡಿ ಬಂದು ದೇವಸ್ಥಾನದ ಮುಂದಿನ ಈಗಿನ ಮಹಾದ್ವಾರದ ಪಕ್ಕದ ಕಟ್ಟೆಯ ಮೇಲಿನಿಂದ(ಸುಮಾರು ೪ ಅಡಿ ಎತ್ತರ ಇದೆ) ಸುಲಭವಾಗಿ ಹಾರುತ್ತಿದ್ದ. ವಾದ್ಯಗಳ ಜೊತೆ ಕುಣಿಯುವಾಗ ಈತನನ್ನು ಯಾರು ಹಿಡಿದುಕೊಳ್ಳುವಂತಿರಲಿಲ್ಲ. ಯಾರ ಸಹಾಯವು ಈತನಿಗೆ ಬೇಕಾಗಿರಲಿಲ್ಲ. ಒಬ್ಬಾತನೇ ಅನಾಯಸವಾಗಿ ಕುಣಿಯುತ್ತಿದ್ದ. ಊರಿನ ಎಲ್ಲ ದೇವಸ್ಥಾನಗಳ ದೇವರ ದರ್ಶನ ತೆಗೆದುಕೊಳ್ಳಲು ಈತ ಓಡಿ ಹೋಗುವಾಗ ಈತನ ಹಿಂದೆ ಜನರಿಗೆ ಓಡಲು ಆಗುತ್ತಿರಲಿಲ್ಲ. ಜನರಿಗೆ ಓಡಿ ಹೋಗುವುದೇ ಕಷ್ಟವಾಗುತ್ತಿತ್ತು.

ಸುಮಾರು ಎರಡು ತಾಸು ವಾದ್ಯಗಳ ಜೊತೆ ಕುಣಿದರೂ ದಣಿವು ಆಗುತ್ತಿರಲಿಲ್ಲ. ಆ ಸಂದರ್ಭದಲ್ಲಿ ನೀರನ್ನು ಸಹ ಕುಡಿಯುತ್ತಿರಲಿಲ್ಲ. ಈತನಿಗೆ ಮಾರುತಿ ಆವೇಶವಾಗಿ ಕುಣಿಯುವುದನ್ನು ನೋಡಲು ಸಾವಿರಾರು ಜನ ಸೇರುತ್ತಿತ್ತು. ಇಳಿವಯಸ್ಸಿನಲ್ಲಿ ಆರೋಗ್ಯ ಸರಿ ಇಲ್ಲದಿದ್ದರೂ ಈತ ಪವಾಡ ಮಾಡುವುದನ್ನು ನಿಲ್ಲಿಸಿರಲಿಲ್ಲ. ಆತನ ಮೈಮೇಲೆ ಮಾರುತಿ ಆವೇಶವಾಗಿ ಆತ ನುಡಿದಂತೆ ಆಗುತ್ತಿದೆ, ಹೇಳಿದ್ದೆಲ್ಲಾ ನಿಜವಾಗಿದೆ. ಯುಗಾದಿಯ ದಿನದಿಂದ ಆತ ಮುಳ್ಳು ಪವಾಡ ಮುಗಿಯುವವರೆಗೂ ಐದು ದಿನ ನೀರನ್ನು ಬಿಟ್ಟು ಏನನ್ನು ಸೇವಿಸುತ್ತಿರಲಿಲ್ಲ. ಈತ ಸುಮಾರು ೩೫ ವರ್ಷಗಳ ಕಾಲ ಪವಾಡ ಮಾಡಿದ್ದಾನೆ.

೧೯೭೦ರಲ್ಲಿ ಈತನ ಮರಣಾನಂತರ ಆತನ ಕೊನೆಯ ತಮ್ಮನಾದ ಬ್ಯಾಟೆ ಬಾಳಪ್ಪನಲ್ಲಿ ಮಾರುತಿ ಆವೇಶವಾಗಿ ಬಂದು ಅಂದಿನಿಂದ ಆ ಪವಾಡಗಳನ್ನು ಈತ ಮಾಡುತ್ತಿದ್ದಾನೆ.

**ಕಡ್ಲೆಪ್ಪನ ಪವಾಡಗಳು**

ಆಂಜನೇಯನ ರಥೋತ್ಸವದ ಮರುದಿನ ಅಂದರೆ ಬ್ಯಾಟೆ ಗಿಡದ ದಿನ ಮುಳ್ಳು ಪವಾಡ ಮಾಡುವುದಕ್ಕಿಂತ ಮುಂಚಿತವಾಗಿ ಡೊಳ್ಳು, ಸನಾಯಿ, ಸಮಾಳ, ನಂದಿಕೋಲು ಮುಂತಾದ ವಾದ್ಯಗಳೊಂದಿಗೆ ಆಂಜನೇಯನ ಕೆಂಪುಬಣ್ಣದ ಚಡ್ಡಿ ಧರಿಸಿ ಕೈಯಲ್ಲಿ ಬಾಣವನ್ನು

ಹಿಡಿದುಕೊಂಡು ಕುಣಿಯುತ್ತಾ ಊರಿನ ಎಲ್ಲಾ ದೇವಸ್ಥಾನಗಳಿಗೆ ಹೋಗಿ ದರ್ಶನ ಪಡೆದು ಪಾದಗಟ್ಟಿ ಹತ್ತಿರವಿರುವ ಬೇವಿನ ಕಟ್ಟೆಯ ಮೇಲೆ ಮುಳ್ಳಿನ ಪಲ್ಲಕ್ಕಿಯಲ್ಲಿ ಮಲಗುವುದು ವಾಡಿಕೆ.

ಆದರೆ ಒಮ್ಮೆ ಕಡ್ಲೆಪ್ಪನು ಕಲ್ಲೇಶ್ವರ ದೇವಸ್ಥಾನದಲ್ಲಿ ಮುಳ್ಳುಪವಾಡದ ದಿನ ವಾದ್ಯಗಳ ಜೊತೆ ಕುಣಿಯುತ್ತಾ ದೇವರ ದರ್ಶನ ತೆಗೆದುಕೊಳ್ಳಲು ಓಡೋಡಿ ಹೋದನು. ಆದರೆ ದೇವಸ್ಥಾನದ ಬಾಗಿಲಿಗೆ ದೊಡ್ಡ ಬೀಗ ಹಾಕಲಾಗಿತ್ತು. ಆಗ ಈತ ಮಂಡಿಯೂರಿ ನೆಲಕ್ಕೆ ಕುಳಿತು ತನ್ನ ಕೈಯಿಂದ ಬೀಗದ ಮೇಲೆ ಕೈ ಇಡಲು ಬೀಗ ಬಿಚ್ಚಿ ದೇವಸ್ಥಾನದ ಕದಗಳು ತಾವಾಗಿಯೇ ತೆರೆದವು. ನಂತರ ಕಲ್ಲೇಶ್ವರನ ದರ್ಶನವನ್ನು ಪಡೆದುಕೊಂಡನು.

ಕಡ್ಲೆಪ್ಪ ಮದುವೆಯಾದದ್ದು ಪಿಂಜಾರ್ ಹೆಗ್ಡಾಳ್ ಗ್ರಾಮದಲ್ಲಿ. ಆತ ಪ್ರತಿ ಶನಿವಾರ ಆಂಜನೇಯನ ಪಲ್ಲಕ್ಕಿ ಉತ್ಸವದಲ್ಲಿ ಸೇವೆ ಸಲ್ಲಿಸುತ್ತಿದ್ದ. ಕೆಲವೊಂದು ಸಾರಿ ಶನಿವಾರ ಹೆಂಡತಿಯ ಊರಿನಲ್ಲಿದ್ದರು ತಪ್ಪದೇ ಪಲ್ಲಕ್ಕಿ ಉತ್ಸವದಲ್ಲಿ ಹಾಜರಾಗುತ್ತಿದ್ದ. ಇದನ್ನು ನೋಡಿದ ಅವರು ಆತನನ್ನು ಮನೆಯ ಕೋಣೆಯಲ್ಲಿ ಕೂಡಿ ಬೀಗ ಹಾಕಿದರು. ಆದರೆ ಆತ ಶನಿವಾರ ದಿನ ಕಡಲುಬಾಳಿನ ಆಂಜನೇಯನ ದೇವಸ್ಥಾನದಲ್ಲಿರುತ್ತಿದ್ದ. ಮನೆಯ ಕೋಣೆಗೆ ಹಾಕಿದ ಬೀಗ ಹಾಗೆಯೇ ಇತ್ತು.

ಕಡ್ಲೆಪ್ಪ ಬಸವಂತ–ಬಲವಂತ ಬಯಲಾಟದಲ್ಲಿ ಒಮ್ಮೆ ಹೆಣ್ಣು ಪಾತ್ರ ಮಾಡಿದ್ದ. ಈತನಿಗೆ ಆ ಸಮಯದಲ್ಲಿ ಮಾರುತಿ ಆವೇಶವಾಗಿ ಬಂದು ಅದೇ ವೇಷದಲ್ಲಿಯೇ ಹೆಗ್ಡಾಳ ಹತ್ತಿರದ ದಬಕಲಬಂಡಿ ಹನುಪ್ಪನ ಗುಡಿಯ ಹತ್ತಿರ ಓಡಿ ಹೋಗಿ ನಂತರ ಕಡಲಬಾಳಿನ ರಾಮದೇವರ ಗುಡ್ಡಕ್ಕೆ ಬಂದು ಅಲ್ಲಿಂದ ಹಗರಿಕ್ಯಾದಿಗಹಳ್ಳಿ, ಕರೀಕಟ್ಟಿ ಹನುಪ್ಪನಿಗೆ ಹೋಗಿ ನಂತರ ಕಡಲಬಾಳಿನ ಹಳ್ಳಿಹನುಮಪ್ಪನ ಗುಡಿಗೆ ಬಂದು, ಕಡಲಬಾಳಿನ ಪಾದಗಟ್ಟಿ ಹನುಮಪ್ಪನ ದರ್ಶನ ತೆಗೆದುಕೊಂಡು ಕೊನೆಗೆ ಊರ ಆಂಜನೇಯನ ದೇವಸ್ಥಾನಕ್ಕೆ ಬಂದಿದ್ದಾನೆ. ಜನರ ಕೈಗೆ ಆತ ಸಿಕ್ಕಿರಲಿಲ್ಲ. ಅಷ್ಟು ದೂರ ಓಡಿ ಬಂದರೂ ಆತನ ಮೈಮೇಲೆ ಹಾಕಿಕೊಂಡಿದ್ದ ಬಂಗಾರದ ಆಭರಣಗಳು ಒಂದೂ ಬಿಚ್ಚಿರಲಿಲ್ಲ. ತೊಟ್ಟಿದ್ದ ಸೀರೆ ಸ್ವಲ್ಪವೂ ಜಾರದೆ ಹಾಗೆಯೇ ಇತ್ತು.

ಪ್ರತಿವರ್ಷ ಶ್ರಾವಣಮಾಸದಲ್ಲಿ ಆಂಜನೇಯನ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಹಂಪಸಾಗರ ಹೊಳೆ ಸ್ನಾನಕ್ಕೆ ಕರೆದುಕೊಂಡು ಹೋಗುತ್ತಾರೆ. ಈ ಸಂದರ್ಭದಲ್ಲಿ ಆ ಊರಿನ 'ಸರೂರ' ಮತ್ತು ಮತ್ತೂರ ಮನೆತನದವರು ಅಗಸಿ ಬಾಗಿಲ ಕದಗಳಿಗೆ ಬೀಗ ಹಾಕಿಸಿದ್ದರು. ಪ್ರತಿವರ್ಷ ಉತ್ಸವಮೂರ್ತಿಯ ಪಲ್ಲಕ್ಕಿ ಅಲ್ಲಿಯೇ ಹೋಗುತ್ತಿತ್ತು. ಪಲ್ಲಕ್ಕಿಯ ಹಿಂದೆ ಪವಾಡಗಳನ್ನು

ಮಾಡುವ ಕಡ್ಲೆಪ್ಪನು ಕತ್ತರಿಬಾಣ ಹಿಡಿದು ನಿಂತಿದ್ದನು. ಆಗ ಆತನಿಗೆ ಮಾರುತಿ ಆವೇಶವಾಗಿ ಬಂದು ಬೀಗಗಳು ತಾವಾಗಿಯೇ ಬಿಚ್ಚಿ ಕದಗಳು ತೆರೆದವು. ಆಗ ಪಲ್ಲಕ್ಕಿಯೊಂದಿಗೆ ಎಲ್ಲರೂ ಪ್ರವೇಶಿಸಿದರು. ನಂತರ ಅವರ ಮನೆತನವೇ ನಾಶವಾಗಿ ಹೋಯಿತು.

**ಶಿರಸ್ಸು ಪವಾಡ ಮಾಡಲು ಮುಂದಾದದ್ದು:** ಕ್ರಿ.ಶ.೧೯೩೬ರಲ್ಲಿ ಕಡ್ಲೆಪ್ಪನಿಗೆ ಮೈಯಲ್ಲಿ ಮಾರುತಿ ಆವೇಶವಾಗಿ ಬಂದು ತಾನು ಶಿರಸ್ಸು ಪವಾಡ ಮಾಡುವುದಾಗಿ ಹೇಳಿದ. ಅಂದರೆ ತಾನು ಶಿರಸ್ಸನ್ನು ಕತ್ತಿಯಿಂದ ಕತ್ತರಿಸಿಕೊಂಡು ಮತ್ತೆ ಕೂಡಿಸುವುದು. ತನ್ನ ಜೀವಕ್ಕೆ ಏನಾದರೂ ಮಾಡಿಕೊಂಡಾನು ಎಂದು ಊರಿನ ದೈವಸ್ಥರಿಗೆ ಭಯವಾಯಿತು. ಶಿರಸ್ಸು ಪವಾಡ ಯಶಸ್ವಿಯಾಗುವುದಕ್ಕೆ ಮೊದಲು ಒಂದು ಕುರುಹು ತೋರಿಸು ಎಂದು ಊರಿನ ದೈವಸ್ಥರು ಕೇಳಿದರು. ಕಡ್ಲೆಪ್ಪನ ಮಾತಿನಂತೆ ಕೆಚ್ಚಿನ ಬಂಡಿ ಗ್ರಾಮದಲ್ಲಿ ಕುಂಬಳಕಾಯಿಯನ್ನು ಹರಿದು ತಂದರು. ಶನಿವಾರ ದಿನ ರಾತ್ರಿ ಆಂಜನೇಯನ ದೇವಸ್ಥಾನದಲ್ಲಿ ಊರಿನ ದೈವಸ್ಥರೆಲ್ಲ ಸೇರಿದರು. ಕುಂಬಳಕಾಯಿಯನ್ನು ಪೂಜೆ ಮಾಡಿ ನಂತರ ಅದನ್ನು ಎರಡು ಭಾಗ ಮಾಡಿ ಆಂಜನೇಯನ ಮೂರ್ತಿ ಹತ್ತಿರ ಎರಡು ಕಡೆ ಕುಂಬಳಕಾಯಿ ಒಂದೊಂದು ಭಾಗವನ್ನು ಇಟ್ಟು ದೇವಸ್ಥಾನದ ಬಾಗಿಲು ಮುಚ್ಚಿ ಎರಡು ಬೀಗ ಹಾಕಿದರು. ಬೆಳಿಗ್ಗೆ ಹೊತ್ತಿಗೆ ತುಂಡಾದ ಕುಂಬಳಕಾಯಿ ಕೂಡುತ್ತದೆ. ಆಗ ನಾನು ಶಿರಸ್ಸು ಪವಾಡ ಮಾಡುತ್ತೇನೆ ಎಂದು ಕಡ್ಲೆಪ್ಪ ಹೇಳಿದ್ದ ರಾತ್ರಿ ಊರಿನ ದೈವಸ್ಥರೆಲ್ಲಾ ಮಲಗಿದರು. ಆದಕಾರಣ ಅಮಂಗಲ ಆಗಿ ಕುಂಬಳಕಾಯಿ ಕೂಡಿರಲಿಲ್ಲ. ಕುಂಬಳಕಾಯಿ ಕೂಡಿರಲಿಲ್ಲವಾದ್ದರಿಂದ ಕಡ್ಲೆಪ್ಪ ಆ ದಿನ ಶಿರಸ್ಸು ಪವಾಡ ಮಾಡಲಿಲ್ಲ.

**ಕಡಲಬಾಳು ಆಂಜನೇಯ ಸ್ವಾಮಿಯ ಪವಾಡಗಳು**

ಒಮ್ಮೆ ಊರಲ್ಲಿ ಕಾಲರ ಬಂದು ದಿನಕ್ಕೊಬ್ಬರು ಸಾಯುತ್ತಿದ್ದರು. ಇದರಿಂದ ಊರಿನ ಜನರಿಗೆ ಬಹಳ ಚಿಂತೆಯಾಯಿತು. ಕೊನೆಗೆ ದೈವಸ್ಥರು ಆಂಜನೇಯನ ಮೊರೆ ಹೋದರು. ಎಲ್ಲರೂ ದೇವಸ್ಥಾನದಲ್ಲಿ ಸೇರಿದರು. ಅದೇ ಸಂದರ್ಭದಲ್ಲಿ ದೇವಸ್ಥಾನದ ಮುಂದೆ ಮುಸ್ಲಿಂ ಶವವನ್ನು ಕೊಂಡೊಯ್ಯಲಾಯಿತು. ಆಗ ದೈವಸ್ಥರು ಆಂಜನೇಯನನ್ನು ಕುರಿತು ಈ ರೀತಿ ಊರಲ್ಲಿ ಶವ ಹೋಗುವುದು ಇಂದೇ ಕೊನೆಯಾಗಬೇಕು, ಒಂದು ವೇಳೆ ಕೊನೆಯಾಗದಿದ್ದರೆ ನಾವು ನಿನ್ನ ನಿತ್ಯ ಪೂಜೆ ಮಾಡುವುದಿಲ್ಲ. ಅಂದಿನಿಂದ ಊರಲ್ಲಿ ಕಾಲರಾದಿಂದ ಒಬ್ಬ ವ್ಯಕ್ತಿಯೂ ಸಾಯಲಿಲ್ಲ. ಇದರಿಂದ ಆಂಜನೇಯನ ಮೇಲೆ ಜನರಲ್ಲಿ ಭಕ್ತಿ ಇನ್ನು ಹೆಚ್ಚಾಯಿತು.

ತಿಮ್ಮಪ್ಪನ ಗುಡ್ಡಕ್ಕೆ ಮಾರುತಿ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಪ್ರತಿವರ್ಷ ಶ್ರಾವಣ ಮಾಸದಲ್ಲಿ ಕರೆದೊಯ್ಯುತ್ತಾರೆ. ಆ ವರ್ಷ ಪಲ್ಲಕ್ಕಿಯ ಜೊತೆಯಲ್ಲಿ ಪವಾಡ

ಮಾಡುವ ಕಡ್ಲೆಪ್ಪ ಕತ್ತರಿ ಬಾಣ ಹಿಡಿದು ನಿಂತಿದ್ದನು. ಆ ಜಾತ್ರೆಗೆ ಸುತ್ತಮುತ್ತಲಿನ ಅನೇಕ ಊರುಗಳಲ್ಲಿಯ ದೇವತೆಗಳ ಪಲ್ಲಕ್ಕಿಗಳು ಸಹ ಬರುತ್ತವೆ. ವೆಂಕಟೇಶ ದೇವರಗುಡಿಗೆ ಹೋಗುತ್ತದೆ. ಆದರೆ ಒಮ್ಮೆ ಅನೇಕಲ್ಲು ಗೌಡ ಪಲ್ಲಕ್ಕಿ ಒಳಗೆ ಹೋಗಲು ಪ್ರವೇಶ ನೀಡದೆ ತಡೆದು ನಿಲ್ಲಿಸಿದ. ಆದರೂ ಕಡಲಬಾಳು ಹನುಮಪ್ಪನ ಪಲ್ಲಕ್ಕಿ ಆತನನ್ನು ನೂಕಿಕೊಂಡು ಒಳಗೆ ಪ್ರವೇಶಿಸಿತು. ಸ್ವಲ್ಪ ದಿನಗಳ ನಂತರ ಅನೇಕಲ್ಲು ಗೌಡನ ಕಣ್ಣು ಕುರುಡಾದವು. ನಂತರ ತಾನು ಮಾಡಿದ ತಪ್ಪಿಗಾಗಿ ಪಶ್ಚತ್ತಾಪಪಟ್ಟನು.

ಮತ್ತೊಂದು ವರ್ಷ ತಿಮ್ಮಪ್ಪನ ಗುಡ್ಡಕ್ಕೆ ಪಲಕ್ಕಿ ಉತ್ಸವದಲ್ಲಿ ಆಂಜನೇಯ ಮೂರ್ತಿಯನ್ನು ಕರೆದೊಯ್ಯುವಾಗ ಕೆಚ್ಚಿನಮರಡಿ ಗ್ರಾಮದಲ್ಲಿ ಹೊಲದ ಯಜಮಾನನಾದ ಚಿಮ್ಮನಹಳ್ಳಿ ಹನುಂತಪ್ಪನು ಆಂಜನೇಯನ ಪಲ್ಲಕ್ಕಿ ಹೋಗುವ ದಾರಿಯಲ್ಲಿ ಹೊಲಕ್ಕೆ ಮುಳ್ಳಿನ ಬೇಲಿ ಹಾಕಿದನು. ಏಕೆಂದರೆ ತನ್ನ ಹೊಲದಲ್ಲಿ ಬೆಳೆದ ಪೈರು ಹಾಳಾಗಬಾರದೆಂಬ ಉದ್ದೇಶದಿಂದ. ಆದರೆ ಹನುಮಪ್ಪನ ಪಲ್ಲಕ್ಕಿ ಆ ಮುಳ್ಳಿನ ಬೇಲಿಯನ್ನೇ ತುಳಿದುಕೊಂಡು ಮುಂದೆ ಪ್ರವೇಶ ಮಾಡಿತು. ಆಗ ಪಲ್ಲಕ್ಕಿಯ ಜೊತೆಯಲ್ಲಿ ಈಗ ಪವಾಡ ಮಾಡುವ ಬಾಳಪ್ಪ ಕತ್ತರಿ ಬಾಣವನ್ನು ಹಿಡಿದು ನಿಂತಿದ್ದನು. ನಂತರ ಬೇಲಿ ಹಾಕಿದ ಯಜಮಾನನ ಕಣ್ಣು ಕುರುಡಾಗಿ ಸ್ವಲ್ಪ ದಿನದಲ್ಲಿಯೇ ಆತ ಮರಣವನ್ನು ಹೊಂದಿದನು.

೧೯೯೯ರಲ್ಲಿ ದೇವಸ್ಥಾನದ ದ್ವಾರಮಂಟಪದ ಕೆಲಸ ಮುಗಿಯಿತು. ದ್ವಾರಮಂಟಪದ ಮೇಲೆ ಕಳಸವಿಡಲು ಊರಿನ ದೈವಸ್ಥರು ಹಗರಿಬೊಮ್ಮನಹಳ್ಳಿಯ ಗಂಗಾವತಿ ರಾಮಣ್ಣನ ಮಗ ಸುದರ್ಸನನ ಹತ್ತಿರ ಹೋಗಿ ದ್ವಾರಮಂಟಪದ ಮೇಲಿಡಲು ಕಳಸವನ್ನು ಕೊಡಿಸಲು ಕೇಳಿದರು. ಆಗ ಆತ ನಿರಾಕರಿಸಿ ಕಳುಹಿಸಿದ. ಇತ್ತ ರಾತ್ರಿ ಸುದರ್ಶನ ಮನೆಯಲ್ಲಿ ಮಲಗಿಕೊಂಡಾಗ ಆತನ ಮೇಲೆ ಮತ್ತು ಮನೆಯ ಮೇಲೆ ಮಂಗಗಳು ಕುಣಿದಾಡಿದಂತೆ ಆಯಿತು. ರಾತ್ರಿ ನಿದ್ದೆಯೇ ಬರಲಿಲ್ಲ. ಆಗ ತಮ್ಮ ತಂದೆಗೆ ವಿಷಯ ತಿಳಿಸಲಾಗಿ ಅವರು 'ನಾಳೆ ತಂದು ಒಪ್ಪಿಸುತ್ತೇನೆ' ಎಂದು ಕೈಮುಗಿದು ಮಲಗುವಂತೆ ಹೇಳಿದರು. ಮರುದಿನವೇ ಬಂದು ದೇವಸ್ಥಾನದ ದ್ವಾರಮಂಟಪಕ್ಕೆ ಬೇಕಾದ ಎರಡು ಕಳಸಗಳನ್ನು ಒಪ್ಪಿಸಿದರು.

**ಯುಗಾದಿ(ಕಲಶೋತ್ಸವ):** ರಥೋತ್ಸವದ ಧಾರ್ಮಿಕ ವಿಧಿ ವಿಧಾನಗಳು ಯುಗಾದಿಯಂದು ಆರಂಭವಾಗುತ್ತವೆ. ಚೈತ್ರ ಶುದ್ಧ ಪಾಡ್ಯದಂದು ಆಂಜನೇಯನ ರಥೋತ್ಸವದ ಕಲಶೋತ್ಸವ ಕಾರ್ಯಕ್ರಮ ಇರುತ್ತದೆ. ಅಂದು ಸಾಯಂಕಾಲ ಐದು ಗಂಟೆಗೆ ಆಂಜನೇಯನ ದೇವಸ್ಥಾನದಲ್ಲಿ ಆಂಜನೇಯನ ಪೂಜೆ ಮಾಡುವ ಪೂಜಾರಿ ಮನೆಯಿಂದ ಕಳಸವನ್ನು ತೆಗೆದುಕೊಂಡು ಬಂದು ದೇವಸ್ಥಾನದಲ್ಲಿ ಕಂಬಳಿ ಹಾಸಿ ಅದರ ಮೇಲಿಟ್ಟು ಪೂಜೆ ಮಾಡುತ್ತಾರೆ. ನಂತರ

ಅದನ್ನು ಪೂಜಾರಿಯೊಂದಿಗೆ ತಲೆಯ ಮೇಲೆ ಹೊತ್ತುಕೊಂಡು ವಾದ್ಯಗಳ ಸಮೇತ ರಥದ ಹತ್ತಿರ ಒಯ್ಯುತ್ತಾರೆ. ಕಳಸ ತೆಗೆದುಕೊಂಡು ಹೋಗುವಾಗ ಜೊತೆಯಲ್ಲಿ ದಾಸಯ್ಯ ಪವಾಡ ಮಾಡುವ ಬಾಳಪ್ಪ ಇರುತ್ತಾರೆ. ರಥದ ಹತ್ತಿರ ಊರಿನ ದೈವಸ್ಥರೆಲ್ಲಾ ಸೇರಿರುತ್ತಾರೆ. ಕಳಸವನ್ನು ರಥದ ಸುತ್ತ ಮೂರು ಸಲ ಪ್ರದಕ್ಷಿಣೆ ಹಾಕಿ ರಥದ ಮುಂದಿಟ್ಟು ಮತ್ತೊಮ್ಮೆ ಪೂಜೆ ಮಾಡಿ ಕಳಸವನ್ನು ರಥದ ಮೇಲೆ ಇಡುತ್ತಾರೆ. ನಂತರ ಪಂಚಮಿ ದಿನ ರಥೋತ್ಸವ ಜರುಗುವುದಕ್ಕಿಂತ ಮುಂಚಿತವಾಗಿ ಪ್ರತಿದಿನ ಬಲಿ ಹಾಕುವುದು, ರಾತ್ರಿ ಉತ್ಸವ ಜರುಗುತ್ತವೆ. ರಥೋತ್ಸವದ ಹಿಂದಿನ ದಿನ ಆಂಜನೇಯನ ದೇವಸ್ಥಾನದಲ್ಲಿ ರಾಮ, ಸೀತೆಯರ ವಿವಾಹ ಕಾರ್ಯಕ್ರಮವನ್ನು ಏರ್ಪಡಿಸುತ್ತಾರೆ.

**ತೇರು:** ತೇರಿಗೆ ಬಂಡಿ, ಕುರ್ಜು, ಮಾನ್ಯೇವು ಎಂಬ ಹೆಸರುಗಳಿವೆ. ತೇರು ದ್ರಾವಿಡ ಶಬ್ದ. ಇದಕ್ಕೆ ತಮಿಳು, ತೆಲುಗು, ಮಲಯಾಳಂ, ತುಳು ಭಾಷೆಗಳಲ್ಲಿ ಜ್ಞಾತಿ ಪದಗಳಿವೆ. ತೇರಿನ ವಿವರಗಳಲ್ಲಿ ಚಕ್ರ ಅಲಂಕಾರದ ಭಾಗ, ಶಿಖರ, ಕಲಶಗಳಿದ್ದು, ಗೋಪುರಾಕಾರದ ಶೈಲಿಯ ರಥ ವಿಜಯನಗರದ ಕಾಲದಿಂದೀಚೆಗೆ ಬಳಕೆಗೆ ಬಂದಿರಬೇಕೆಂದು ಹಂಪನಾ ವಾದ. ಆದರೆ ಈ ಅಭಿಪ್ರಾಯ ಸರಿ ಎಂದು ತೋರುವುದಿಲ್ಲ. ಬಡಿಗರಲ್ಲಿ ತೇರಿನ ವಿಷಯ ಬಂದಾಗ ಇದರ ಪ್ರಸ್ತಾಪವಾಗಲಿದೆ. ರಥಕ್ಕೆ 'ಕುರ್ಜು' ಎಂಬ ಪದವೂ ಇದೆ. 'ರಾಜರು', 'ವಿಗ್ರಹ', ವಧುವರರು ಕೂರುವ ಮಂಟಪ, 'ಅಟ್ಟಳೆ', 'ರಾಶಿ', 'ಗುಡ್ಡೆ', 'ಬಟ್ಟಲು' ಎಂಬರ್ಥಗಳಿವೆ. ಇದು ಸಹ ದ್ರಾವಿಡ ಪದ ಆಗಿದೆ.

"ರಥವೆಂದರೆ ಸಾಮಾನ್ಯವಾಗಿ ನಾವೂ ಏರಿ ಹೋಗುವ ವಾಹನ. ಆದರೆ ಪದದ ಮೂಲಾರ್ಥ ಆಟವಾಡುವುದು, ಸಂತೋಷಪಡುವುದು". ಜಾತ್ರೆಗಳಲ್ಲಿ ಎಳೆಯಲಾಗುವ ತೇರು ವಲಸೆಗಾರರ ಪೆಟ್ಟಿಗೆ ದೇವರನ್ನು(ಸತ್ತ ಹಿರಿಯರ) ಒಯ್ಯುವ ಕ್ರಿಯೆಯನ್ನು ಧ್ವನಿಸುತ್ತದೆ. ಮೊದಲು ಮೂಲದೇವತೆಯನ್ನು ಕೊಂಡೊಯ್ಯಲಾಗುತ್ತಿತ್ತು. ಸ್ಥಾವರಗೊಂಡ ನಂತರ ಉತ್ಸವ ಮೂರ್ತಿಯನ್ನು ತೇರಿನಲ್ಲಿಟ್ಟು ಎಳೆಯುವ ಪದ್ಧತಿ ಬೆಳೆಯಿತು. ಈ ಹಂತದಲ್ಲಿ ತೇರು ವೈಭವೋಪೇತವಾಗಿ ಪರಿಷ್ಕಾರಗೊಂಡಿತು.

ಹಂಪನಾ ಈ ರೀತಿ ಬರೆಯುತ್ತಾರೆ: 'ಬೇರೆ ಬೇರೆ ಕಡೆಗಳಿಂದ ಬಂದ ಸಾಂಸ್ಕೃತಿಕ ಸಂಬಂಧವಾದ ಹಲವಾರು ಸಂಗತಿಗಳಿಂದ ಆಚರಣೆಯ ರೂಪದಲ್ಲಿ ಜಾತ್ರೆಗಳಲ್ಲಿ ಅಭಿವ್ಯಕ್ತ ವಾಗುತ್ತವೆ. ಹಳ್ಳಿಗರ ಆರಾಧ್ಯ ದೇವತೆ ಉತ್ಸವ ಮೂರ್ತಿಯ ರೂಪದಲ್ಲಿ ಹಳ್ಳಿಯಲ್ಲಿ ಸೂಚಿಸುವುದುಂಟು. ಅದರ ಪ್ರಕಾರ ಚಿಕ್ಕವರು, ವಯೋವೃದ್ಧರು ಅಶಕ್ತರು, ಅನಾರೋಗ್ಯವಂತರಿಗೆ ದೇವರ ದರ್ಶನಕ್ಕಾಗಿ ದೇವಾಲಯಕ್ಕೆ ಹೋಗುವುದು ಆಗದಿದ್ದರಿಂದ ವರ್ಷಕ್ಕೊಮ್ಮೆಯಾದರೂ

ದೇವರ ದರ್ಶನ ಪಡೆಯುವುದಕ್ಕಾಗಿ ಹಳ್ಳಿಯ ಒಳಗೆ ದೇವರನ್ನು ಸುತ್ತಾಡಿಸಿದರೆ ಒಳ್ಳೆಯದಾಗುವುದು ಎಂಬುದು ಪ್ರಾಚೀನರ ಕಲ್ಪನೆಯಿಂದ ರಥೋತ್ಸವದ ವ್ಯವಸ್ಥೆ ಉಂಟಾಗಿರಬೇಕು. ತೇರು ನಾಲ್ಕು ಗಾಲಿಯ ಜೋಡಿ ದೇವಾಲಯದಂತೆ ಇರುವುದು. ದೇವಾಲಯದ ವಿವಿಧ ಭಾಗಗಳನ್ನು ಅದರಲ್ಲಿ ಗುರುತಿಸಬಹುದು. ದೇವಾಲಯದ ಗೋಪುರದಂತೆ ಎತ್ತರಿಸಿ ಅದರಲ್ಲಿ ಪತಾಕೆ, ಪಟಗಳನ್ನು ಅಲಂಕರಿಸಿರುವರು. ಒಳಗೆ ಕಂಬಗಳನ್ನು ರಚಿಸುವರು. ಮೇಲೆ ಕಂಚು ಅಥವಾ ಹಿತ್ತಾಳೆಯ ಕಳಸವನ್ನು ತುದಿಯಲ್ಲಿ ಶೃಂಗರಿಸಿರುವರು. ಗಾಲಿಗಳನ್ನು ಕಟ್ಟಿಗೆ ಅಥವಾ ಕಲ್ಲುಗಳಿಂದ ಮಾಡಿರುತ್ತಾರೆ. ತೇರುಗಳನ್ನು ಕಂಚು, ಹಿತ್ತಾಳೆ, ಬೆಳ್ಳಿ, ಬಂಗಾರದಿಂದಲೂ ರಚಿಸಿರುವರು. ಇವುಗಳ ಗಾತ್ರ ಚಿಕ್ಕದಾಗಿರುವುದು. ತೇರನ್ನು ಹಗಲು–ರಾತ್ರಿ ಎಳೆಯುವರು.

ಹೋಳಿಗೆ ಇಲ್ಲದ ಹಬ್ಬವಿಲ್ಲ. ರಥೋತ್ಸವ ಶ್ರೀರಾಮ ಮತ್ತು ಸೀತೆಯರ ಮದುವೆಯ ಮೆರವಣಿಗೆಯ ರೂಪದಲ್ಲಿ ನಡೆಯುತ್ತದೆ. ಈ ಆಂಜನೇಯನ ರಥೋತ್ಸವ ಅನಾದಿ ಕಾಲದಿಂದಲೂ ನಡೆದುಕೊಂಡು ಬಂದಿದೆ. ಈ ರಥೋತ್ಸವ ಎಂದಿನಿಂದ ಪ್ರಾರಂಭವಾಯಿತು. ರಥವನ್ನು ಯಾರು ಎಷ್ಟರಲ್ಲಿ ನೇಮಿಸಿದರು ಎನ್ನುವ ಮಾಹಿತಿ ತಿಳಿದುಬರುವುದಿಲ್ಲ. ರಥದ ಸಾಮಾನುಗಳು ಹೋದ ಹಾಗೆ ಅವುಗಳನ್ನು ಊರಿನ ದೈವಸ್ಥರು ಬದಲಾಯಿಸುತ್ತಾ ಬಂದಿದ್ದಾರೆ. ಈಗಿರುವ ರಥವೇ ಮೊದಲನೆಯದು. ಅದಕ್ಕೂ ಮುಂಚೆ ಯಾವ ರಥವು ಇರಲಿಲ್ಲವೆಂದು ತಿಳಿದುಬರುತ್ತದೆ. ರಥದ ನಿರ್ಮಾಣ ಕಟ್ಟಿಗೆಯಿಂದ ಆಗಿದೆ. ರಥೋತ್ಸವದ ಸಂದರ್ಭದಲ್ಲಿ ರಥದ ಕಣಗಳನ್ನು ಊರಿನ ಬಡಿಗೇರ ಮನೆತನದವರು ಕಟ್ಟುತ್ತಾರೆ ಮತ್ತು ರಥದ ಗಡ್ಡಿಗೆ ಎಣ್ಣೆಯನ್ನು ಸ್ವಾಮಿಯ ಭಕ್ತರು ಹಚ್ಚಿರುತ್ತಾರೆ.

**ಅಡಿಟಿಪ್ಪಣಿಗಳು**

೧. ಬಸವರಾಜ ಬಿ.ಎಸ್., **ಕಬ್ಬಳ ಸಂಕಥನ**, ೨೦೧೪, ಪು.೪೪

೨. ಶಾಂತವ್ವ ನಾಗಪ್ಪ ಲಕ್ಷ್ಮೇಶ್ವರ, ಯಮನೂರು ಗ್ರಾಮ: ಸಾಂಸ್ಕೃತಿಕ ಸಂಕಥನ, ೨೦೧೩, ಪು.೨೨

೩. ಅದೇ, ಪು.೩೩

೪. ಶ್ರೀ ರಾಘವೇಂದ್ರ ಭಕ್ತಿ ಕುಸುಮಾಂಜಲಿ, ರಚಯಿತ್ರಿ, ಶ್ರೀಮತಿ ಜಲಜಾ ಗಂಗೂರ, ಶ್ರೀ ರಾಗವೇಂದ್ರ ಪರಿಷತ್ತ, ನಂಜನಗೂಡು, ೨೦೦೩, ಪು.೨೫

# ಅಧ್ಯಾಯ ಐದು

# ಕಡಲಬಾಳು ಗ್ರಾಮದ ಜನಪದ ಸಾಹಿತ್ಯ

೫.೧. ಜನಪದ ಕತೆಗಳು
೫.೨. ಜನಪದ ಗೀತೆಗಳು
೫.೩. ಗಾದೆಗಳು
೫.೪. ಒಗಟುಗಳು

ಅಧ್ಯಾಯ ಐದು

# ಕಡಲಬಾಳು ಗ್ರಾಮದ ಜನಪದ ಸಾಹಿತ್ಯ

ಜನಪದರ ಬದುಕಿನಲ್ಲಿ ಸಾಹಿತ್ಯ ಎಂಬುದು ಬಹಳ ಮುಖ್ಯವಾಗಿರುತ್ತದೆ. ಅಂದರೆ ಸಾಹಿತ್ಯವೆಂಬುದು ನಿಂತ ನೀರಲ್ಲ, ಅದು ವ್ಯಕ್ತಿಯ ಜೀವನದಲ್ಲಿ ಸದಾ ಇರುತ್ತದೆ. ಅಲ್ಲದೆ ಸಾಹಿತ್ಯವೆಂಬುದು ಪರಿವರ್ತನೆಯ ನಿಯಮ ಹೊಂದಿರುತ್ತದೆ. ಜನಪದ ಸಾಹಿತ್ಯವು ಸಾಹಿತ್ಯದ ಭದ್ರ ಬುನಾದಿ ಇದ್ದಹಾಗೆ.

ಸಾಹಿತ್ಯ ಮಾನವನು ತನ್ನ ದೈನಂದಿನ ಬದುಕಿಗೆ ಸೃಷ್ಟಿಸಿಕೊಂಡಿರುವ ಒಂದು ಸಾಧನವಿದ್ದಂತೆ. ಇದೊಂದು ಸಾಮಾಜಿಕ ಬದುಕಿಗೆ ಉತ್ತಮ ಸಾಧನವಾಗಿದೆ. ಜನಪದ ಸಾಹಿತ್ಯ ವ್ಯಕ್ತಿಯ ಬದುಕಿನಲ್ಲಿ ತುಂಬಾ ಪ್ರಧಾನತೆ ಹೊಂದಿರುತ್ತದೆ.

"ವ್ಯಕ್ತಿಯ ಅನಿಸಿಕೆ, ವಿಚಾರಗಳನ್ನು, ತನ್ನ ಭಾವನೆಗಳನ್ನು ಕೂಗಿ, ಚೀರಿ, ಚಪ್ಪಾಳೆ ತಟ್ಟುವುದರ ಮೂಲಕ, ಕಣ್‌ಸನ್ನೆ, ಕೈ ಸನ್ನೆಯ ಮೂಲಕ ಅಭಿವ್ಯಕ್ತಗೊಳಿಸುತ್ತಾನೆ. ಸಾಮೂಹಿಕವಾಗಿ ತಮಗೆ ತಿಳಿದ ಚರಿತ್ರೆ, ಪರಾಕ್ರಮ, ಶೌರ್ಯ, ಬಲಿದಾನ, ತಾವು ನೋಡಿದ ಸಾಮಾಜಿಕ, ಧಾರ್ಮಿಕ ಬಲಿದಾನ, ಕೌಟುಂಬಿಕ, ಸುಖ-ದುಃಖ ಸಂದರ್ಭಗಳಿಗೆ ಸಹಜವಾಗಿ ಸ್ಪಂದಿಸುವ ಅಂತಹ ಘಟನೆಗಳನ್ನು ವಿವರಿಸಲು ಸಾಹಿತ್ಯವೆಂಬುದು ತುಂಬಾ ಪಾತ್ರ ನಿರ್ವಹಿಸುತ್ತದೆ."[೧]

ಜನಪದ ಸಾಹಿತ್ಯವು ಹಾಡುಗಳ ರೂಪದಲ್ಲಿ, ಭಜನೆಯ ರೂಪದಲ್ಲಿ, ಮೊಹರಂ ಹಾಡು, ಓಡಪುಗಳು(ಒಗಟುಗಳು), ಕಥೆಗಳು ಮುಂತಾದ ರೂಪದಲ್ಲಿ ಸದಾ ಬೆಳಗುತ್ತಿರುತ್ತದೆ. ಸಾಹಿತ್ಯವು ಸಾವಿರಾರು ವರ್ಷಗಳ ಜೀವನ ಪರ್ಯಂತ ಅನುಭವಗಳನ್ನು ತಿಳಿಸುತ್ತದೆ. ಈ ಸಾಹಿತ್ಯದಲ್ಲಿ, ಕಲಾತ್ಮಕತೆ, ಸಾಮಾಜಿಕ, ಭಾಷಿಕ, ಇತಿಹಾಸ, ಚಾರಿತ್ರಿಕ, ದಾಖಲೆ, ಮನೋವೈಜ್ಞಾನಿಕ ಇತ್ಯಾದಿ ಅಂಶಗಳನ್ನು ಒಳಗೊಂಡಿರುತ್ತದೆ. ಇದೊಂದು ಸದಾ ಹರಿಯುತ್ತಿರುವ ನೀರಿನಂತೆ ಸಾಹಿತ್ಯ ಪ್ರಜ್ವಲಿತವಾಗಿರುತ್ತದೆ. ಒಟ್ಟಿನಲ್ಲಿ ಸಾಮಾಜಿಕ ಮೌಲ್ಯಗಳಲ್ಲಿ ಜನಪದ ಸಾಹಿತ್ಯ ಬಹಳ

ಮುಖ್ಯಪಾತ್ರ ನಿರ್ವಹಿಸುತ್ತದೆ. ಸಮಷ್ಟಿ ಮನೋಧರ್ಮದಲ್ಲಿ ಎಲ್ಲಿಯವರೆಗೆ ಸಮಷ್ಟಿ ಪ್ರಜ್ಞೆ ಜನಪದರಲ್ಲಿ ಪ್ರಧಾನವಾಗಿರುತ್ತೋ ಅಲ್ಲಿಯತನಕ ಜನಪದ ಸಾಹಿತ್ಯ ಜೀವನದಿಯಾಗಿ ಹರಿದು ಬರುತ್ತದೆ.

ಜನಪದ ಸಾಹಿತ್ಯ ಹೆಸರಿಲ್ಲದೆ ತಮ್ಮ ರಚನೆಯ ಮಹತ್ವವನ್ನು ತಾವೇ ಅರಿಯುವ ಮುಗ್ಧ ಜನತೆಯ ಸೊತ್ತು. ಸರಳತೆ, ಮುಗ್ಧತೆ ಮತ್ತು ಪ್ರಕೃತಿ ಸಾಮ್ಯತೆ ಅದರ ಪ್ರಧಾನ ಗುಣಗಳು. ಈ ಸಾಹಿತ್ಯಿಕ ರಚನಾ ಪ್ರವೃತ್ತಿ ಹಕ್ಕಿಯ ಹಾಡಿನಂತೆ ಸಹಜ ಮತ್ತು ಸರಳ. ನೆಲದಲ್ಲಿ ಹಸಿರು ಮೂಡುವಷ್ಟು ಮೋಡದಲ್ಲಿ ಹನಿಯೊಡೆಯುವಷ್ಟು, ಗಿಡದಲ್ಲಿ ಹೂ ಅರಳುವಷ್ಟು ಸಹಜವಾಗಿ ಒಡಮೂಡುತ್ತದೆ. ವ್ಯಷ್ಟಿ ಪ್ರಜ್ಞೆಗಿಂತ ಸಮಷ್ಠಿ ಪ್ರಜ್ಞೆಗೆ ವ್ಯಕ್ತಿ ಮೌಲ್ಯಗಳಿಗಿಂತ ಸಾಮಾಜಿಕ ಮೌಲ್ಯಗಳಿಗೆ ಜನಪದ ಸಾಹಿತ್ಯದಲ್ಲಿ ಪ್ರಾಧಾನ್ಯತೆಯಿದೆ. ಜನಪದ ಸಾಹಿತ್ಯ ಸೃಷ್ಟಿಕರ್ತರು ಅನಕ್ಷರಸ್ಥ ಸಮುದಾಯವೆಂಬುದು ಅಕ್ಷರಶಹ ಸತ್ಯ. ಅವರ ದೃಷ್ಠಿಯ ವೈವಿಧ್ಯತೆ ಬೆರಗುಗೊಳಿಸುವಂತಿದೆ. ಕೆಲವು ವಿದ್ವಾಂಸರು ಭಾರತದಂತಹ ದೇಶದಲ್ಲಿ ರಾಮಾಯಣ, ಮಹಾಭಾರತಗಳಿಗೆ ಜನಪದ ಸಾಹಿತ್ಯವೇ ಪ್ರೇರಣೆ ನೀಡಿದೆ ಎಂದು ಹೇಳುತ್ತಾರೆ. ಸಂಸ್ಕೃತಿಯ ಸಾರ ರೂಪವಾದ ಜನಪದ ಸಾಹಿತ್ಯವು ಒಂದು ದೇಶದ ಬಹುಸಂಖ್ಯಾತ ಜನಪದರ ಆಶೋತ್ತರಗಳ ಪ್ರತೀಕವಾಗಿರುತ್ತದೆ. ಜನಸಂಸ್ಕೃತಿಯ ಅಂತರಾಳದಲ್ಲಿ ಅವುಗಳ ಬೇರುಗಳಿರುತ್ತವೆ. ಕಂಠಸ್ಥ ಸಂಪ್ರದಾಯದಲ್ಲಿ ಬೆಳೆದು ಬಂದು ಸದಾ ಜೀವಂತಿಕೆಯನ್ನು ಉಳಿಸಿಕೊಂಡಿರುತ್ತಾರೆ.

ಮನುಷ್ಯನ ಹುಟ್ಟಿನಿಂದ, ಅವನ ಹುಟ್ಟಿನ ಜೊತೆಗೆ ತಾನೂ ಪೂರ್ತಿ ಅವಿಭಾಜ್ಯ ಅಂಗವಾಗಿ ಬೆಳೆದು ಬಂದಿರುವಂಥದ್ದು. ಜನಪದ ಸಾಹಿತ್ಯ ಮನುಷ್ಯನು ಬೆಳೆದಂತೆಲ್ಲ, ಅನಕ್ಷರಸ್ಥರ ಪರಿಧಿಯಲ್ಲೇ ಉಳಿದು ರಕ್ಷಣೆಗಾಗಿ ಪರಂಪರೆಯಲ್ಲಿ ಬಾಯಿಂದ-ಬಾಯಿಗೆ, ಕಿವಿಯಿಂದ-ಕಿವಿಗೆ ಹರಿದು ಪರಾಕಾಷ್ಟತೆಯನ್ನು ಏರುವಂಥದ್ದು. ಜನಪದರ ಒಂದು ಪ್ರಕಾರವಾದ ಜನಪದ ಸಾಹಿತ್ಯದ ಪ್ರಾಚೀನತೆ ಮನುಷ್ಯನಷ್ಟೇ ಪ್ರಾಚೀನವಾಗಿದೆ. ಶಿಷ್ಟ ಸಾಹಿತ್ಯ ಕವಿ? ಕಾವ್ಯದ ಸೂತ್ರಗಳ ನೆರವಿನಿಂದ ಶುದ್ಧ ಸಾಹಿತ್ಯವಾಗಿ ಜನಪದ ಸಾಹಿತ್ಯಕ್ಕಿಂತ ಭಿನ್ನವಾಗಿ ಬೆಳೆದು ಬಂದ ನಂತರದ ಸಾಹಿತ್ಯ. ಆದರೆ ಶಿಷ್ಟ ಸಾಹಿತ್ಯ ಏಕಮಾತ್ರ ಸಾಹಿತ್ಯವಾಗಿ ಸಾಹಿತ್ಯ ಚರಿತ್ರೆಯನ್ನು ರೂಪಿಸಿಕೊಂಡು ಅಕ್ಷರ ಲೋಕವನ್ನು ವ್ಯಾಪಿಸಿದ ಅನೇಕ ವರ್ಷಗಳ ಬಳಿಕ ಜನಪದ ಸಾಹಿತ್ಯದ ಕಡೆಗೆ ನೋಟವನ್ನು ಹರಿಸಲಾಯಿತು. ಪಾಶ್ಚಾತ್ಯರ ಪ್ರೇರಣೆಯನ್ನು ಪಡೆದ ಭಾರತೀಯರು ಜನಪದ ಸಾಹಿತ್ಯದ ಕಡೆಗೆ ಗಮನಹರಿಸಿ, ಕಳೆದ ೫೦ ವರ್ಷಗಳಿಂದೀಚೆಗೆ ಸಂಗ್ರಹಣೆ, ವಿವರಣೆ, ವಿಶ್ಲೇಷಣೆಗಳು ಮತ್ತು ವ್ಯಾಖ್ಯಾನಗಳು ಹಾಗೂ ಹಲವು ಸಿದ್ಧಾಂತಗಳು ಜನಪದ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹೊರಬಂದಿವೆ. ಮಾನವ ಸಮಾಜ, ಸಂಸ್ಕೃತಿಗಳನ್ನು

ನಿರ್ವಹಿಸುವ ಕ್ರಿಯಾಭಿವ್ಯಕ್ತಿಯಾಗಿ ಮೂಡಿ ಬಂದಿದೆಯಾದುದರಿಂದ ಹಲವು ರೀತಿಯ ಜೀವನ ದರ್ಶನಗಳು ಜನಪದ ಸಾಹಿತ್ಯದಿಂದ ಒದಗಿಬರುತ್ತವೆ.

ನಾವು ಜಾನಪದದಲ್ಲಿ ಜನಪದ ಸಾಹಿತ್ಯಕ್ಕೆ ಹೆಚ್ಚಿನ ರೀತಿಯಾದ ಪ್ರಾಮುಖ್ಯತೆಯನ್ನು ನೀಡಿದ್ದೇವೆ. ಈ ಸಾಹಿತ್ಯ ಜನಪದರ ಬದುಕಿನ ಅವಿಭಾಜ್ಯ ಅಂಗವಾಗಿದೆ. ಹಾಗೆಯೇ ಜನಪದ ಸಾಹಿತ್ಯವು ಕಾಯಕದೊಡನೆ ಸೃಷ್ಟಿಯಾಗಿದೆ. ಮನುಷ್ಯ ತನ್ನ ಅಂತರಂಗವನ್ನು ಅಭಿವ್ಯಕ್ತಗೊಳಿಸುವುದೇ ಸಾಹಿತ್ಯ. ಮನುಷ್ಯ ಹುಟ್ಟಿನೊಂದಿಗೆ ಅವರ ಜನಪದ ಸಾಹಿತ್ಯದೊಂದಿಗೆ ಮೂಡಿಬರುತ್ತವೆ. ಜನಪದ ಸಾಹಿತ್ಯ ಕೇವಲ ಪ್ರಾದೇಶಿಕವಾಗಿ ವೈವಿಧ್ಯವಾಗಿ ಬೆಳೆದುಕೊಂಡು ಬರುವುದನ್ನು ನಾವು ಕಾಣಬಹುದಾಗಿದೆ. ಅಂದಿನ ಜನತೆಯ ಅಂತರಾಳದಲ್ಲಿ ಜೀವನ ಸಾಹಿತ್ಯ ಬಿಂಬಿತವಾಗಿರುವುದನ್ನು ಕಾಣಬಹುದಾಗಿದೆ. ಜನಾಂಗದ ಸಂಸ್ಕೃತಿಯನ್ನು ಅರಿಯ ಬೇಕಾದರೆ ಸಾಹಿತ್ಯ ಪ್ರಮುಖವಾದುದು. ಕಥೆ, ಗೀತೆ, ಗಾದೆ, ಒಗಟು ಇವೇ ಆ ಬೇರುಗಳೆಂದು, ಜನಪದ ರಂಗದಲ್ಲಿ ಇವುಗಳಿಗೆ ನಿಕಟವಾದಂತಹ ಸಂಬಂಧ ಹೊಂದಿರುವಿಕೆಯನ್ನು ಕಾಣಬಹುದಾಗಿದೆ.

ಜನಪದ ಸಾಹಿತ್ಯಕ್ಕಿಂತ ಭಿನ್ನವಾಗಿ ಶಿಷ್ಟ ಸಾಹಿತ್ಯ ಬೆಳೆದುಬಂದುದಾಗಿದೆ. ಜನಪದ ಸಾಹಿತ್ಯ ಕೇವಲ ಪ್ರಾದೇಶಿಕವಾಗಿ ವೈವಿದ್ಯವಾಗಿ ಬೆಳೆದು ಬಂದಿಲ್ಲ. ಅಲ್ಲಿನ ಪರಿಸರ ಬದುಕು, ವ್ಯಕ್ತಿ, ಭಾಷೆ, ಸಂಸ್ಕೃತಿ ಮುಂತಾದವುಗಳ ಕಾರಣವಾಗಿ ವಿಶಿಷ್ಟತೆಯಿಂದ ಮೂಡಿ ಬಂದಿದೆ. ಪ್ರಸ್ತುತ ಕಡಲಬಾಳು ಗ್ರಾಮದಲ್ಲಿ ಗಡಿ ಪ್ರದೇಶವನ್ನು ಹೊಂದಿದ್ದರೂ ಅಲ್ಲಿನ ಭಾಷೆಯ ಪ್ರಭಾವ ಈ ಪ್ರದೇಶದ ಮೇಲೆ ಆಗಿಲ್ಲ. ಜನ ಸಂಸ್ಕೃತಿಯ ಅಂತರಾಳದಲ್ಲಿ ಅವುಗಳ ಬೇರುಗಳಿರುತ್ತವೆ. ಕಂಠಸ್ಥ ಸಂಪ್ರದಾಯದಲ್ಲಿ ಬೆಳೆದು ಸದಾ ಜೀವಂತಿಕೆಯಿಂದ ಉಳಿದು ಕೊಂಡಿರುತ್ತವೆ.

### ೫.೧. ಜನಪದ ಕಥೆಗಳು

"ಜನಪದ ಸಾಹಿತ್ಯದಲ್ಲಿ ಜನಪದ ಕತೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುತ್ತೇವೆ. ಹೇಳುವ, ಕೇಳುವ ಕ್ರಿಯೆ ಮುಖ್ಯವಾದುದು. ಯಾವುದೊಂದು ಪ್ರದೇಶ ಮಾತ್ರವಲ್ಲದೆ ಜಗತ್ತಿನ ಸುತ್ತಲೂ ಕಥೆಗಳನ್ನು ಕಾಣಬಹುದು. ಜನಪದ ಕತೆಯಲ್ಲಿ ಅನೇಕ ರೀತಿಯಾದ ನೀತಿ ಕಥೆಗಳೂ, ಮನರಂಜನಾ ಕಥೆಯೂ, ಧಾರ್ಮಿಕವಾದ ಕಥೆಯೂ ಆದರೂ ಅಪ್ಪಟವಾದ ಮನರಂಜನೆ ನೀಡುವುದು ಇದರ ಉದ್ದೇಶವಾಗಿದೆ."[೨] ಜನಪದ ಕಥೆ ಜನಪದ ಬದುಕಿನ ಸಾಂಪ್ರದಾಯಿಕ ಕಥೆಯಾಗಿದೆ. ಕಡಲಬಾಳು ಪ್ರದೇಶದಲ್ಲಿ ಕೇಳಲು ಮತ್ತು ಹೇಳಲು ತುಂಬಾ ನೀತಿ ಕಥೆಗಳಿವೆ. ಅವುಗಳೆಂದರೆ ಅತಿಮಾನುಷ ಶಕ್ತಿ, ಬುದ್ಧಿವಂತಿಕೆ, ಹಾಸ್ಯ ಪ್ರಧಾನವಾದ ಪ್ರಾಣಿ ಕಥೆ ಇಲ್ಲಿ ದೊರಕಿವೆ.

ಈ ಗ್ರಾಮದಲ್ಲಿ ಕಥೆಗಳು ಹೆಚ್ಚಾಗಿ ಮಹಿಳೆಯರಿಂದಲೇ ಹೇಳಲ್ಪಡುತ್ತಿವೆ. ಈ ಕಥೆಗಳಲ್ಲಿ ಮಹಿಳೆಯರ ಸಾಮಾಜಿಕ ಸ್ಥಾನಮಾನಗಳನ್ನು ಹಾಗೂ ಅವರ ಬದುಕಿನ ವಿನೋದ ಆನಂದಕ್ಕೆ ಹಾಸ್ಯ, ಅಧ್ಯಾತ್ಮ, ಕುಟುಂಬ, ಮದುವೆ, ದುರಂತ, ಸಾಹಸ, ಕಷ್ಟ ಪರಂಪರೆಗಳು ಇತ್ಯಾದಿ ಸಂಗತಿಗಳನ್ನು ಸಹ ಈ ಕಥೆಗಳು ಒಳಗೊಂಡಿವೆ. ಲಾಲಿಸಿ-ಪಾಲಸಿ, ಮಾತೃತ್ವ, ಸಾಹಸ ರಕ್ಷಣೆ ಗುಣಗಳಿಂದ ಕೂಡಿದ ಸ್ತ್ರಿ ಕೇಂದ್ರಿತ, ಪುರುಷ ಕೇಂದ್ರಿತ ಕಥೆಗಳ ಸಹ ನೋಡ ಬಹುದಾಗಿದೆ. ಪ್ರಸ್ತುತವಾಗಿ ಕಥೆಗಳಲ್ಲಿ ರೂಪ, ಭಾಷೆ, ಆಚರಣೆ ನಡೆ-ನಾಡಿಗೆ ಸಂಬಂಧಿಸಿದಂತೆ ವಿಶೇಷವಾಗಿ ಅಭಿವ್ಯಕ್ತವಾಗಿವೆ. ರಾಜನು ತನ್ನ ೭ ಜನ ಹೆಣ್ಣು ಮಕ್ಕಳಿಗೆ ಮದುವೆಮಾಡಿಕೊಂಡು ಅವರು ಗರ್ಭಿಣಿಯರಾಗಿ ಎಲ್ಲರಿಗೂ ಸೀಮಂತ ಮಾಡಿ ಅವರ ಇಷ್ಟವಾದ ತಿಂಡಿ-ತಿನಿಸುಗಳನ್ನು ಮಾಡಿ ತಿನ್ನಿಸುವುದು, ಕೊನೆಯ ಮಗಳ ಮಗ ಕಾಡಿನಿಂದ ಬಂದು ಮನೆ-ಮನೆಗೆ ಭಿಕ್ಷೆ ಎತ್ತುವುದು.

ಈ ಪ್ರದೇಶದಲ್ಲಿ ಹಬ್ಬ-ಹರಿದಿನಗಳಲ್ಲಿ ಶ್ರಾವಣ ಸಂದರ್ಭದಲ್ಲಿ ದಾಸಯ್ಯ ಒಕ್ಕಲಿನವರು ಶ್ರಾವಣ ಶನಿವಾರ ಸ್ನಾನ ಮಾಡಿ ನಾಲ್ಕು ಮನೆಯಾದರೂ ಭಿಕ್ಷೆ ಬೇಡಬೇಕು. ನಂತರದಲ್ಲಿ ಪೂಜೆ ಪುನಸ್ಕಾರ ಮಾಡುವುದನ್ನು ಕಾಣತ್ತೇವೆ. ಮಾನವನ ದೈನಂದಿನ ಜೀವನದಲ್ಲಿ ಮಾನವರು ಅನುಭವಿಸುವ, ಸುಖ-ದುಃಖ, ಅಳು-ನಗು, ಕಷ್ಟ, ತಾಪತ್ರಯ, ಅಸೂಯೆ, ಪ್ರೀತಿ, ವಾತ್ಸಲ್ಯ, ದ್ವೇಷ, ಕೋಪ, ಅಪಾಯ ಇವುಗಳಿಂದ ಪಾರಾಗುವಂತಹ ಬಗೆಯನ್ನು ಈ ಕಥೆಗಳಲ್ಲಿ ಚಿತ್ರಣಗೊಂಡಿವೆ. ಅದೇ ರೀತಿಯಾಗಿ ಒಂದು ಪಟ್ಟಣದಲ್ಲಿ ಒಬ್ಬ ದೊರೆಗೆ ಒಂದೂರಲ್ಲಿ ರಾಜ ಒಂದು ಊರಿನಲ್ಲಿ ಒಬ್ಬ ಬ್ರಾಹ್ಮಣ ಇದ್ದ ಅಂತ ಕಥೆ ಪ್ರಾರಂಭವಾಗುವುದು.

ಜನಪದ ಕಥೆಗಳು ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದ್ದವು ಎಂಬುದಕ್ಕೆ ಇವು ನಿದರ್ಶನವಾಗಿವೆ. ಸಾಮಾನ್ಯವಾಗಿ ಜನಪದ ಕಥೆಗಳಲ್ಲಿ ಊರು, ವ್ಯಕ್ತಿಗಳಿಗೆ ಹೆಸರಿಲ್ಲ. ಒಂದೂರಲ್ಲಿ ಒಬ್ಬ ಅಜ್ಜಿ ಇದ್ದಳು. ಕಥೆಗಳಲ್ಲಿ ಪ್ರತಿ ಬಿಂಬಿತವಾಗುವ ಮನೋಧರ್ಮ ಅವುಗಳ ವ್ಯವಸ್ಥಿತವಾದ ಅಧ್ಯಯನದಿಂದ ರಾಕ್ಷಸರು ಮಾನವರ ನಡುವೆ ಯಾವುದೇ ಅಂತರದ ಸಂಬಂಧವನ್ನು ಕಟ್ಟಿಕೊಂಡಿದೆ ಎಂತಲೂ ಕರೆಯಲಾಗಿದೆ. ರಾಕ್ಷಸರು ಮಂತ್ರಿ ಕುಮಾರನಿಗೆ ಮಾಡಿದ ಸಹಾಯ ದುಷ್ಟ ಶಕ್ತಿಗಳಲ್ಲಿಯೂ ಒಳ್ಳೆಯ ಮಾನವೀಯತೆ ಇರುತ್ತಿದೆ, ಹುಟ್ಟಿನಿಂದ ಯಾರು ದುಷ್ಟರಲ್ಲ. ಈ ಕಥೆಯಲ್ಲಿ ಮಾನವರ ಪಾತ್ರ ಮತ್ತು ಪ್ರಾಣಿಗಳ ಪಾತ್ರಗಳು ಯೋಜಿಸಲ್ಪಟ್ಟಿರುತ್ತವೆ. ಕಥನ ಕ್ರಿಯೆ ನೀತಿಯತ್ತ ಸಾಗುವುದು. ಕೊನೆಯಲ್ಲಿ ಸೂತ್ರ ಹಾಸ್ಯವೊಂದರಲ್ಲಿ, ನೀತಿ ನಿಲ್ಲುವುದು ಈ ಕಥೆಗಳ ಎರಡು ಪ್ರಧಾನ ಅಂಶಗಳು. ನೀತಿ-ಬೋಧನೆಗಾಗಿಯೇ ಕೆಲವು ನೀತಿ ಕಥೆಗಳು

ಇವೆ. ಎಲ್ಲಾ ಜನಪದ ಕಥೆಗಳನ್ನು ಒಂದೆಡೆ ಸಂಗ್ರಹಿಸಿ ಒಂದನ್ನೊಂದು ಹೋಲಿಸಿ ನೋಡಿದಾಗ ಮಾನವನ ಸಂಬಂಧಗಳನ್ನು ಸಹೃದಯ ಮನಸ್ಸು ಪ್ರೀತಿ ವಿಶ್ವಾಸಗಳನ್ನು ತಿಳಿಯ ಬಹುದಾಗಿದೆ.

**೫.೨. ಜನಪದ ಗೀತೆಗಳು**

ಜನಪದ ಸಾಹಿತ್ಯದಲ್ಲಿ ಈ ಹೆಣ್ಣುಮಕ್ಕಳೇ ಪ್ರಧಾನ ಪಾತ್ರ. ಜನಪದ ಸಾಹಿತ್ಯದ ಬಹು ಭಾಗವನ್ನು ಹೆಣ್ಣು ಮಕ್ಕಳ ಹಾಡುಗಳೇ ತುಂಬಿದೆ. ಹೆಣ್ಣು ಜನಪದ ಸಾಹಿತ್ಯದ ಜೀವನಾಡಿ ಯಾಗಿದ್ದಾಳೆ. ಮಡದಿಯಾಗಿ, ಸೊಸೆಯಾಗಿ, ಮಗಳಾಗಿ, ಅಕ್ಕ-ತಂಗಿಯಾಗಿ ಅನೇಕ ರೂಪಗಳಲ್ಲಿ ಬಾಳು ಬೆಳಗುವ ಇವಳು ಜನಪದ ಸಾಹಿತ್ಯದ ಮುಖ್ಯ ವಸ್ತುವಾಗಿದ್ದಾಳೆ. ತೊಟ್ಟಿಲು ತೂಗುವಾಗ, ಹೊಲದಲ್ಲಿ ಕೆಲಸ ಮಾಡುವಾಗ, ಕನ್ಯೆ ಮೈ ನೆರೆದಾಗ ಹುಟ್ಟು-ಸಾವಿನ ನಡುವಿನ ಬದುಕು ಜನಪದ ಸಾಹಿತ್ಯ ವಸ್ತುವಾಗುತ್ತದೆ. ಸಂಸ್ಕೃತಿಯ ಹಿರಿಮೆ-ಗರಿಮೆ ಜೀವನದ ಅನುಭವಗಳ ಕುರಿತು ಸ್ತ್ರೀಯರು ಹಾಡುವ ಈ ಹಾಡುಗಳನ್ನು ಇವರೇ ಕಟ್ಟಿ ಹಾಡಿದ್ದಾರೆ. ಈ ಹಾಡುಗಳನ್ನು ವ್ಯಕ್ತಿ ಜೀವನದ ಸಂಗೀತವಾದ್ಯಗಳು, ಸಾಂಪ್ರದಾಯಿಕ ಹಾಡುಗಳಲ್ಲಿ ಹೆಣ್ಣಿನ ಶೀಲ, ಚಾರಿತ್ರ್ಯ, ತ್ಯಾಗ, ಕಷ್ಟ, ಸಹಿಷ್ಣತೆ, ಪಾವಿತ್ರತೆಯನ್ನು ಮೆರೆಸಿ ಸ್ತ್ರೀಯರ ಜೀವನ ಚಿತ್ರಣ ಕೊಡುತ್ತವೆ. ಕಡಲಬಾಳು ಪರಿಸರದಲ್ಲಿ ಜನಪದ ಕಥೆಗಳ ಸಂಖ್ಯೆಯನ್ನು ಮೀರಿಸುವಷ್ಟು ಗೀತೆಗಳ ಸಂಖ್ಯೆ ಹೆಚ್ಚಾಗಿದೆ. ರಾಜ್ಯದ ಇತರೆ ಭಾಗದಲ್ಲಿ ದೊರೆಯುವಂತಹದಕ್ಕಿಂತ ಹಲವು ಅಪರೂಪವಾಗಿವೆ. ಗಂಡ-ಹೆಂಡ್ತಿರ ಹಾಲು ಜೇನಿನಂತಹ ಮಧುರ ಬಾಂಧವ್ಯದ ಒಂದು ಗುಂಪು, ತವರಿನ ಕಳ್ಳು ಬಳ್ಳಿ ಸಂಬಂಧವನ್ನು ಮನೋಜ್ಞವಾಗಿ ತಿಳಿಸುವಂತಹ ಮತ್ತೊಂದು ಗುಂಪು ಮತ್ತು ತಮ್ಮ ನೆಚ್ಚಿನ ಗುರುಗಳಿಗೆ ಧನ್ಯವಾದ ಭಾವನಾ ತೋರುವ ಗೀತೆಗಳು. ಹೀಗೆ ಇಲ್ಲಿನ ಜನಪದ ಸಂಸ್ಕೃತಿಯನ್ನು ಪರಿಚಯ ಮಾಡಿಕೊಟ್ಟು ಇಲ್ಲಿನ ಸಂಸ್ಕೃತಿ ಮನಸ್ಸಿನ ಮೂಲಕ ಜನಪದರ ಶ್ರೀಮಂತ ಸಾಹಿತ್ಯವನ್ನು ಅತ್ಯಂತ ಮನಮೋಹಕವಾಗಿ ಪ್ರತಿಬಿಂಬಿಸಿದ್ದಾರೆ.

**ದೇವರ ಸ್ತುತಿ ಪದಗಳು:** ಈ ಹಾಡುಗಳು ತಾವು ನಂಬಿದಂತಹ ದೇವರನ್ನು ಕುರಿತು ಜನಪದರು ಹಾಡುವ ಹಾಡುಗಳು. ದೇವರು ಜನಪದರಿಗಿರುವ ಸಂಬಂಧ, ದೇವರ ಕುರಿತಾದ ಜನರ ಕಲ್ಪನೆ, ಭಾವನೆ, ನಂಬಿಕೆ, ವಿಶ್ವಾಸ, ಭಕ್ತಿ, ಭಾವಗಳು ಇವೆ. ಈ ಹಾಡುಗಳು ಊರಿ ನಲ್ಲಿರುವ ದೇವ-ದೇವಿಯರ ವಿವರ ಸ್ವರೂಪ ಸೌಂದರ್ಯವನ್ನು ಸ್ಥಳ ಮೂಲ ಆಚರಣೆ ಮಹಿಮೆಗಳು ವರ್ಣನೆಯನ್ನು ಸಹ ಅವರ ಗ್ರಾಮದಲ್ಲಿ ಕೆಲಸ ಕಾರ್ಯಗಳ ಜೊತೆಗೆ ದೇವರ ಪೂಜೆಗಳಲ್ಲಿ, ಉತ್ಸವ, ಆಚರಣೆ, ಜಾತ್ರೆಗಳಲ್ಲಿ ಈ ಹಾಡುಗಳ ನಿರೂಪಣೆ ರೂಪದಲ್ಲಿ ಕಥನ ಕಾವ್ಯಗಳ ಆರಂಭದ ಆಚರಣೆ ಪೂಜೆಗಳ ಜೊತೆ ಹಾಡುವ ಹಾಡುಗಳ ರೂಪದಲ್ಲಿ ಇವು

ಲಭ್ಯವಾಗಿವೆ.

**ಬಸವಣ್ಣ:** ಈ ಗ್ರಾಮದಲ್ಲಿ ಕೃಷಿಯೇ ಅವಿಭಾಜ್ಯ ಅಂಗವಾಗಿದೆ. ಬಸವಣ್ಣನಿಗೆ ಜನಪದರಲ್ಲಿ ಮೊದಲ ಸ್ಥಾನ. ಭೂಮಿಯ ಉಳಿಮೆ ಬಿತ್ತನೆ ಮಾಡುವ ಜನಪದರು ಹಾಡುಗಳ ಮೂಲಕ ಅವರ ಸಂಬಂಧಗಳು ಹಾಗೂ ಪ್ರೀತಿಯನ್ನು ಕಾಣುತ್ತೇವೆ. ಮುಂಜಾನೆ ಎದ್ದು ಮೊದಲು ಬಸವಣ್ಣನ ಮುಖ ನೋಡಿದರೆ ನಂತರ ನಾವು ಹೋಗುವಂತಹ, ನಾವು ಮಾಡುವಂತ ಕೆಲಸ ಕಾರ್ಯಗಳು ಪೂರ್ಣಗೊಳ್ಳುತ್ತವೆ ಎಂಬ ನಂಬಿಕೆಯುಳ್ಳವರಾಗಿದ್ದಾರೆ. ರೈತರು ತಮ್ಮ ಕೆಲಸಗಳಲ್ಲಿ ಭಾಗವಹಿಸುವ ಮುನ್ನವೇ ಬಸವಣ್ಣನ ಮುಖ ನೋಡಬೇಕು. ಈ ಬಸವಣ್ಣನ ಪೂಜೆ ಮಾಡಿದರೆ ಸಕಲ ರೀತಿಯಾದಂತಹ ಸಂಪತ್ತು ಸಿಗುವುದನ್ನು ಕಾಣುತ್ತೇವೆ. ತಮಗೆ ಸಂಮೃದ್ಧಿಯನ್ನು ನೀಡಿರುವಂತಹ ಬಸವಣ್ಣನಿಗೆ ಪೂಜೆ ಮಾಡುವ ವಿಧಾನ ವಿಶೇಷವಾಗಿದೆ.

**ಭೂಮಿ ತಾಯಿ ನೆನೆಯುವುದು:** ತಮ್ಮ ದಿನನಿತ್ಯದ ಬದುಕಿನಲ್ಲಿ ಬರುವಂತಹ ಸನ್ನಿವೇಶ, ಜನಪದರು ಎದ್ದ ತಕ್ಷಣವೇ ಭೂಮಿ ತಾಯಿಯನ್ನು ನೆನೆಯುತ್ತಾರೆ. ತಮಗೆ ಅನ್ನ ನೀಡುವ ಭೂಮಿ ತಾಯಿಯನ್ನು ಎದ್ದು ಅರೆ ಕ್ಷಣವಾದರೂ ನೆನೆಯದೇ ಹೋದರೆ ನಮಗೆ ಅನ್ನ ಸಿಗುವುದಿಲ್ಲ. ಪ್ರಕೃತಿಯ ಜೊತೆಗಿನ ಹೊಂದಾಣಿಕೆಯಿಂದಾಗಿ ಜನರಿಗೆ ಯಾವ ತೊಂದರೆ ಬರುವುದಿಲ್ಲ.

**ರಾಗಿ ಬೀಸುವಾಗ ಹೇಳುವ ಹಾಡು:** ಮಹಿಳೆಯರು ಯಾವುದೇ ಕೆಲಸಮಾಡಬೇಕೆಂದರೆ ಸಹಜವಾಗಿ ಹಾಡುತ್ತಲೆ ಮಾಡುತ್ತಾರೆ. ಬೆಳಗಿನ ಜಾವ ಕೋಳಿ ಕೂಗುವ ಮುನ್ನವೇ ಹಳ್ಳಿಯ ಹೆಂಗಸರು ಎದ್ದು ರಾಗಿ ಬೀಸುತ್ತಾ ತನ್ನೆಲ್ಲ ಕಷ್ಟಗಳನ್ನು ಮರೆತು ಹೊಸ ಮನಸ್ಸಿನಿಂದ ಮತ್ತೆ ದಿನದ ಜೀವನಕ್ಕೆ ಕಾಲು ಇಡುತ್ತಾಳೆ.

ಬೆಳಗಾಗುತ್ತಲೇ ರಾಗಿ ಕಲ್ಲು ಹಿಡಿದು ರಾಗಿ ಬೀಸುವುದು ತವರು ಮನೆಯ ಸಂಕೇತವಾದರೆ ಅಕ್ಕಿ ಬೀಸುವ ಕಲ್ಲು ಮಾವನ ಮನೆಯ ಸಿರಿವಂತಿಕೆ ಅಲ್ಲಿ ತವರು ಮನೆಗಿಂತಲೂ ಮಾವನ ಮನೆಯವರು ಸ್ಥಿತಿವಂತರೆಂಬ ಭಾವನೆ ವ್ಯಕ್ತವಾಗುತ್ತದೆ.

**ಗುರುಗಳ ಮೇಲಿನ ಪದ :** ಜನಪದರಲ್ಲಿ ತಂದೆ-ತಾಯಿ ಮತ್ತು ಗುರುಗಳಲ್ಲಿ ಎಲ್ಲಿಲ್ಲದ ಪ್ರೀತಿ ಗೌರವ. ದಾರಿಯಲ್ಲಿ ಬರುವ ಗುರುಗಳನ್ನು ನೋಡಿಯೂ ನೋಡದಂತೆ ಹೋಗಬಾರದು. ಇವರು ಅವರ ಬಗ್ಗೆ ಇಟ್ಟಿರುವ ಭಕ್ತಿಯನ್ನು ತೋರುವುದನ್ನು ಕಾಣುತ್ತೇವೆ. ಹಾಡುಗಳು ಈ ಗ್ರಾಮದ ಜನರ ಸಂಸ್ಕೃತಿಯ ಪರಿಚಯ ಮಾಡಿಕೊಡುವ ಮೂಲಕ ಇಲ್ಲಿನ ಜನರ ಶ್ರೀಮಂತ ಸಾಹಿತ್ಯವನ್ನು ಪ್ರತಿ ಬಿಂಬಿಸುತ್ತವೆ.

**ಧಾರೆ ಎರೆಯೋ ಗೀತೆ**

ಅಲಾದೆಲೆಯಲ್ಲಿ ಆದಿ ಚಿನ್ನ ಕಟ್ಟಿ
ಮಾಡಿದ್ದೋನ್ಯಾರೋ ಮಾನುಗಾರ
॥ ಕಲ್ಯಾಣವೇ ಗೌರೀ ಕಲ್ಯಾಣವೆ ॥
ಕಂಕಣದೊತ್ತಿಗೆ ಯಾರ್‍ಯಾರು ಬರಬೇಕು
ಕಂಕಣದ ಕೈಯ ಹಿರಿಯಣ್ಣ
ಕಂಕಣದ ಹೊತ್ತಿಗೇ ಬರಬೇಕು

**ಮೈನೆರೆದಾಗ ಹೇಳುವ ಹಾಡು** : ಹುಡುಗಿ ಮೈನೆರೆದಾಗ ಐದು ಅಥವಾ ಹನ್ನೊಂದು ಇಲ್ಲವೆ ಹದಿನಾರು ದಿನಗಳವರೆಗೆ ಕೂಡಿಸಿ ಆರತಿ ಮಾಡಿ ಹೂ ಮುಡಿಸುತ್ತಾರೆ. ಇಂತಹ ಸಂದರ್ಭದಲ್ಲಿ ಹಾಡುವ ಹಾಡನ್ನು ಸೋಬಾನದ ಗೀತೆ/ ಹಾಡು ಎಂದು ತಿಳಿಯಬಹುದು ಇಲ್ಲಿ ಸೋಬಾನೆ ಹಾಡುಗಳಿಗೂ ಕೊರತೆ ಇಲ್ಲ.

ಸೋ ಎನ್ನಿರೆ ಸೋಬಾನೆ ಬನ್ನಿರೆ ।
ಹಟ್ಟಿಯಲ್ಲಿ ನಿಂತು ನಿಸ್ಪೆ ಮೈನೆರೆದಾಳು
ಹಟ್ಟಿಯ ಗೌರಿ ನುಡಿದಾವೋ
ಹಟ್ಟಿಯ ಗೌರಿ ಏನಂತ ನುಡಿದಾವೋ
ಎಲ್ಲಾ ಭಾಗ್ಯ ಬರಲಿ ತವರಿಗೆ
ಸರಸತಿ ಸಣ್ಣಾಳೆ ನಗು ಮುಖದ ಕಡು ಚೆಲುವ
ಕಲುಕಂಟಕದ ಅರಸೆ ಗಿರಿಜಮ್ಮ/ಪಾರ್ವತಿದೇವಿ
ಕೆಲಸ ತಲ್ಲಣದ ಮಲೆಗಳೆ
ಹತ್ತಾಳುದ್ದದ ನೀರ ಎತ್ತ ಬಾರದು ಪಡುಮ
ಎತ್ತೇವು ಅದರ ಮೊದಲಿಂದ ಸರಸತಿ
ಕಿತ್ತಲೆ ಹಣ್ಣ ಒಳಲಂಚ । ಕೊಟ್ಟರೆ
ತಪ್ಪಿದ ಪದವ ಬರಕೊಡೆ

ಹೀಗೆ ಸಂಮೃದ್ಧವಾಗಿ ಮದುವೆಯ ಸಂದರ್ಭದಲ್ಲಿ ಹಾಗೆಯೇ ಹಲವು ರೀತಿಯಾದ ಸೋಬಾನ ಹಾಡುಗಳನ್ನು ಹರಿಜನರು, ಕುರುಬರು, ಶ್ರಮಿಕರು ಎಲ್ಲರೂ ಈ ಸೋಬಾನ ಹಾಡುವರು.

**ಅಣ್ಣ-ತಂಗಿಯರ ಗೀತೆ** : ಜನಪದರಲ್ಲಿ ಅಣ್ಣ-ತಂಗಿಯರ ಜೀವನ ಹೃದಯ ಸ್ಪರ್ಶಿಯಾಗಿದೆ. ಅವರಾಡುವ ಮಾತುಗಳು ಭಾವನಾತ್ಮಕವಾದಂತಹ ಲೋಕಕ್ಕೆ ಕರೆದೊಯ್ಯುತ್ತವೆ. ಇಲ್ಲಿ ತಂಗಿಗೆ ಅಣ್ಣ ತರುವ ಉಡುಗೊರೆಯೂ ಅಷ್ಟೆ ಚೆನ್ನಾಗಿದೆ.

ನನ್ನೊಬ್ಬಣ್ಣಾ ಚೆಂದಾ ಕಬ್ಬಿನಗದ್ದೆ ಚೆಂದಾ
ನನ್ನೊಬ್ಬಣ್ಣಾ ತರುವ ಮುದ ಚೆಂದ
ಒಬ್ಬಣ್ಣಾ ತರುವ ಮುದ್ ಚೆನ್ನ ಮುಗ್ಗಿನರವಕೇ
ಒಗ್ಗುದುರೆ ಮುಗ್ಗು ಸುರುದಾವೋ

**ಜೋಗುಳ ಹಾಡು** : ಜೋಗಳ ಹಾಡುಗಳಲ್ಲಿಯೂ ನಾವು ವೈವಿದ್ಯತೆಯನ್ನು ಕಾಣಬಹುದು. ಈ ಜೋಗಳ ಹಾಡಿನಲ್ಲಿ ದೇವರ ನೆನೆಯುವಾಗ ಜೊತೆಗೆ ಕಂದನ ವರ್ಣನೆಯನ್ನು ವಿವಿಧ ರೀತಿಯಲ್ಲಿ ಮಾಡಿ ಕಂದನ ಸ್ವರೂಪ ಸೌಂದರ್ಯವನ್ನು ಹಾಡಿ ತಮ್ಮ ತಾಯಿಯರು ತಮ್ಮ ಕಂದನ ಸೌಂದರ್ಯವನ್ನು ಹೆಚ್ಚಿಸಿದ್ದಾರೆ.

ಅಳುವ ಕಂದನ ತುಟಿಯು ಹವಳದ ಕುಡಿಹಾಂಗೆ
ಕುಡಿಹುಬ್ಬು ಬೇವಿನಸಳಂಗ। ಕಣ್ಣೋಟ
ಶಿವನ ಕೈಯಲಗು ಹೊಳೆದಂಗ
ಅತ್ತೇನ ಕಾಡ್ಯಾನ ಮತ್ತೇನೇ ಬೇಡ್ಯಾನ
ಮತ್ತೆ ಮತ್ತೆ ಧಿಮುಕವ। ಕೊಟ್ಟರೆ
ಗಪ್ ಚಿಪ್ಪಾಗಿ ಮಲಗ್ಯಾನ

ಮಹಿಳೆಗೆ ಮೀಸಲಾದ ಕೆಲವು ಹಾಡುಗಳಿವೆ. ಮನೆಯಲ್ಲಿ ಮಗು ಹುಟ್ಟುವ ಪೂರ್ವದಿಂದ ಹಿಡಿದು ಹೆಣ್ಣು ಗರ್ಭಿಣಿಯಾದಾಗ ಆಕೆಯ ಜೀವನದಲ್ಲಿ ಹೊಸ ಹೊಸ ರೀತಿಯಾದಂತಹ ಅನುಭವಗಳು ಮೈದಳೆಯುತ್ತವೆ. ಏನೇನೋ ತಿನ್ನ ಬೇಕೆನಿಸುತ್ತದೆ. ಆಗ ಆಕೆಗೆ ಮೂರು ತಿಂಗಳಲ್ಲಿ ಕಳ್ಳ ಕುಬುಸ ಮಾಡುವುದರ ಮೂಲಕವೇ ಆಕೆಯ ಬಯಕೆ ತೀರಿಸಲು ವಿವಿಧ ಬಗೆಯ ಭಕ್ಷ್ಯ ಭೋಜನವನ್ನು ಮಾಡಿಕೊಡುತ್ತಾರೆ. ಹಾಗೆಯೇ ಉಡಿಗೆ ತೊಡಿಗೆಗಳನ್ನು ಸಹ ಇಟ್ಟು ಅವಳಿಗೆ ಹೂ ಮುಡಿಸಿ ಆರತಿಯನ್ನು ಮಾಡುವುದನ್ನು ಕಾಣುತ್ತೇವೆ.

ಹಸಿರು ಪಟ್ಟಿ ಸೀರೆ ಟೇಪು ಮುಸಕ ಮ್ಯಾಲಮಾಡಿ
ಬಿಸಿಲಿಗೆ ಬೆನ್ನ ಕೊಟ್ಟು ನಡೆವಾಂಗಾಗ್ಯೆತಿ
ಬಾಲನ ನಯಕೆ ಕಳಿ ಬಯಸಂಗಾಗ್ಯೆತಿ

ಕಾಲ ಬೆಳ್ಳಿ ಗೆಜ್ಜೆ ಪುಟ್ಟ ಹಾರ ಬೈತಲೆ ಬೊಟ್ಟು
ಮಾಲೆ ಜಡೆ ತುಂಬ ನಿಟಗೊಂಡ ನಡೆವಂಗಾಗೈತಿ
ಬಾಲನ ಬದುಕಿ ಬಳಿ ಬಯಸಂಗಾಗೈತಿ
ಕಂದ ಮರೆದ ಕರ್ಚಿಕಾಯಿ ಹೂವಿ ಸಂತಿಗ ಉಪ್ಪಿನಕಾಯಿ
ಹಿಲುನ ನೆರಳಗ ಕುತಗೊಂಡ ಉಣವಂಗಾಗೈತಿ
ಬಾಲನ ಬಯಕಿ ಕೇಳಿ ಬಯಸಾಂಗಾಗೈತಿ
ಹೂಗಾರ ಮನೀಗ ಹೋಗಿ ಹೂವಿನ ದಂಡಿ ಕಟ್ಟಿಸಿಕೊಂಡು
ರಾಯನ ಎಡಬದಿಗೆ ಕೂತಗೊಂಡು ಮುಡಿವಂಗಾಗೈತಿ
ಬಾಲನ ಬಯಕೆ ಕೇಳಿ ಬಯಸಂಗಾಗೈತಿ
ಇಂತಹ ಅನೇಕ ಹಾಡುಗಳು ಈಗಲೂ ಜೀವಂತವಾಗಿವೆ.

**ಶಿಶು ಗೀತೆ:** ಈ ಹಾಡುಗಳು ಪ್ರಾಯಶಃ ಕರ್ನಾಟಕದಲ್ಲಿ ತುಂಬಾನೇ ಪ್ರಚಲಿತವಿರುವುದಾಗಿವೆ. ಈ ಹಾಡುಗಳನ್ನು ಮಕ್ಕಳನ್ನು ತೊಡೆಯ ಮೇಲೆ ಕೂಡಿಸಿಕೊಂಡು ಹೇಳಲು ಪ್ರಾರಂಭಿಸಿದರು. ಆರಂಭಿಸಿದರೆ ಇನ್ನು ೭ ರಿಂದ ೮ ತಿಂಗಳ ಕೂಸು ಕೂಡಾ ತನ್ನ ಶರೀರವನ್ನೆಲ್ಲವನ್ನು ಅಲ್ಲಾಡಿಸುತ್ತದೆ ಎನ್ನಲಾಗಿದೆ.

ಆನಿ ಬಂತ್ ಆನಿ ಇದ್ಯಾವ ಊರ ಆನಿ
ಬಿಜಾಪೂರ ಆನಿ ಇಲ್ಲಿಗ್ಯಾಕ ಬಂತು
ಹಾದಿ ತಪ್ಪಿ ಬಂತು ಹಾದಿಗೊಂದುಡ್ಡು
ಬೀದಿಗೊಂದುಡ್ಡು ಸೇರಿಕೊಬ್ರಿ ತಂದು
ಲಟ ಲಟ ಮುರಿದು ಹುಡುಗರ ಕೈಯಿಗೆ ಕೊಟ್ಟು

ಮಳೆಬಾರದೆ ಬರಗಾಲ ಬಿದ್ದಂತ ಸಂದರ್ಭದಲ್ಲಿ ಹುಟ್ಟಿಕೊಂಡ ಈ ಹಾಡುಗಳು ಮಕ್ಕಳ ಕೈ-ಕೈ ಹಿಡಿದುಕೊಂಡು ಎದುರು-ಬದಲು ಹಾಡುವಂತಹ ಹಾಡು ಇದಾಗಿದೆ.

ರತ್ತೋ ರತ್ತೋ ರಾಯನ ಮಗಳೇ
ಬಿತ್ತೋ ಬಿತ್ತೋ ಭೀಮನ ಮಗಳ
ಹದಿನಾರೆಂಟ ಕಾಸಲಾರೆ ಕುಡಿಯಲಾರೆ
ಬೈಟ್ಕಂಬ ಬಾಳೆಕಂಬ ಕುಕ್ಕನೆ ಕುತ್ಕು
ಕೊರೋ ಬಸವಿ ಎಂದು ಹೆಣ್ಣು ಮಕ್ಕಳು ಹಾಡುವರು

ಇದನ್ನು ಆಟದ ಜೊತೆ-ಜೊತೆಗೆ ಹಾಡುವುದು. ಈಗಲೂ ಕಡಲಬಾಳು ಗ್ರಾಮದಲ್ಲಿ ಜೀವಂತವಾಗಿವೆ.

**ಕೋಲಾಟದ ಹಾಡು**

ಗಂಧದ ಹೊಯಿಕೊಂಡ ನಂದಿನ ಏರಿಕೊಂಡು
ಹೆಂಡಿರಿಬ್ಬರ ಸ್ವಾವ್ಯಡಗೊಂಡು ಚೆನ್ನಯ್ಯಾ
ಗಂಧದೋಕುಳಿಗೆಂದ ಹೊರಟಾನೆ॥
ಬೇಲೂರು ಚನ್ನಯ್ಯ ತೀರೆಂಟು ದಿನದಾಗ
ಬೀರೋರಿಗೆ ಮಾಲೆ ಬರದಾರೆ ಕೋಲ
ಬೀರೋರಿಗೆ ವಾಲೆ ಏನಂತ ಬರದರು
ದೂರಲ ಪರುಸ ಬರುಲೆಂದು ಕೋಲು॥

**ನಾಗರ ಪಂಚಮಿಯ ಹಾಡು**

ನಾಗಪ್ಪಗ ಹಾಲ ಹೂಯ್ಯೋಣ
ನಾಗರ ಹೆಡಿಯ್ಹಂಗ ಆಡೋಣ
ನಾಗರ ಪಂಚಮಿ ನಾಡ ಹೆಣ್ಣಿನ ಹಬ್ಬ
ನಾಗಪ್ಪಗೆ ಹಾಲ ಎರಿಯೋಣ ನನಗೆಣಲೆ
ನಾಗರ ಹೆಡಿಯ್ಹಾಂಗ ಆಡೋಣ ॥
ಚಂದ್ರಕಾಳಿಯ ಸೀರೆ ಸಿರಿ ಚಂದ್ರ ಕುಪ್ಪಳಿಸ ತೊಟ್ಟ
ಬಂದ ಹಬ್ಬದಾಗ ನಲಿಯೋಣ । ನಕ್ಕಾಡಿ
ಬಂದಾಗಿ ಇದ್ದ ಆಗಲೋಣ
ಗಂಡನ ಮನಿಯಾಗ ಕಂಡ ಬಾಳುವೆ ಹಾಡಿ
ಎಂದು ಬಿಡ್ಯಾಡಿ ಆಡೋಣ ಮನೆಮಾತ
ಹಿಂಡಿನಾಗಾಡಿ ಮರೆಯೋಣ

**ಬೀಸುವ ಹಾಡು :** ಯಂತ್ರ ಜಗತ್ತಿನ ದಾಳಿಯಿಂದಾಗಿ ಬೀಸುವ ಕುಟ್ಟುವ ಕೆಲಸ ಕಡಿಮೆಯಾಗ ತೊಡಗಿದೆ. ಅದರ ಜೊತೆಗೆ ಬೀಸುವ ಕುಟ್ಟುವ ಹಾಡುಗಳೂ ಸಹ ಮರೆಯಾಗತೊಡಗಿವೆ. ಬೀಸುವ ಕಾಳು ಮುಗಿದರೂ ಹಾಡು ಇನ್ನು ಉಳಿಯುತ್ತವೆ.

ಕುಟ್ಟ ಬೀಸುವ ಹಾಡು ಯಾವಾರಿ ಕಲಿಕ್ಯಾಳ
ಕೃಷ್ಣನ ತಂಗಿ ಸುಭದ್ರ ಕಲಿಸ್ಯಾಳ

ಕೃಷ್ಣನ ಪದಗೊಳ
ಸುಮ್ಮನೆ ಬೀಸಿದರೆ ಬೀಳುದು ಈ ಕಲ್ಲು
ನಾಗಸೂರದಂತೆ ದನಿಯತ್ತಿ । ಹಾಡಿದರ
ಗಮ್ಮನೆ ಬೀಳುವುದು ಈ ಕಲ್ಲು
ರಾಗಿಯ ಕಲ್ಲಿಗಿ ರಾಜ್ಯವ ತಿರುಗ್ಯಾರ
ರಾಯ ಸಂಪನ್ನರ ಮಗಳಿಗೆ । ನಿಲುಮಗೆ
ರಾಜ್ಯ ತಿರುಗ್ಯಾರ ಬಸವಯ್ಯ
ಕಲ್ಲಮ್ಮ ಮಾತಾಯಿ ಮಲ್ಲಮ್ಮ ರಾಗಿಯ
ಜಲ್ಲ ಜಲ್ಲೇನೆ ಉದರಮ್ಮ । ನಾ ನಿನಗೆ
ನೆಲ್ಲಕ್ಕ ಪಡಿಯ ನಡೆಸೀನು
ಕಲ್ಲವ್ವ ಮಾತಾಯಿ ಮಲ್ಲವ್ವ ರಾಜನವ
ಜಲ್ಲ ಜಲ್ಲನೇ ಉದುರವ್ವ ನಾ ನಿನಗೆ
ಬೆಲ್ಲದಾರತಿಯ ಬೆಳಗೇನು।

**ಆರತಿ ಬೆಳಗುವಾಗ**

ಬೆಳಗಿರಿ ಆರತಿ ಬೆಳಗಿರಿ ಆರತಿಯ
ಚಿನ್ನಿ ರೂಪಿಗೆ ಚಿನ್ನಾದರತಿ ಎತ್ತಿ
ಆಲದ ಎಲೆ ಲೋಲನ್ನಾಡುವ ಬಂತು
ಎತ್ತಿದಳಾರತಿಯ ಎತ್ತಿದಳಾರತಿಯ
ಆರತಿ ಎತ್ತಿರೆ ವರ ಜನ ಮುಖಿ
ಶ್ರೀರಾಮ ಚಂದ್ರನಿಗೆ ಬಲರಾಮ ಕೃಷ್ಣನು
ಮನೆಗೆ ಬಂದರು ಬಾಗಿಲು ತೆರೆಯಿರಿ
ಎತ್ತಿದಳಾರತಿಯ ಎತ್ತಿದಳಾರತಿಯ

**ಕಂಕಣ ಕಟ್ಟುವಾಗ**

ಬಂದಳೆ ಕರಿಯ ಎಳೆ ಬಂದಳ ಬಿಳಿಯ ಎಳೆ
ಬಂದಳೆ ತೆಗೆದು ರತನಾಡಿ । ಗುರುಗಳು
ಹರಸಿ ಕಂಕಣ ಧರಿಸಿದರು
ಆರೇಳ ಕರಿಯ ಎಳೆ ಆರೆಳೆ ಬಿಳಿಯ ಎಳೆ

ಆರೇಳ ತೆಗೆದು ರತನಾಡಿ । ಗುರುಗಳು
ಹರಸಿ ಕಂಕಣ ಧರಿಸಿದರು
ಒಂಭತ್ತೇಳು ಕಲಿಯ ಎಳೆ ಒಂಭತ್ತೇಳು ಬಿಳಿಯ ಎಳೆ
ಒಂಭತ್ತೇಳು ತೆಗೆದು ರತನಾಡಿ । ಗುರುಗಳು
ಹರಸಿ ಕಂಕಣ ಧರಿಸಿದರು

**ಗೌರಿಹಬ್ಬದ ಹಾಡು**

ಗೌರಿ ಹಬ್ಬಕ್ಕ ಅವರೆಲ್ಲ ಬಂದವರೆ
ಗಂಧ ಚಂದಿರವ ಹಿಡಿದಿದ್ಲು ತಂಗ್ಯಾವ್ವ
ಮುತ್ತೈದೆ ಬಳೆಯ ತೊಡತಿದ್ಲು
ಅಚ್ಚ ನೀಲಿಯ ಬಳೆಯ ಹೆಚ್ಚಾಗಿ ತೊಟ್ಟ
ನಿಮ್ಮ ಹೆತ್ತಮಗ ಹೋಗಿ ಶರಣನ್ನೆ । ತಂಗ್ಯಾವ್ವ
ನಿನ್ನ ಮುತ್ತೈದೆ ಸ್ಥಾನ ಘನವಾಗ್ಲಿ ॥

**ಲಾವಣಿ ಪದ**

ಗುರು ಅಲಕ್ ನಿರಂಜನ್ ನಿರವಲಯ ಇಗುಣಿ
ನಿಷ್ಕಾಲನೆನುತೆಲ್ಲಾ ।
ಪದಿ ಪದಿ ಯೋಗಾಭ್ಯಾಸ ಕರಿಸಿದ ಹರಿಹರಗೆ
ಗುರು ದೊರೆಯರೆಲ್ಲಾ
ಗುರು ದಿಗಂಬರ ಸ್ವರೂಪ ಅಂತೂ ಭವಸಾಗರ
ದಾಂಟಿಪುದ ಬಲ್ಲಾ
ಗುರು ಪರಬ್ರಹ್ಮ ಪರಾತ್ಪರು ಪರಮಾತ್ಮ ಪರಂಪರೆಯನ್ನು
ಯಾಗಿ ಮರೆಯುವನಲ್ಲಾ
ನೋಡು ನೋಡು ಗುರು ಸತ್ಯವೇ ಸಾಗರ
ಆ ಗುರು ನಿತ್ಯಾನ ನಿರಾಕರ

**ಜೋಕುಮಾರನ ಹಾಡು:** ಈ ಹಾಡನ್ನು ಭಾದ್ರಪದ ಮಾಸದಲ್ಲಿ ಮಳೆ ಇಲ್ಲದೆ ಪೈರು ಒಣಗುತ್ತಿರುವಾಗ ಜೋಕುಮಾರನ ಹಬ್ಬವನ್ನು ಆಚರಿಸುವ ರೂಢಿ ಇಂದಿಗೂ ಇದೆ. ಈ ಹಬ್ಬವನ್ನು ಆಚರಣೆ ಮಾಡಿದರೆ ಮಳೆ ಬರುತ್ತದೆ ಎಂಬುದು ಇಲ್ಲಿನ ಜನರ ನಂಬಿಕೆಯಾಗಿದೆ. ಮನೆ ಮನೆಗೆ ಹೋಗಿ ಪೂಜೆ ಸಲ್ಲಿಸಿ ಅವನ ಕಥೆಯನ್ನು ಹಾಡುತ್ತಾರೆ. ಆ ಹಾಡು ಈ ರೀತಿಯಾಗಿದೆ:

ಅಡ್ಡಡ್ಡಾ ಮಳೆ ಬಂದು ದೊಡ್ಡ ದೊಡ್ಡ ಕೆರೆ ತುಂಬಿ
ಗೊಡ್ಡುಗಳೆಲ್ಲಾ ಹೈನಾಗಿ ಜೋಕುಮಾರ । ಗೌಡರ
ಸದ್ದಿಯ ಮ್ಯಾಲೆ ಸಿರಿಬಂದು । ಜೋಕುಮಾರ
ಹಾಸ್ಹಾಸಿ ಮಳೆ ಬಡಿದು ಬೀಸ್ತಿಸಿ ಕರೆತುಂಬ
ಬಾಸಿಂಗ ದಂತಾ ತೆನಿಬಾಗಿ ಜೋಕುಮಾರ । ಗೌಡರ
ರಾಶಿಯ ಮೂಲೆ ಸಿರಿಬಂದ । ಜೋಕುಮಾರ ।

**ಮಳೆರಾಯನ ಹಾಡು** : ಊರಿಗೆ ಮಳೆ ಬಾರದೆ ಬರಗಾಲ ಬಂದು ಜನ, ದನ ಪ್ರಾಣಿ-ಪಕ್ಷಿಗಳಿಗೆ ಸಂಕಷ್ಟವಾದಾಗ ಜನಪದರು ತುಂಬಾ ದೈವಶ್ರದ್ಧೆಯಿಂದ ಮಳೆರಾಯನನ್ನು ಆಹ್ವಾನಿಸುತ್ತಾರೆ. ಬಾಡಿಹೋದ ಬೆಳೆಗಳನ್ನು ಬತ್ತಿ ಹೋದ ಕೆರೆ ಬಾವಿ ನದಿಗಳನ್ನು ಪೋಷಿಸುವ ಅವುಗಳನ್ನು ನಾವು ನಂಬಿದರೆ ನಮ್ಮನ್ನು ಉಳಿಸಿ ಕಾಪಾಡು ಎಂಬ ಮಳೆರಾಯನನ್ನು ಪ್ರಾರ್ಥನೆ ಮಾಡುತ್ತಾರೆ.

ಅನ್ನಕ್ಕೆ ಬಾಯಿ ಬಿಡುತದ
ಕೋಲೆನ್ನಿರೋ ಕೋಲು ಕೋಲ
ಮಾದೇವ ಮಳೆಯ ಕರುಣಿಸೋ ಈ ಲೋಕ
ಅನ್ನಕ್ಕೆ ಬಾಯಿ ಬಿಡತದ
ಕೋಲೆನ್ನಿರೋ ಕೋಲು ಕೋಲ
ಮುಡಿ ಎತ್ತು ಮುದಿ ಆಕಳ ಮುಗಿಲ ನೋಡುತ್ತಾವೆ
ಗ್ಯಾನಣ್ಣ ಮಳೆಯ ಕರುಣಿಸೋ
ಕೋಲೆನ್ನಿರೋ ಕೋಲು ಕೋಲ
ಮಳೆ ಹೋಯ್ತು ಅಂತ ಮಳೆರಾಯನ್ನ ಬೈಬ್ಯಾಡ
ಒಕ್ಕಾಳ ಹೊನ್ನ ಸೆರಗಲ್ಲಿ /ಕಿತ್ಕೊಂಡು
ಸಾಲಕ್ಕ ಹೋಗೆನ್ನ ಮಳೆರಾಯ
ಸ್ವಾಮಿಯ ಮಳೆ ಹೋಯ್ತು ನೀತೆಯ ಕರೆತುಂಬಿ
ಜ್ಯೋತ್ಯಾಡುತ್ತೈತೆ ಕುಣಿಗೋಲು (ಕೆಜ್ಜಿನ ಮೀನು)
ಮುಂಗೈನೋಡಿ ನಗುತ್ತೈತೆ
ಬಂಡೀಲಿ ಹೊಯ ಈನಿಗಿಂಡ ತುಂಬಿಗೆ ತಾರೆ
ನಂಬಿಕೆ ತಾರೆ ಬಲಗೈಯ್ಯಾ । ಮಾಮನ್ಮಗಳೇ
ಭಾಷೆಯ ತಾರೆ ಬಲಗೈಯ್ಯಾ

ಹೀಗೆ ಹಾಡು ಸಾಗುತ್ತಾ ಹೋಗುತ್ತದೆ. ಜನಪದರ ಕಷ್ಟವನ್ನು ನೋಡಿ ಮೊರೆಯ ಆಲಿಸಿ ಕೊನೆಗೆ ಮಳೆರಾಯ ಬಂದ ಸಮುದ್ರದಂತೆ ನದಿಗಳು ಉಕ್ಕೇರುವಂತೆ ಮಾಡಿದ ಘಟನೆಯನ್ನು ಈ ಹಾಡಿನಲ್ಲಿ ಕಾಣಬಹುದು.

**ಕೋಲಾಟದ ಪದಗಳು :** ಗೌರಿಹುಣ್ಣಿಮೆಯ ಸಂದರ್ಭದಲ್ಲಿ ಹಾಗೂ ಸೀಗೆ ಹುಣ್ಣಿಮೆ ಸಂದರ್ಭದಲ್ಲಿ ಕಡಲಬಾಳು ಗ್ರಾಮದ ಕೆಲವರು ಮನೆಯಲ್ಲಿ ಗೌರಮ್ಮ ಸೀಗವ್ವನನ್ನು ಕೂಡಿಸುವ ಪದ್ಧತಿಯೂ ಇದೆ. ಇಲ್ಲಿಗೆ ಹಾಡಲು ಬರುವ ಹೆಂಗಳೆಯರು ಕೋಲಾಟದ ಹಾಡುಗಳನ್ನು ಸಾಮೂಹಿಕವಾಗಿ ಹಾಡುತ್ತಾರೆ. ಗೌರಿಗೆ ಆರತಿ ಮಾಡಿದ ಶಿನೇ ದಿವಸ ಸಾಯಂಕಾಲ ಊರಿನ ಪ್ರಮುಖರೆಲ್ಲ ಸೇರಿಕೊಂಡು ಕೋಲಾಟದ ಹಾಡನ್ನು ಹಾಡುತ್ತಾ ಗೌರಿಯನ್ನು ಕೆರೆಯಲ್ಲಿ ಹೋಗಿ ಬಿಟ್ಟು ಬರುತ್ತಾರೆ.

ಅರಿಷಿಣ ಹಚ್ಚಿತೆ ಅರಿಸಿನ ಗೌರವ್ವಗೆ
ಅರಸ ಮಹಾಲಿಂಗನ ಮಡದಿಗೆ ಕೋಲು ಕೋಲೆ
ಅರಸ ಮಹಾಲಿಂಗನ ಮಡದಿ ಗೌರವ್ವಗೆ
ಅರಿಶಿಣ ಹಚ್ಚಿ ಜನತೆಗೆ ಕೋಲು ಕೋಲು ಕೋಲು
ಶಂಭು ಶಂಕರನ ಮಡದಿ ಗೌರವ್ವಗೆ
ದಂಡೀಯ ಮುಡಿಸ ಜನತೆಗೆ ಕೋಲು ಕೋಲು ಕೋಲು
ಬುಕ್ಕಿಟ್ಟು ಹಾಕೀರೆ ಅಕ್ಕ ಗೌರವ್ವಗೆ
ಸೃಷ್ಟಿಗೀಶ್ವರನ ಮಡದಿಗೆ ಕೋಲು ಕೋಲನ್ನ ಕೋಲೆ
ಮಂತ್ಯಾಂಜನ ಮಡದಿ ಗೌರವ್ವಗೆ
ಕುಪ್ಪಸ ತೊಡಸಿ ಜನತೆಗೆ ಕೋಲು ಕೋಲನ್ನ ಕೋಲೆ
ಇಂತಹ ಇನ್ನು ಅನೇಕ ಹಾಡುಗಳು ಇಲ್ಲಿ ಸಿಗುತ್ತವೆ.

**ಹಂತಿ ಹಾಡು:** ಜೋಳ, ಗೋಧಿ, ತೊಗರೆ ಈ ಭಾಗದಲ್ಲಿ ಹೆಚ್ಚಾಗಿ ಬೆಳೆಯುವುದರಿಂದಾಗಿ ರಾಶಿ ಮಾಡಲು ಹಂತಿಯನ್ನು ಹೊಡೆಯಲೇಬೇಕು. ಇಂತಹ ಸಂದರ್ಭದಲ್ಲಿ ಹಾಡನ್ನು ಹಾಡುತ್ತಾರೆ. ಆಧುನಿಕತೆಯ ಪ್ರಭಾವದಿಂದಾಗಿ ಯಂತ್ರಗಳ ಸಹಾಯದಿಂದ ಕಾಳನ್ನು ಕಡೆಗೆ ತೆಗೆಯುತ್ತಾರೆ. ಆದರೂ ಹಾಡಗಳು ಮಾತ್ರ ಹಾಗೆಯೇ ಉಳಿದಿವೆ.

ಹಬ್ಬಲಿ ಹುಬ್ಬಳ್ಳಿ ಹಟ್ಟಿ ತೊರಸುಳ್ಳ
ತೆಗ್ಗಿ ನಾಗ್ಯೆತೋ ಚಾಂಗದೇವ

ಹುಟ್ಟಿ ನಾಗೈತೋ ಉಳಿನಾಮ
ಮುರುನಾಯ ಮುತ್ತಿನ ಗೋಪಾಳ
ಹೊತ್ತೇರಿ ಬರುವ ಅವರ್ಯಾರೇ। ಆಂಜನೇಯ
ಹಟ್ಟಿನ ಗುಡಿಯ ಚಾಂಗದೇವ

ಜನಪದರು ಹಾಡುವ ಬಹುತೇಕ ಹಾಡುಗಳಲ್ಲಿ ಕಡಲಬಾಳು ಗ್ರಾಮದ ಆಂಜನೇಯ ಸ್ವಾಮಿ ದೈವತ್ವ ಕಾಣಿಸಿಕೊಂಡರೆ, ಮನೆಯಲ್ಲಿ ಹೆಣ್ಣು ಮಕ್ಕಳು ಗಂಡು ಮಕ್ಕಳನ್ನು ಮೊದಲನೆಯ ಮಗುವಿಗೆ ಹನುಮವ್ವ, ಅಂಜಿನವ್ವ, ಹನುಮಂತ, ಅಂಜಿನಿ ಎಂತಲೂ ನಾಮಕರಣ ಮಾಡುವಂತಹ ಸಂಪ್ರದಾಯವನ್ನು ಈಗಲೂ ನೋಡಬಹುದಾಗಿದೆ.

**೫.೩. ಗಾದೆಗಳು**

"ಗಾದೆ ಅತ್ಯಂತ ಪ್ರಾಚೀನವೂ ವಿಶಿಷ್ಟವೂ ಮಹತ್ವವಾಗಿದೆ. ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ಮಾತು ವೇದಕ್ಕೆ ಮಿಗಿಲಾದ್ದು ಎನಿಸುತ್ತದೆ. ಗಾದೆಯು ಜೀವನದ ಅನುಭವ ಸಂಬಂಧವನ್ನು ಹೊಂದಿದೆ." ಒಗಟು ಬುದ್ಧಿ ಪ್ರಧಾನವಾದರೆ ಗಾದೆ ಬುದ್ಧಿ ಭಾವಗಳ ಸಮತೋಲನ. ಗಾದೆಯು ಪಿತ್ರಾರ್ಜಿತ ಆಸ್ತಿಯಾಗಿದ್ದ ಪೀಳಿಗೆಯಿಂದ ಪೀಳಿಗೆಗೆ ಬಳುವಳಿಯೋಪಾದಿಯಲ್ಲಿ ಬರುವುದರಿಂದ ಜನಪದರ ಸಾಮೂಹಿಕ ಸಂಬಂಧಗಳಿಂದಲೇ ಜಗತ್ತಿನಾದ್ಯಾಂತ ಹರಡಿವೆ. ಈ ಸಾಮಾನ್ಯರ ಬಾಳನ್ನು ರೂಪಿಸುವಂತಹ ನಿಯಂತ್ರಿಸುವ ಶಿಕ್ಷಿಸಿ ರಕ್ಷಿಸುವ ದಾರಿ ತೋರಿಸುವ ಕೈ ಹಿಡಿದು ನಡೆಸುವ ವಿಶಿಷ್ಟ ಗುಣವನ್ನು ಒಳಗೊಂಡಿದೆ.

ಜನ ಜೀವನದ ಸಂಸ್ಕೃತಿಯ ಪ್ರತಿಬಿಂಬ. ಮನುಷ್ಯರಿಂದಲೇ ನಿರ್ಮಾಣಗೊಂಡಿರುವ ಇವು ಮನುಷ್ಯನ ಬದುಕನ್ನು ತಿದ್ದುವ, ತೀಡುವ, ರೂಪಿಸುವ, ಸಾಂಸ್ಕೃತಿಕ ಮಾರ್ಗಗಳಾಗಿವೆ. ಗಾದೆ ಜನಸಾಮಾನ್ಯರ ವಿಶ್ವಕೋಶ, ತಾವೇ ನಿರ್ಮಿಸಿಕೊಂಡು ಪಾಲಿಸಿಕೊಂಡು ಬಂದ ಸಂವಿಧಾನ. ಜೀವನ ದರ್ಶನ, ಸೌಂದರ್ಯ, ವ್ಯವಹಾರದ ರೀತಿ ನೀತಿ ಮೊದಲಾದವು ಗಳು ಭಾಷೆಯಲ್ಲಿ ಭಟ್ಟಿ ಇಳಿದಿದೆ. ಸಹಜವಾಗಿ ಮೂಡಿ ಬಂದಿರುವ ಇವುಗಳು ಸರಳವಾಗಿರುವಿಕೆ ಯನ್ನು ಕಾಣುತ್ತೇವೆ.

ಕಡಲಬಾಳು ಗ್ರಾಮದಲ್ಲಿ ಹಳ್ಳಿಯ ವಾತಾವರಣ ಇರುವುದರಿಂದ ಮಾತಿಗೊಮ್ಮೆ ಹೆಚ್ಚಾಗಿ ಗಾದೆಗಳನ್ನು ಬಳಸುವರು. ಹೆಚ್ಚಾಗಿ ಗಾದೆಗಳನ್ನು ಹೇಳುವರು. ಈ ಗಾದೆಗಳನ್ನು ಎಲ್ಲಾ ಸಮುದಾಯ, ಮತ, ಧರ್ಮಗಳವರು ಬಳಸುತ್ತಾರೆ. ಆಡು ಮುಟ್ಟದ ಸೊಪ್ಪಿಲ್ಲ ಗಾದೆಯಿಲ್ಲದ ಭಾಷೆಯಿಲ್ಲ ಎಂದು ಹೇಳುತ್ತಾರೆ. ಗಾದೆ ಎನ್ನುವ ಪದವು ಸಂಸ್ಕೃತದ ಗಾಥಾ ಶಬ್ದದಿಂದ

ಹುಟ್ಟಿರಬಹುದು ಎನ್ನಲಾಗಿದೆ. ಗಾದೆ ಎಂದರೆ ಹಾಡು ಸೂತ್ರ. ಇದನ್ನು ನಾಣ್ಣುಡಿ, ಲೋಕೋಕ್ತಿ, ಸಾಮಾನ್ಯವಾಗಿ ಬೀಳ್ನುಡಿ ಎನ್ನುವರು. ಗಾದೆಗಳ ಅನುಭವ ಜಗತ್ತು ವಿಸ್ತಾರವಾಗಿದೆ. ಇವುಗಳ ಮೂಲಕ ವ್ಯಕ್ತವಾಗುವ ವಿಚಾರ ನೀತಿ ವಿವೇಕವು ಸಹಜತೆ ವಿನೋಧಗಳಿಗೆ ಎಣೆ ಇಲ್ಲ. ಪ್ರಾಚೀನ ಕಾಲದಿಂದ ಇಂದಿನವರೆಗೂ ನೂತನವಾದ ಗಾದೆಗಳು ಸೃಷ್ಟಿಯಾಗುತ್ತಲೇ ಇವೆ. ಅನೇಕ ಕಾಲದಲ್ಲಿ ಅನೇಕ ಕಡೆಯಲ್ಲಿ ಅನುಭವಿಸಿದ ಅನುಭವಗಳನ್ನು ಪ್ರತಿಭಾವಂತ ವ್ಯಕ್ತಿಗಳು ಅವನ್ನು ಗುರುತಿಸಿ ಶಬ್ದದಲ್ಲಿ ಹಿಡಿದಿರುತ್ತಾರೆ.

ಉಳಿದವರು ಅದನ್ನು ಹೇಳಿ ಕೇಳಿ ತಮ್ಮ ಜೀವನದ ಅನುಭವವನ್ನೇ ಪ್ರತಿನಿಧಿಸಿದ್ದಾರೆ. ಬಹುಕಾಲ ಜೀವಂತವಾಗಿ ಉಳಿಯುವುದು ಇಲ್ಲವೇ ಮುಗ್ಗರಿಸಿ ಸಾಯುವುದಾಗಿದೆ. ಬಾಯಿಂದ ಬಾಯಿಗೆ ಬರುತ್ತಿರುವ ಗಾದೆಗಳಲ್ಲಿ ಮಾನವನ ಅತ್ಯುತ್ತಮ ಅನುಭವಗಳನ್ನು ದಾಖಲಿಸಲಾಗಿದೆ. ಜೀವನದ ಸಾರವನ್ನು ಒಳಗೊಂಡ ರಸಗುಟ್ಟುಗಳಾಗಿವೆ. ಗಾದೆಗಳು ಬದುಕಿನ ಎಲ್ಲಾ ವಿಷಯಗಳಲ್ಲೂ ಇವೆ. ಚಿಕ್ಕದರಲ್ಲಿ ದೊಡ್ಡದನ್ನು ಕಾಣಲು ಮಹಾ ಸಾಹಸವನ್ನು ಮಾಡುತ್ತೇವೆ. ಜನಸಾಮಾನ್ಯರ ಬದುಕಿನದಾಗಿರಬಹುದು. ಇತಿಹಾಸ ಪುರಾಣ, ಐತಿಹ್ಯ ಮುಂತಾದವುಗಳಲ್ಲಿ ಕಾಣುವ ವಿರಾಟ ಇದಾಗಿದೆ. ಒಂದು ಪ್ರದೇಶದ ಗ್ರಾಮದ ಸ್ಥಿತಿ ಜೀವನ ಅಲ್ಲಿನ ಗಾದೆಗಳ ಮೂಲಕ ಬಯಲಾಗುತ್ತವೆ.

ಗಾದೆಗಳು ಬದುಕಿನ ಎಲ್ಲಾ ವಿಷಯಗಳಲ್ಲಿ ಇವೆ. ಗಾದೆ ಇಣುಕು ಹಾಕದೇ ಇರುವ ವಿಷಯವಿಲ್ಲ. ಮಾನವನ ವೈಚಾರಿಕ, ಭಾವನಾತ್ಮಕ ನೆಲೆಯಲ್ಲಿ ರೂಪುಗೊಂಡ ಜೀವಾನುಭವದ ಗಟ್ಟಿಯಾಗಿದೆ. ಗಾದೆಯನ್ನು ಕಂಠಪಾಠ ಮಾಡುವಂತಿಲ್ಲ. ಅದೇ ಸಂದರ್ಭಕ್ಕೆ ತಕ್ಕಂತೆ ಅನುಸಾರವಾಗಿಯೇ ಬರುತ್ತದೆ. ತಮ್ಮ ಪ್ರಭಾವ ಬೀರಿ ಅವನ ಬುದ್ಧಿಯನ್ನು ತಿದ್ದುತ್ತವೆ. ಹಾಗೆಯೇ ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ಗಾದೆ ಮಾತು ನಮ್ಮಲ್ಲಿ ಅಚ್ಚಳಿಯದೆ ಉಳಿದಿದೆ. ಹಾಗೆಯೇ ಉಳಿದಿದೆ.

ರಾಮ ರಾಜ್ಯ ಬಂದ್ರು ರಾಗಿ ಬಿಸೋದು ತಪ್ಪೀತೆ?
ಕುಂತ ಕುಣಿಗಲ್‌ಗೆದ್ದ ನಿಂತ್ ಮಾಗಡಿ ಗೆದ್ದ

ಪ್ರತಿಯೊಂದು ವರ್ಗದ ಗುಣ ಸ್ವಭಾವವನ್ನು ಎದುರಿಸುವ ಹಿನ್ನೆಲೆಯಲ್ಲಿಯೇ ಗಾದೆಗಳು ಸೃಷ್ಟಿಯಾಗಿವೆ. ಮಾತಿಗೆ ತಪ್ಪಾನ ಮಾದಿಗ, ಹೊಲಸು ತಿನ್ನುವವನು ಹೊಲೆಯ, ಒಕ್ಕಲಗಿತ್ತಿಗೆ ಮಡಿಯಲ್ಲಿ ಹುಳ್ಳ ಹೊಲಕ ಗೊಬ್ಬರ ಇಲ್ಲ. ಕುರುಬ ಕೂಡಿ ಕೆಟ್ಟ ದೊಂಬ ಅಗಲಿಕೊಟ್ಟ. ಸಮಾಜದ ನೈತಿಕತೆಗೆ ಬದ್ಧವಾಗಿ ನಡೆಯಬೇಕೆಂದು ತಿಳಿಸುವಂತಹ ಗಾದೆಗಳು ಇವಾಗಿವೆ.

ಜ್ಯೋತಿ ಇಲ್ಲದ ಮನೇಲಿ ನೀತಿ ಇಲ್ಲ. ಕೈ, ಬಾಯಿ, ಕಚ್ಚೆ ಮೂರು ಭದ್ರವಾಗಿದ್ದರೆ, ಮೂರು ಲೋಕದಲ್ಲಿ ಸೈ ಏನಿಸಿಕೊಳ್ಳಬಹುದಾಗಿದೆ. ತಾಯಿ ಇರೋತನಕ ತವರು ಪ್ರಾಯ ಇರೋತನಕ ಪೊಗರು ಉಪ್ಪು ತಿಂದೋನು ನೀರು ಕುಡಿಯಬೇಕು. ಇಂತಹ ರೀತಿಯ ವೈವಿದ್ಯಮಯ ಗಾದೆ ಮಾತುಗಳು ಇಲ್ಲಿ ಸಿಗುತ್ತವೆ. ನುಗ್ಗೆ ಮುರುದು ಸಾಕ್ಬೇಕು ಮಕ್ಕಳ ಹೊಡೆದು ಸಾಕಬೇಕು. ನುಗ್ಗೆ ಮರ ಮುರಿದಷ್ಟು ಚೆನ್ನಾಗಿ ಬೆಳೆಯುತ್ತದೆ. ಆಗ ಕವಲುಗಳು ಒಡೆದು ಸೊಪ್ಪು ಹುಲುಸಾಗಿ ಬೆಳೆಯುತ್ತದೆ. ತಿನ್ನಲು ಯೋಗ್ಯ. ಮಕ್ಕಳನ್ನು ಹೊಡೆದು ಬಡಿದು ತಪ್ಪು ಮಾಡಿದಾಗ ತಿದ್ದಿ ತಿಳಿ ಹೇಳಿ ಬೆಳೆಸಿದರೆ ಮುಂದೆ ಒಳ್ಳೆಯ ಮಕ್ಕಳಾಗುತ್ತಾರೆ. ಬೈದು ಹೇಳೂರು ಬದ್ಕಕ ಹೇಳುತ್ತಾರೆ ಎನ್ನುವ ಗಾದೆ ಇದಕ್ಕೆ ಸರಿ ಸಾಟಿ ಯಾವುದು ಇಲ್ಲ.

ತಾಯಿಯಂತೆ ಮಗಳು ನೂಲಿನಂತೆ ಸೀರೆ. ಕೆಲವು ಗಾದೆಗಳು ಎಚ್ಚರಿಕೆಯ ಮಾತು ಗಳಾಗಿವೆ. ಮೀಸೆ ಬಂದವನಿಗೆ ದೇಶ ಕಾಣಲ್ಲ. ಹಿರೇಅಕ್ಕನ ಚಾಳಿ ಮನೆ ಮಂದಿಗೆಲ್ಲ ಎಂಬ ಗಾದೆಗಳು ಉಪಯುಕ್ತ ಮಾರ್ಗದರ್ಶಕ ಸೂತ್ರಗಳಾಗಿವೆ. ಹೆಣ್ಣುಮಕ್ಕಳ ಬುದ್ದಿಮಣ ಕಾಲ ಕೆಳಗೆ, ಮೀನಿನ ಹೆಜ್ಜೆ ಹೆಣ್ಣುಮಕ್ಕಳ ಮನಸ್ಸು ಅರ್ಥ ಮಾಡಿಕೊಳ್ಳೋಕ ಆಗಲ್ಲ. ಹೆಣ್ಣಿನ ಮನಸ್ಸಿಗೆ ಬುದ್ದಿಗೆ ಸಂಬಂಧಿಸಿದ ಗಾದೆಗಳು ವಿರಳವಾಗಿವೆ. ಅದೇ ರೀತಿಯಾಗಿ ಗಂಡಸಿನ ಗುಣ ಸ್ವಭಾವಗಳನ್ನು ಬಿಂಬಿಸುವ ನೆಲಕ್ಕೆ ಬಿದ್ರು ಮೀಸೆ ಮಣ್ಣಾಗಲಿಲ್ಲ, ಸಾವಿರ ಕುದುರೆಯ ಸರದಾರ ಮನೆ ಹೆಂಡ್ತಿಗೆ ಪಿಂಜಾರ ಎಂಬ ಅನೇಕ ಗಾದೆಗಳು ಪ್ರಚಲಿತದಲ್ಲಿವೆ. ಹರಕೆಯ ಮರದಲ್ಲೇ ಜೇನಿತೊಟ್ಟು ಗಾದೆ ರೂಪಾಲಂಕಾರದಿಂದ ಕೂಡಿದೆ. ಅದಕ್ಕೆ ಗಾದೆಗಳೆ ಪ್ರಾಮುಖ್ಯತೆ ಪ್ರಮುಖವಾಗಿದೆ.

ಯಾವುದೇ ರೀತಿಯ ಅಲಂಕಾರ ಇಲ್ಲದೆ ಸಹಜೋಕ್ತಿ ಗಾದೆಗಳಿವೆ. ಆಳುನೋಡಿ ಅನ್ನ ಇಕ್ಕು ಪಾತ್ರೆ ನೋಡಿ ಭಿಕ್ಷೆ ಬೇಡು/ಹಾಕು. ಬಸುರಿ ಕೈಲಿ ತೆಲೆನೋಡಿಸಬೇಕು, ಬಾಣಂತಿ ಜೊತೆ ನೀರು ತರೋಕೆ ಹೋಗಬೇಕು. ಈ ಗಾದೆಗಳು ಸಹಜವಾಗಿವೆ. ಪೌರಾಣಿಕವಾದಂತಹ ಗಾದೆಯನ್ನು ಸಹ ನಾವು ನೋಡಬಹುದಾಗಿದೆ. 'ಹೀರೇಕಾಯಿ ಹಾಕಿದ್ರೆ ಸೋರೆ ಕಾಯಿ ಬಂದದೇ' ಈ ಗಾದೆಯು ನಾವು ಮಾಡಿದುದರ ಪ್ರತಿಫಲ ನಮಗೆ ಸಿಗುತ್ತದೆ ಎನ್ನುವುದು ತಿಳಿಸುತ್ತೆ. ಹೀರೇ ಕಾಯಿ ಬೀಜಾ ಹಾಕಿದರೆ ಸೋರೇ ಕಾಯಿ ಬಿಡುತ್ತೆ ಯಾವ ಬೀಜ ಹಾಕುತ್ತೇವೆ ಆ ಫಲಗಳನ್ನು ಮರಬಳ್ಳಿಗಳು ಬಿಡುತ್ತವೆ. ನಾವು ಒಳ್ಳೆಯ ಕೆಲಸ ಮಾಡಿದರೆ ಒಳ್ಳೆಯದೆ ಸಿಗುತ್ತೆ. ವ್ಯತಿರಿಕ್ತವಾಗಿ ಕೆಟ್ಟದಾಗಿ ನಡೆದುಕೊಂಡರೆ ನಮಗೆ ಕೊನೆಗೆ ಸಿಗುವುದು ಕಷ್ಟವಾಗಿರುವುದು ಎಂಬುದು ಈ ಗಾದೆಯ ತಾತ್ಪರ್ಯವಾಗಿದೆ. ಗೌರಿ ಬತಗಡ್ಲೆ ಮುಳುಗಬೇಕು ಮಾರ್ಲಮಿ ಒತ್ತೆ ಮಾರುದ್ದ ಬರಬೇಕು.

ಜನಪದರು ಕೃಷಿಯಲ್ಲಿನ ತಮ್ಮ ಬೆಳೆಗಳು ಯಾವ ಯಾವ ಹಬ್ಬಕ್ಕೆ ಯಾವ ಹಂತಕ್ಕೆ ಬಂದಿರುತ್ತವೆ ಎನ್ನುವುದನ್ನು ಈ ಗಾದೆಗಳು ಧ್ವನಿಸುತ್ತವೆ. ಈ ಪ್ರದೇಶದಲ್ಲಿ ಜುಲೈ ಮತ್ತು ಆಗಸ್ಟ್ ತಿಂಗಳಲ್ಲಿ ಬಿತ್ತನೆ ಮುಗಿಸಿ ಗೌರಿಹಬ್ಬದ ಗಡಿಗೆ ಮುಳುಗುವಷ್ಟು ಉದ್ದ ಬೆಳೆ ಬೆಳೆದು ಬಿಡುತ್ತವೆ ಎಂದು ಕೃಷಿಕರ ಕಲ್ಪನೆ/ಲೆಕ್ಕಾಚಾರ. ಗೌರಿಹಬ್ಬದ ಹೊತ್ತಿಗೆ ತಮ್ಮ ಹೊಲದಲ್ಲಿ ಎಲ್ಲೆಲ್ಲೂ ಹಸಿರು ತುಂಬಿರುತ್ತದೆ. 'ಹಣ್ಣಿರೋ ಮರಕ್ಕೆ ಕಲ್ಲು ಹೆಣ್ಣಿರೋ ಮನೆಗೆ ದೂರು' ಇಲ್ಲಿ ಯಾವ ತಪ್ಪು ಇಲ್ಲದೆ ಅಪವಾದ ಹೊತ್ತುಕೊಳ್ಳುವಂತಹ ಸಂದರ್ಭ ಇಂದಿನ ಸಮಾಜದಲ್ಲಿ ಸಾಮಾನ್ಯವಾಗಿ ಬಿಟ್ಟಿದೆ. 'ಅಣ್ಣೆ ಸೊಪ್ಪು ಕೊಯ್ಯೋಕು ಪುಣ್ಯೇವಿರಬೇಕು' ಒಳ್ಳೆಯ ಎಳೆಸಾದ ಅಣ್ಣೆ ಸೊಪ್ಪು ಹುಡುಕಿ ಹುಡುಕಿ ಕುಯ್ಯಬೇಕು. ಎಲ್ಲೆಂದರಲ್ಲಿ ಎಲ್ಲರಿಗೂ ಸಿಗುವುದಿಲ್ಲ. ಅದು ಸಿಗುವುದು ಪುಣ್ಯ ಎಂತಲೂ ಹೇಳಲಾಗಿದೆ.

**೫.೪. ಒಗಟುಗಳು**

"ಜನಪದ ಸಾಹಿತ್ಯದಲ್ಲಿ ಕಥೆ, ಹಾಡು, ಒಗಟು ನಂತರ ಜನಪದ ಒಗಟುಗಳನ್ನು ಸಹ ಕಾಣಬಹುದಾಗಿದೆ. ಜನಾಂಗವೊಂದರ ಪ್ರಾಚೀನತೆ ಮತ್ತು ಸಾಂಸ್ಕೃತಿಕ ಬದುಕಿನ ವಿವಿಧ ಹಂತಗಳ ಅಧ್ಯಯನಕ್ಕೆ ಪೂರಕವಾಗಿ ನಿಲ್ಲಬಹುದಾದಂತಹ ಒಗಟುಗಳ ಅಧ್ಯಯನವೇ ಕುತೂಹಲವಾಗಿದೆ. ಈ ಒಗಟುಗಳಿಂದ ಜನಪದ ಬದುಕಿನ ನೋವು-ನಲಿವುಗಳ ಆಸರ ಬೇಸರಗಳಲ್ಲಿ ಅಷ್ಟು ಅಲ್ಲದೆ ಜೀವನ ತಾತ್ವಿಕ ಚಿಂತನೆಗೆ ಈ ಒಗಟುಗಳು ಮನರಂಜನೆಗಾಗಿ ಪದಗಳ ಮೇಲೆ ನಿರ್ಮಿತವಾದ ಬುದ್ಧಿಯ ಬೆಂಬಲ ವಿಮೋಚನೆಯ ವಿಲಾಸ ಮಿಂಚು ಗುಡುಗುಗಳ ಮಸೆತ. ಜೀವನಾನುಭವ ಅಭಿರುಚಿಗಳನ್ನು ಮೈಗೂಡಿಸಿಕೊಂಡಿರುವ ಭಾವುಕ ಜನತೆಯ ಹೃದಯದಲ್ಲಿ ಮೊದಲೆ ಆಡುಗೀತೆ, ಕಥೆ, ಗಾದೆಗಳು ಹುಟ್ಟಿದ ಮೇಲೆ ಈ ಒಗಟುಗಳು ಹುಟ್ಟಿವೆ."[೩]

ಸಂಕೀರ್ಣ ಪ್ರಕಾರವಾದ ಒಗಟು ಹೆಚ್ಚು ಶ್ರೀಮಂತವಾಗಿವೆ. ಸಂಮೃದ್ಧವಾಗಿಯೂ ಇವೆ. ರಹಸ್ಯವನ್ನು ಭೇದಿಸಿಕೊಂಡು ಅನಂತರ ವೈಚಿತ್ರ್ಯ ವೈವಿಧ್ಯ ಬದುಕಂಗಳದಲ್ಲಿ ಬುಗ್ಗೆಯಾಗಿ ಚಿಮ್ಮಬಲ್ಲದು. ತನ್ನ ಮೂಲ ಗುಣದೊಂದಿಗೆ ಗೀತದ ಭಾವ ಪ್ರಾಧಾನ್ಯತೆ ಕತೆಯ ಕಲ್ಪನಾ ಪ್ರಾಮುಖ್ಯತೆ ಮತ್ತು ಗಾದೆಯ ನೀತಿ ತತ್ವ ಪ್ರಾಧಾನ್ಯತೆಗಳನ್ನು ಹೊಂದಿದೆ. ತಮ್ಮ ಆರ್ಥಿಕ ಮೊರೆಗಳನ್ನು ಬಿಚ್ಚಿಕೊಳ್ಳುವ ಇವುಗಳ ಅಂತರಂಗ ದರ್ಶನವನ್ನು ನಾವು ಕಾಣಬಹುದು. ಇವು ನಿಜಕ್ಕೂ ಬೌದ್ಧಿಕ ಎಚ್ಚರಿಕೆಗೆ ಹಿಡಿದ ಕನ್ನಡಿಗಳಾಗಿವೆ. ಆ ಕಾಲಕ್ಕೆ ಒಗಟುಗಳು ಅಧ್ಯಾತ್ಮ ಚಿಂತನೆಯ ಫಲಗಳಾಗಿದ್ದರಿಂದ ಮಂತ್ರ ಸದೃಸ್ಯವೆನಿಸಿದ್ದವು. ಅನಿಷ್ಟ ನಿವಾರಣೆಗೆ ಕಾಲಾಂತರದಲ್ಲಿ ಮನರಂಜನೆ ವಿನೋದಗಳೇ ಒಗಟಿನ ಬದುಕಿನ ಲಕ್ಷಣವಾಗಿದೆ.

ಸಾವು ಬದುಕಿನ ಗಂಭೀರ ಸ್ಪರ್ಧೆ, ಪಾಂಡಿತ್ಯ ಪ್ರದರ್ಶನ ಕಲ್ಪನ ಶಕ್ತಿಗೆ ಸವಾಲುಗಳಾಗಿಯೂ ಪ್ರಚಲಿತದಲ್ಲಿದ್ದವು. ಪ್ರಸಿದ್ಧವಾದ ಕವಿಗಳು ಅವರು ಹಾಕಿದ ಒಗಟನ್ನು ಬಿಡಿಸಿ, ಒಗಟುಗಳನ್ನು ಬಿಡಿಸಿದವರಿಗೆ ಬಹುಮಾನವಾಗಿ ಹಣ ಐಶ್ವರ್ಯದ ಜೊತೆ ಹೆಣ್ಣುಗಳನ್ನು ಕೊಡಲಾಗುತ್ತಿತ್ತು. ಮನುಷ್ಯ ಸಾಮಾನ್ಯವಾಗಿ ಸುಖ ಸಂತೋಷ ಬಯಸುವ ವ್ಯವಸ್ಥೆಯ ಹಾಸ್ಯ ವಿನೋದ ಮನರಂಜನೆ ಮುಖಾಂತರ ಕೆಲವು ಅಶ್ಲೀಲತೆಯ ರೂಪಕ ಭಾಷೆಯಲ್ಲಿ ಪಾಲುಗೊಂಡಿರಬಹುದು. ಒಗಟಿನ ವಿಶೇಷ ಲಕ್ಷಣವು ಆಗಿದೆ. ಅಭಿವ್ಯಕ್ತ ಪಡಿಸುವ ಪ್ರಾಚೀನತೆ ಮತ್ತು ಸಾಂಸ್ಕೃತಿಕ ಬದುಕಿನ ಘಟ್ಟಗಳ ಅಧ್ಯಾಯ ಪೂರಕವೆ ಬದುಕಿನ ಘಟ್ಟಗಳು. ಈ ಗ್ರಾಮ ಪರಿಸರದಲ್ಲಿ ಇಂತಹ ಮಹತ್ವ ಪೂರ್ಣವಾದ ಒಗಟುಗಳು ಇವೆ. ಮಾನವನ ವಿವಿಧ ಭಾವನೆಗಳು ಅಭಿಪ್ರಾಯಗಳು ವಿವಿಧ ಆಲೋಚನೆಗಳ ಕಲ್ಪನಾತೀತ ಪ್ರಾಚೀನ ವೈಭವಗಳು, ಇಲ್ಲಿನ ಒಗಟುಗಳಲ್ಲಿ ಮಾನವನ ವಿವಿಧ ಭಾವನೆಗಳ ಅಭಿರುಚಿ ಇಲ್ಲಿನ ಜನರ ನಾಲಿಗೆಯ ಮೇಲೆ ನಲಿದಾಡುವುದನ್ನು ಕಾಣಬಹುದಾಗಿದೆ. ವಿಶ್ರಾಂತಿ ಸಮಯದಲ್ಲಿ ಇಂತಹ ಒಗಟುಗಳನ್ನು ಹೇಳುವುದು ಸಹಜ. ಅಟ್ಟದ ಮೇಲೆ ಪುಟ್ಟ ಲಕ್ಷಿ ಕೂತಿದ್ದಾಳೆ(ಕುಂಕುಮ) ಏರಿ ಮೇಲೆ ಎಳ್ಳ ಚಲ್ಲಿದೆ. ಬೆಳ್ಳ ಚಡಿ ನೆಲಕ್ಕೆ ಹೊಡಿ(ಸಿಂಳ) ಅಪ್ಪನ ರೊಕ್ಕಾ ಎಣಿಸಲಾರೆ ಅಮ್ಮನ ಸೀರೆ ಮಡಿಚಲಾರೆ(ನಕ್ಷತ್ರ ಆಕಾಶ) ಅಕ್ಕ ತಂಗಿ ಮನೆಗೆ ಹೋಗಂಗಿಲ್ಲ ತಂಗಿ ಅಕ್ಕನ ಮನಿಗೆ ಹೋಗುತ್ತಾಳೆ(ಸೇರುಪಾವು). ಅಂಕು ಡೊಂಕಿನ ಶಂಖ ಚಕ್ರದ ಬಾವಿ ಇಣಿಕೆ ನೋಡಿದರೆ ಹನಿ ನೀರಿಲ್ಲ(ಕಿವಿ) ನಿನ್ನ ಪರೀನ ಹರಿಲಿ ನಿನ್ನ ದುಬ್ಬ ಕೆರಿಲಿ ಮೂಗ ಮುರಿಲೀ ಎಳ್ಳಕಟ್ಟಿ ಹೀರೇಕಾಯಿ, ಚವಳಿಕಾಯಿ. ಅಲ್ಲಿ ಗಾಳು-ಗಾಳು ಇಲ್ಲಿ ಗುಳು ಗುಳು ಕಲ್ಯಾಣದ ತುಂಬಾ ಮನೆ ಮಂದಿಗೆಲ್ಲ ಒಂದೇ ಕುರಿಡಿ(ಬಚ್ಚಲು) ಹಸಿರು ದಾವಾಖಾನೆ ಕುರಿಗಳಿಗೆ ಕೆಂಪು ಎಣ್ಣೆ(ಕಲ್ಲಂಗಡಿ) ಹೊಳಿ ಹೊಳಿ ಮ್ಯಾಲ ಪಳಿ ಪಳಿಮ್ಯಾಲ ಗಿಳಿ ಗಿಳಿಮ್ಯಾಲ ಅಡ್ಡರಸ್ತೆ ಅಡ್ಡರಸ್ತೆಯಲ್ಲೆ ದೊಡ್ಡ ಹೊಲ ದೊಡ್ಡ ಹೊಲದಲ್ಲಿ ದನಗಳು ಮುಂತಾದವು(ಬಾಯಿ, ತುಟಿ, ಮೂಗು, ಹಣೆ, ತಲೆ, ಹೇನು) ಕಲ್ಲರಳಿ ಹೂವಾಗಿ ಎಲ್ಲರಿಗೂ ಬೇಕಾಗಿ ಸರ್ವರಿಗೂ ಬೆಳಕಾಗಿ(ಸುಣ್ಣ) ಮುಂತಾದವುಗಳನ್ನು ಕಾಣಬಹುದು.

**ಒಗಟುಗಳು**

೧ "ಅಜ್ಜ ಮೈಯಲ್ಲ ಕಜ್ಜ
ಕಚ್ಚಿ ನೋಡಿದರ ಕಹಿ
ಎಣ್ಯಾಗ ಕರಿದರೆ ಸಿಹಿ(ಹಾಗಲಕಾಯಿ)

೨ ಕರ್ರಗಿದೆ ಇದ್ದಲಿ ಅಲ್ಲ
ನೀರಿದೆ ಸಮುದ್ರ ಅಲ್ಲ
ರೆಕ್ಕೆಗಳಿವೆ ಪಕ್ಷಿ ಅಲ್ಲ ತಣ್ಣಿ
ಸಂತ್ಯಾಗ ದೊರಿತೈತಿ
ಸಿಂಬಳಾ ಸುರಿತೈತಿ
ಉಂಡವರಿಗೆ ಶಕ್ತಿ ಕೊಡತೈತಿ (ಬೆಂಡಿಕಾಯಿ)

೩ ನಾವಿಬ್ಬರು ಪ್ರಸಿದ್ಧ ಪ್ರೇಮಿಗಳು
ನಾ ಬಿದ್ದರೆ ಬಿಳತಾ ಎದ್ದರ
ಎಳತಾನ ಸತ್ತರ ಸಾಯತನ (ನೆರಳು)

೪ ಅರಸಬಳ್ಳಿ ಸಾಸಿದ ಬಳ್ಳಿ
ನೀರಾಗಿಟ್ಟರ ನೆಯದ ಬಳ್ಳಿ
ಹೆಚ್ಯಾಕ ಹೋದ್ರ ಚಿಗುರಿದ ಬಳ್ಳಿ (ಕೂದಲು)

೫ ಅಗಸ ಮಾಡದ ಮಡಿ
ಸೂರ್ಯ ಕಾಣದ ನೀರು
ಕುಂಬಾರ ಮಾಡದ ಗಡಿಗೆ (ತೆಂಗಿನ ಕಾಯಿ)

೬ ದಿಗ್ ದಿಗ್ ಬಂತದ ಬಲು ಶಕ್ತಿ ಕೂಡತದ
ದಿನ್ನಿ ಏರತಾರ
ನೀರ ಕಂಡರೆ ಹೆದರಿಕಂತದ (ಉಕ್ಕುವ ಹಾಲು)

೭ ಬಿಟ್ಟ ಮುಖದ ಬಾಲೆ ಬಹಳ ಸುಂದರಳ
ಅಷ್ಟಮಿಯ ಚಂದ್ರನ ಆಕಾರದವಳ
ಮೊದಲ ಅಕ್ಷರ ಹೂ ಕಡೆ ಅಕ್ಷ (ಹುಣಗಡುಬು)

೮ ಹಸರದವಖಾನಿ
ಕೆಂಪ ಡಾಕ್ಟರ್
ಕರಿಗುಳಿಗಿ(ಪಪ್ಪಾಯಿಹಣ್ಣು)

೯ ಗಿಡ್ಡನ ಗಿಡಕ್ಕೆ ಗಿಣಿ ಮುಕುರೀತ(ಮೆಣಸಿನ ಕಾಯಿ)
ಗುಡ್ಡದ ಮೇಲೆ ಗುಡಾರ ಹಾಸಿದ್ದೇನೆ ತಣಿವಲ್ಲದು(ನಾಲಗೆ)
ಬಗ್ಗಿದರೆ ಬಾಯಿಗೆ ಬಡಿಯವುದು(ಮಾಂಗಲ್ಯ)

ತತ್ತರೆ ತೆರೆ ತಾರೆಯ ಎಲೆ ಮುಚ್ಚಳ ತೆರೆದು ನೋಡಿದರು ೩೦೦ಎಲೆ ಸೇವಿಸಿ ಮುಂಜಾನೆ ನಾಲ್ಕು ಕಾಲು ಮಧ್ಯಾಹ್ನ ಎರಡು ಕಾಲು ಸಂಜೆಗೆ ಎಂಟು ಕಾಲು ಊರಿ ನಡೆಯುವ ಪ್ರಾಣಿ ನ್ಯಾಯ-ಬಾಲ್ಯ ಯೌವ್ವನ ವೃದ್ಧಾಪ್ಯ

**ಕೊಂಕು ನುಡಿಗಳು**

೧. ಬೇಸತ್ತು ಬೇರೆ ಆದರೆ ಪಾಲಿಗೆ ಅತ್ತೆ ಬಂದಳು

೨. ಅಪ್ಪನಿಗೆ ಅಪ್ಪ ಅನಲಿಕ್ಕ ಒಪ್ಪತ್ತಿನ ಕೂಲಿ ಬೇಡಿದರು

೩. ಮನೆಗೆ ಬಂದರೆ ಮಜ್ಜಿಗೆ ಕೇಳಿದರೆ ಹಾಲು ಕೊಟ್ರಂತೆ

೪. ತನ್ನ ಸಂಗಡ ಬರಬೇಡ ಎಂದವನಿಗೆ ಮಾವ ನೆತ್ತಿಯ ಮೇಲೆ ಕುತ್ಕೊಳ್ಲಿ ಎಂದು ಕೇಳಿದಂತೆ

೫. ಅಂದ ಅನಿಸಿಕೊ ಚಂದಗೇಡಿ

೬. ಕರೆದು ಹೆಣ್ಣ ಕೊಟ್ಟರೆ ಅಳಿಯನಿಗೆ ಮಲರೋಗ ಬಂದಂತೆ

೭. ಧರ್ಮಕ್ಕೆ ದಟ್ಟಿ ಉಡಿಸಿದರೆ ದಟ್ಟಿ ಒಯ್ದು ಮಳ ಹಾಕಿದಂತೆ

**ಅಡಿ ಟಿಪ್ಪಣಿಗಳು**

೧. ನಿಂಗಪ್ಪ ಎಸ್. ಮುದೇನೂರು, **ಸೊಟೂರು ಗ್ರಾಮದ ಜಾನಪದ ಅಧ್ಯಯನ,** ಪು.೨೦೨

೨. ಪರಮಶಿವಯ್ಯ ಜೀ.ಶಂ., **ಕನ್ನಡ ಜಾನಪದ ಕತೆಗಳು,** ಚೇತನ ಬುಕ್ ಹೌಸ್, ಮೈಸೂರು, ೧೯೮೮

೩. ಇಮ್ರಾಪುರ ಜಿ.ಎಸ್. ಜಾನಪದ ಒಗಟುಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೯, ಪು.೩೧೫

# ಅಧ್ಯಾಯ ಆರು

# ಕಡಲಬಾಳು ಗ್ರಾಮದ ಆಚರಣೆಗಳು

೬.೧. ಜೀವನಾವರ್ತನ ಆಚರಣೆಗಳು
೬.೨. ವಾರ್ಷಿಕಾವರ್ತನ ಆಚರಣೆಗಳು
೬.೩. ನಂಬಿಕೆ, ವಿಧಿ–ನಿಷೇಧಗಳು

# ಅಧ್ಯಾಯ ಆರು

# ಕಡಲಬಾಳು ಗ್ರಾಮದ ಆಚರಣೆಗಳು

**ಪೀಠಿಕೆ**

ಜನಪದ ಬದುಕಿನಲ್ಲಿ ಆಚರಣೆಗಳ ಪಾತ್ರ ಮಹತ್ವದ್ದಾಗಿದೆ. ಕಾರ್ಯ ವಿಧಿಗಳನ್ನು ಆಚರಣೆಗಳು ಒಳಗೊಂಡಿರುತ್ತವೆ. ಜೊತೆಗೆ ನಾಗರಿಕತೆಗಳು ಬೆಳೆಯುವುದಕ್ಕೆ ಹಾಗೂ ಸಾಂಸ್ಕೃತಿಕ ಜೀವನ ಸುಗಮವಾಗುವುದಕ್ಕೆ ಇವುಗಳ ಪಾತ್ರ ಪ್ರಧಾನವಾದುದಾಗಿದೆ. ಜನಪದ ಜೀವನದಲ್ಲಿ ಬಲವಾದ ನಂಬಿಕೆಗಳು, ಸಂಪ್ರದಾಯಗಳು, ನಿರ್ದಿಷ್ಟ ಸ್ವರೂಪ, ವಿನ್ಯಾಸ ಹೊಂದಿರುವ ಆಚರಣೆಗಳು ಬರುತ್ತವೆ. ಆಚರಣೆಗಳು ಸಮಾಜವನ್ನು ನಿಯಂತ್ರಿಸುವ ಮಾರ್ಗಗಳಾಗಿವೆ. ಇವು ವ್ಯಕ್ತಿಯ ಜೀವನದಲ್ಲಿ ಉತ್ತಮವಾದ ಪಾತ್ರ ನಿರ್ವಹಿಸುತ್ತವೆ. "ವ್ಯಕ್ತಿ ಮತ್ತು ಸಮಾಜಕ್ಕೂ ಇರುವ ಸಂಬಂಧಗಳೇ ಆಚರಣೆಗಳು ಎಂದು ಕರೆಯಬಹುದಾಗಿದೆ."[೧]

ಪ್ರಕೃತಿಯಲ್ಲಿನ ಪ್ರತಿಯೊಂದು ಗಿಡಮರ, ಪ್ರಾಣಿ, ಪಕ್ಷಿ, ಸೂರ್ಯಚಂದ್ರ, ನದಿ, ಬೆಟ್ಟ, ಗುಡ್ಡ, ಪರ್ವತ ಹೀಗೆ ಈ ಪ್ರಕೃತಿಯನ್ನು ಯಾವಾಗ ಆರಾಧಿಸಲು ಪ್ರಾರಂಭಿಸಿದನೋ ಅಂದೇ ಆಚರಣೆಗಳು ಹುಟ್ಟಿಕೊಂಡವು ಎಂದು ಹೇಳಬಹುದಾಗಿದೆ. ಇದರ ಮೂಲಕ ಮನುಷ್ಯ ತನ್ನ ಕಲ್ಪನೆಯ ಮೂಲಕ ಪ್ರಕೃತಿಯಲ್ಲಿಯ ಪ್ರತಿಯೊಂದಕ್ಕೂ ಜೀವ ತುಂಬಿದ್ದಾನೆ. ಪ್ರಕೃತಿಯನ್ನು ಆರಾಧಿಸುತ್ತ ಪುರಾಣ, ಕಥೆ, ಅವತಾರ, ರೂಪಗಳನ್ನೆಲ್ಲಾ ಕಟ್ಟಿಕೊಂಡು, ದೇವರನ್ನು ಸೃಷ್ಟಿಸಿದ. ಆ ದೇವರನ್ನು ಹಲವು ಹೆಸರಿನಿಂದ ಪೂಜಿಸಲೂ ಪ್ರಾರಂಭಿಸಿದ. ನಂತರ ದೇವರನ್ನು ಸಂತೃಪ್ತಿಗೊಳಿಸಲು ಪ್ರಾರಂಭಿಸಿದನು. ಹೀಗೆ ಕಡಲಬಾಳು ಗ್ರಾಮದಲ್ಲಿ ಆಚರಿಸಲ್ಪಡುವ ಆಚರಣೆಗಳಿಗೆ ವಾರ್ಷಿಕಾವರ್ತಮಾನದ ಹಾಗೂ ಜೀವನಾವರ್ತನದ ಆಚರಣೆಗಳೆಂದು ಕರೆಯುತ್ತಾರೆ.

ಹಲವಾರು ಸಮುದಾಯಗಳಿರುವ ಕಡಲಬಾಳು ಗ್ರಾಮದ ಆಚರಣೆ, ನಂಬಿಕೆಗಳು ಇಲ್ಲಿನ ಎಲ್ಲಾ ವರ್ಗದ ಜನಪದರ ಬದುಕಿನಲ್ಲಿ ವ್ಯವಹಾರ ನೆಲೆಗಟ್ಟಾಗಿ ನಿಂತಿದೆ. ನಂಬಿಕೆ, ಜನಪದರ ಜ್ಞಾನ. ಜನಪದರ ಜೀವನದಲ್ಲಿ ಪ್ರಧಾನವಾಗಿದೆ.

"ಭಾರತದ ಸಂಸ್ಕೃತಿಯಲ್ಲಿ ಆಚರಣೆ ಮತ್ತು ಸಂಪ್ರದಾಯಗಳು ಸಮಾಜವನ್ನು ಒಂದು ಗೂಡಿಸುವ ಶಕ್ತಿಯನ್ನು ನೀಡುತ್ತವೆ. ಸಂಸ್ಕೃತಿಯನ್ನು ಪೋಷಿಸಿ ನಾಗರಿಕತೆಯನ್ನು ಬಳಸುವಲ್ಲಿ ಮಹತ್ವದ ಪಾತ್ರ ವಹಿಸಿದೆ. ಇವು ವ್ಯಕ್ತಿಯ ಬಾಳಿನ ಅವಿಭಾಜ್ಯ ಸಂಗತಿಗಳಾಗಿ ಅವನ ಬೆನ್ನೆಲುಬಾಗಿವೆ. ನಂಬಿಕೆಯ ಸಿದ್ಧಾಂತ ಆಚರಣೆಯನ್ನು ಮುಂದುವರೆಸಿಕೊಂಡು ಹೋಗುವಂತೆ ಮಾಡುತ್ತದೆ. ಹೀಗೆ ವಿವಿಧ ಸಮುದಾಯಗಳಲ್ಲಿ ಗ್ರಾಮದೇವತೆಗಳ ಜಾತ್ರೆಗಳು ಆಚರಣೆಯ ರೂಪದಲ್ಲಿ ನಡೆಯುತ್ತವೆ. ಆಚರಣೆ ಎಲ್ಲರಿಗೂ ಕಡ್ಡಾಯವಾದರೆ, ಹರಕೆಯನ್ನು ಹರಸಿಕೊಂಡವರು ಮಾತ್ರ ನೆರವೇರಿಸುತ್ತಾರೆ. ಆಚರಣೆ ಸಾಮೂಹಿಕವಾದರೆ ಹರಕೆ ವೈಯಕ್ತಿಕವಾದದ್ದಾಗಿದೆ. ಈ ಕೊಂಡ ಹಾಯುವುದು, ಸಿಡಿ ಆಡುವುದು ಕೊಂಡಕ್ಕೆ ಔಡಲಹಳ್ಳು ಹಾಕುವುದು, ಈಡುಗಾಯಿ ಒಡೆಯುವುದು ಇವೆಲ್ಲ ಹರಕೆ ರೂಪದ ಆಚರಣೆಗಳು. ಇಂತಹ ಆಚರಣೆಗಳು ಐತಿಹಾಸಿಕ ಅಂಶಗಳನ್ನು ಅಭಿನಯಿಸಿ ತೋರುತ್ತವೆ. ಕೆಲವು ಮಾರ್ಗಗಳು ಬದಲಾದರೂ, ಉದ್ದೇಶ ಒಂದೇ. ತತ್ವಗಳಲ್ಲಿ ಆಚರಣೆಗಳ ಬಿರುಕುಗಳು ಇದ್ದೇ ಇರುತ್ತವೆ. ಇದಕ್ಕೆ ಕಾರಣ ಮೂಲ ದರ್ಶನಕ್ಕೆ ಬೇರೆ ಬೇರೆ ಕಾಲಘಟ್ಟಗಳಲ್ಲಿ ಉಂಟಾಗುವ ಸೇರ್ಪಡೆಗಳ ಹೊಸ ಚಾರಿತ್ರಿಕ ಸನ್ನಿವೇಶಗಳು. ಮೂಲದರ್ಶನಕ್ಕೆ ವರ್ತಮಾನವು ಬದಲಾಯಿಸಿಕೊಳ್ಳಲು ಒತ್ತಡ ನೀಡುತ್ತದೆ."[೨]

ಪಂಥವೊಂದರ ದರ್ಶನವು ಪರಿವರ್ತಿತಗೊಂಡರೂ, ಇಂದಿನ ಅತ್ಯಾಧುನಿಕವಾದ ಮೂಢ ನಂಬಿಕೆ ಹಾಗೂ ಧರ್ಮದ ಹೆಸರಿನಲ್ಲಿ ನಡೆಯುವ ಮಡೆಸ್ನಾನದ ಆಚರಣೆಗಳು ಇಂದಿಗೂ ಜೀವಂತ. ಇಂತಹವುಗಳಿಂದ ವೈಜ್ಞಾನಿಕವಾಗಿ ಯಾವುದೇ ರೀತಿಯಾದ ಉಪಯುಕ್ತವಾಗುವುದಿಲ್ಲ. ಇವು ಸಾಮಾನ್ಯ ಜನರಲ್ಲಿ ಆಳವಾಗಿ ಬೇರು ಬಿಟ್ಟಿವೆ. ಅವುಗಳು ಧಾರ್ಮಿಕ ಭಾವನೆಗಳನ್ನು ಉದ್ದೇಶಿಸಿ ಭಕ್ತಿ-ಭಾವನೆಯನ್ನು ಪೋಷಿಸುತ್ತಾ ಬಂದಿವೆ. ಭಾವಾನಾತ್ಮಕ ಸಂಬಂಧ ಗಟ್ಟಿಗೊಳಿಸು ತ್ತವೆ. ಕೇಂದ್ರಿತ ನೆಲೆಗಳಲ್ಲಿ ಮನುಷ್ಯನನ್ನು ಕಟ್ಟಿ ಹಾಕುತ್ತವೆ. ಸಂಪ್ರದಾಯ ಬದ್ಧವಾದ ಸಮುದಾಯ ಶೋಷಣೆ, ದೇವಾಲಯಗಳ ಪ್ರವೇಶ ನಿರಾಕರಣೆ ಮುಂತಾದವು ಸಾಮಾಜಿಕ ಅಸ್ತಿತ್ವದ ಅಲುಗಾಡುವಿಕೆಗೆ ನಾಂದಿಯಾಗಿ ಬಿಡುತ್ತವೆ. ಆಚರಣೆಯಲ್ಲಿ ವೈಯಕ್ತಿಕ, ಕೌಟುಂಬಿಕ, ಸಾಮೂಹಿಕ, ಸಾಮಾಜಿಕ, ಧಾರ್ಮಿಕ ಆಚರಣೆಗಳಿವೆ.

ಅಂದರೆ ವ್ಯಕ್ತಿಗತ ನಂಬಿಕೆಯಿಂದ ನಡೆಯುವ ಆಚರಣೆಗಳಾದ ಮುಡಿ ಕೊಡುವುದು, ಕೊಂಡ ಹಾಯುವುದು, ಸಿಡಿ ಆಡುವುದು ಕುಟುಂಬದವರ ಯೋಗಕ್ಷೇಮ ಮಾಡುವ

ಸಾಮೂಹಿಕ ಆಚರಣೆಗಳು ಮುನಿ ಮಾಡುವುದು, ಪರ ಮಾಡುವುದು, ಹರಕೆಯನ್ನು ಸಹ ಕಟ್ಟಿಸುವುದಾಗಿರುತ್ತವೆ. ನಿತ್ಯ ಜೀವನದಲ್ಲಿ ವ್ಯಕ್ತಿಗಳ ಬದುಕು ಅನೇಕ ಸಂಕ್ರಮಣ ಜೀವನದಲ್ಲಿ ನಡೆಯದಿರುವಂತೆ ಮಾನವ ಎಚ್ಚರಿಕೆ ವಹಿಸುತ್ತಾನೆ. ಇಂತಹ ಕಾಳಜಿಗಳೇ ಅನೇಕ ಆಚರಣೆಗಳ ಹುಟ್ಟುವಿಗೆ ಕಾರಣವಾಗಿವೆ. ಜನಪದರ ಬದುಕು ಹುಟ್ಟಿನಿಂದ ಸಾವಿನವರೆಗೂ ಅನೇಕ ನಂಬಿಕೆಗಳಿಂದ ಕೂಡಿದೆ. ಆಚರಣೆಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನವಾಗಿ ಕಂಡರೂ, ಹೆಚ್ಚಾಗಿ ಸಾಮರಸ್ಯಗಳಿಂದ ಕೂಡಿವೆ. ಕಡಲಬಾಳಿನ ಪರಿಸರದಲ್ಲಿ ಮುಖ್ಯವಾಗಿ ಕೃಷಿಗೆ ಸಂಬಂಧಿಸಿದ ಮಳೆ-ಬೆಳೆ, ಭೂಮಿ, ಹಬ್ಬ, ಜಾತ್ರೆ ಉತ್ಸವಗಳು ರೋಗ-ರುಜಿನ ನಿವಾರಣೆಗೆ ಸಂಬಂಧಿಸಿವೆ.

ಪ್ರತಿಯೊಬ್ಬರ ಜೀವನದಲ್ಲಿ ಆಚರಣೆಗಳ ಪಾತ್ರವು ಮಹತ್ವದ್ದಾಗಿದೆ. ಮತ-ಧರ್ಮಗಳಿಗೆ ವಿಧಿ-ವಿಧಾನಗಳಿಗೆ ಸಂಬಂಧಿಸಿದಂತೆ ನಡೆಸುವ ಕ್ರಿಯೆಗಳನ್ನು ನಾವು ಆಚರಣೆ ಎನ್ನಬಹುದಾಗಿದೆ. ಆಚರಣೆ ಒಂದು ಸಂಸ್ಕಾರ-ಸಂಸ್ಕೃತಿಯ ಪ್ರತೀಕವಾಗಿದೆ.

ವ್ರತ-ನಿಯಮಗಳ ಹೆಸರಿನಲ್ಲಿ ಹಲವು ನೇಮ ಆಚರಿಸುವವರುಂಟು. ಆದರೆ ಅವಾವೂ ನೇಮಗಳಲ್ಲ. ಕಾಯಕದಿಂದ ಬಂದುದನ್ನು ಸಂತೋಷದಿಂದ ಸ್ವೀಕರಿಸಿ, ಭಗವಂತನ ಒಲುಮೆಗೆ ತನು-ಮನ-ಧನಗಳ ಅರ್ಪಣೆಯ ಭಾವ ಮುಖ್ಯವಾಗಿದೆ.

ಮನುಷ್ಯನ ಮನಸ್ಸಾವರಿಸಿದ ಮೂಢ ನಂಬಿಕೆಗಳು, ಅರ್ಥಹೀನ ಸಂಪ್ರದಾಯ ಆಚರಣೆಗಳು ಧರ್ಮದ ಹೆಸರಿನಲ್ಲಿ ಇನ್ನು ನಡೆಯುತ್ತಾ ಬಂದಿವೆ. ಇವು ಸಾಮಾನ್ಯ ಜನರಲ್ಲಿ ರಕ್ತಗತವಾಗಿ ಬಂದು ಆಳವಾಗಿ ಬೇರುಬಿಟ್ಟಿವೆ.

ಧಾರ್ಮಿಕ ಭಾವನೆಯನ್ನು ಉದ್ದೇಶಿಸಿ, ಭಕ್ತಿ ಭಾವವನ್ನು ಪೋಷಿಸಿ, ಧಾರ್ಮಿಕ ವಾತಾವರಣವನ್ನು ನೆಲೆಗೊಳಿಸುವುದೇ ಆಗಿದೆ. ಈ ಆಚರಣೆಗಳಿಂದ ಅವುಗಳ ಅನಿಷ್ಟವಂತಿಕೆಯ ನಿವಾರಕಗಳು ಫಲವಂತಿಕೆಯಂತೆ ಕಂಡರೂ, ಒಮ್ಮೊಮ್ಮೆ ಮಾನವನನ್ನು ದಿಗ್ಮೂಢನನ್ನಾಗಿ ಮಾಡಿವೆ.

ಆಚರಣೆಗಳು ಭಾವನಾತ್ಮಕ ಸಂಬಂಧಗಳನ್ನು ಗಟ್ಟಿಗೊಳಿಸುತ್ತಾ ಮನುಷ್ಯನನ್ನು ಕಟ್ಟಿ ಹಾಕುತ್ತವೆ. ಆಚರಣೆಗಳಿಂದ ಸಂಪ್ರದಾಯ ಬದ್ಧವಾಗಿ ಸಮುದಾಯ ಶೋಷಣೆ, ದೇವಾಲಯಗಳ ಪ್ರವೇಶಿಕೆಗೆ ತೊಡಕು ಮತ್ತು ಸಾಮಾಜಿಕ ಅಸ್ತಿತ್ವದ ಅಲುಗಾಡುವಿಕೆಗೆ ನಾಂದಿಯಾಗಿವೆ.

ನಮ್ಮ ಆಚರಣೆಗಳಲ್ಲಿ ಜೀವಂತಿಕೆಯ ಲಕ್ಷಣಗಳು ಕಂಡುಬರುತ್ತವೆ. ನಿಜ ಆದರೆ ಕೆಲವು ವೇಳೆ ಅವು ಸಮ್ಮತವಾದಂತೆ ಕಂಡುಬರುತ್ತವೆ. ನಾವು ಆಚರಣೆಗಳಲ್ಲಿ ವಿವಿಧ ರೀತಿಯಾದಂತಹ ಪದ್ಧತಿಗಳನ್ನು ಕಾಣುತ್ತೇವೆ.

ಬಹುತೇಕ ಆಚರಣೆಗಳಿಗೆ ಹರಕೆ ಹಾಗು ನಂಬಿಕೆಗಳು ಮೂಲ ಕಾರಣವಾಗಿವೆ. ಹರಕೆ ಆಚರಣೆಯ ಪ್ರಮುಖ ಭಾಗ. ನಂಬಿಕೆ ಹರಕೆಯ ಅಡಿಪಾಯ ತಳಹದಿ. ಒಟ್ಟಿನಲ್ಲಿ ಮಾನವ ನಂಬಿಕೆಯ ಆಧಾರದ ಮೇಲೆ ಹರಕೆಯನ್ನು ಕಟ್ಟುತ್ತಾರೆ.

ಪ್ರತಿ ಗ್ರಾಮದವರು ತಮ್ಮ-ತಮ್ಮ ಗ್ರಾಮ ದೈವಕ್ಕೆ ಹರಕೆಯನ್ನು ಒಪ್ಪಿಸುವುದು ವಾಡಿಕೆ. ಎಲ್ಲಮ್ಮನಿಗೆ ಹರಕೆ ಹೊತ್ತವರು ನಡೆಸಿಕೊಂಡು ಬಂದಿರುವ ಗಂಡನು ಹೆಂಗಸಾಗುವ, ಜೋಗತಿ ಸಂಪ್ರದಾಯ, ತಿರುಪತಿ ತಿಮ್ಮಪ್ಪನಿಗೆ ತಲೆ ಕೂದಲು ಬೋಳಿಸುವುದು.

ಇನ್ನು ಕೆಲವು ಸೇವೆಗಳು ಜನಪದರ ದೇವರುಗಳಿಗೆ ಸಲ್ಲುತ್ತವೆ. ಸಂಪ್ರದಾಯ, ಹಬ್ಬ, ಆಚರಣೆ ಈ ಮೂರಕ್ಕೆ ನಂಬಿಕೆಯೇ ಜೀವಧಾತು. ಆಚರಣೆಗಳು ಬಹುತೇಕ ಧಾರ್ಮಿಕ ಮತ್ತು ದೈವಿಕ ಸಂಬಂಧವನ್ನು ಹೊಂದಿರುತ್ತವೆ.

ಮನುಷ್ಯನ ಜೀವನದಲ್ಲಿ ನಡೆಯದಿರುವಂತೆ ಮಾನವ ಎಚ್ಚರ ವಹಿಸುತ್ತಾನೆ. ಇಂತಹ ಎಚ್ಚರಗಳು ಕಾಳಜಿಗಳೇ ಅನೇಕ ಆಚರಣೆಗಳ ಹುಟ್ಟಿಗೆ ಕಾರಣವಾಗಿವೆ. ಅನೇಕ ಆಚರಣೆಗಳ ಹುಟ್ಟಿಗೆ ಕಾರಣವಾಗಿವೆ. ವ್ಯಕ್ತಿಯ ಬದುಕು ಬಾಲ್ಯದಿಂದ ಮುಪ್ಪಿನವರೆಗೂ ನಂಬಿಕೆಗಳಿವೆ.

ನಮ್ಮ ಭಾರತ ಸಂಸ್ಕೃತಿಯಲ್ಲಿ ಆಚರಣೆಗಳಲ್ಲಿ ಮುಖ್ಯವಾಗಿ ರೋಗನಿವಾರಕ ಆಚರಣೆಗಳು, ಮಳೆ, ಬೆಳೆ ಭೂಮಿಗೆ ಸಂಬಂಧಿಸಿದ ಆಚರಣೆಗಳು, ಹಬ್ಬ, ಜಾತ್ರೆ, ಉತ್ಸವ, ತೇರುಗಳಿಗೆ ಸಂಬಂಧಿಸಿದ ಆಚರಣೆಗಳು ವಿಶಿಷ್ಟವಾಗಿವೆ.

ಮಳೆಯನ್ನೇ ಕುರಿತಂತೆ ಇರುವಂತಹ ಆಚರಣೆಗಳಲ್ಲಿ ರಕ್ತಾರ್ಪಣೆ ಮತ್ತು ಬಲಿಗಳು ಅತ್ಯಂತ ಪ್ರಧಾನ ಪಾತ್ರವಹಿಸುತ್ತಿದ್ದುದನ್ನು ಇಂತಹ ಆಚರಣೆಗಳನ್ನು ಕುರಿತು ತಿಳಿದಾಗ ವಿಸ್ಮಯ ಉಂಟಾಗಿವೆ.

ಮೇಲಿನ ಎಲ್ಲ ರೀತಿಯ ಆಚರಣೆಯ ಒಳನೋಟವನ್ನು ಗಮನಿಸಿದಾಗ ಪ್ರತಿಯೊಂದು ಆಚರಣೆಯ ಉದ್ದೇಶ ಭಿನ್ನವಾಗಿರುತ್ತದೆ. ಮಳೆ ಬೆಳೆಗಾಗಿ ನಡೆಸುವ ಆಚರಣೆಗಳಲ್ಲಿ ಊರುಕೇರಿಯ ಒಳಿತಿಗೆ ಸಂಬಂಧಿಸಿದೆ.

ಪ್ರತಿಯೊಂದು ಆಚರಣೆಯು ಸಾಂಕೇತಿಕವಾದ ಅರ್ಥವನ್ನು ಹೊಂದಿರುತ್ತದೆ. ಸಂಸ್ಕೃತಿ ಭಿನ್ನವಾದರೂ, ಆ ಆಚರಣೆಗಳು ಹಲವಾರು ಕಾರಣಗಳಿಂದ ಬೇಸಿಗೆ ಕಾಲದ ಏಪ್ರಿಲ್ ಹಾಗೂ ಮೇ ತಿಂಗಳಲ್ಲಿ ನೆರವೇರುತ್ತವೆ. ಈ ತಿಂಗಳಲ್ಲಿ ಹಬ್ಬ ಜಾತ್ರೆಗಳಿಗೆ ಪ್ರಶಸ್ತವಾಗಿವೆ.

ಒಂದರ್ಥದಲ್ಲಿ ಆಚರಣೆಗಳು ಎಷ್ಟೇ ಕಠಿಣವಾದರೂ, ಅವುಗಳು ಮಾನಸಿಕ ನೆಮ್ಮದಿಯನ್ನು ಕೊಡುತ್ತವೆ. ಆಚರಣೆಗಳನ್ನು ಮಾಡದೇ ಹೋದರೆ ಮನಸ್ಸಿಗೆ ಏನೋ ಅಸಮಾಧಾನವಾಗುತ್ತದೆ.

ದುಡಿದು ಬೆಂದು ಬಳಲಿ ಹೋದ ಆತ್ಮಗಳಿಗೆ ಆನಂದ, ಸಮಾಧಾನವನ್ನುಂಟು ಮಾಡುವ ಸುಗ್ಗಿಯ ಕಾಲ.

ಪ್ರತಿಯೊಂದು ಸಮುದಾಯಗಳು ತಮ್ಮ ತಮ್ಮ ಕುಲದೈವ, ಗ್ರಾಮದೈವ, ಮನೆದೇವರುಗಳ ಅನೇಕ ಆಚರಣೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಮನುಷ್ಯನಿಗೆ ಮಾನಸಿಕ, ಭೌತಿಕ ಅಗತ್ಯವಾದಂತಹ ಭಾಗಗಳಾಗಿ ಆಚರಣೆಗಳು ಬೆಳೆದುಬಂದಿವೆ.

ಇಂತಹ ವಿಧಿ ಆಚರಣೆಗಳು ಕಾಲದಿಂದ ಕಾಲಕ್ಕೆ, ದೇಶದಿಂದ ದೇಶಕ್ಕೆ ವ್ಯತ್ಯಾಸವಾಗುತ್ತಾ ಹೋಗುತ್ತವೆ. ಮಾನವನ ಜೀವನವನ್ನು ರೂಪಿಸುವಲ್ಲಿ ಬಾಳಿನ ಅವಿಭಾಜ್ಯ ಅಂಗಗಳಾಗಿವೆ. ಸಮಾಜವನ್ನು ಒಂದುಗೂಡಿಸಿವೆ.

ನಾವು ಕೈಗೊಳ್ಳುವಂತಹ ಆಚರಣೆಗಳು ಬದುಕಿನ ಭಾಗವಾಗಿ ಬಿಡಿಸಲಾರದ ಕಗ್ಗಂಟಾಗಿ ಜನರ ಅಶೋತ್ತರಗಳ ಈಡೇರಿಕೆಗೆ ಸಹಾಯಕವಾಗಿವೆ. ಸಾಂಸ್ಕೃತಿಕ ಪರಿಸರದ ಹಿನ್ನೆಲೆಯಲ್ಲಿ ಆಯಾ ಜನರ ಸಂಪ್ರದಾಯಗಳು ಉಗಮಗೊಳ್ಳುತ್ತಿವೆ.

**೬.೧. ಜೀವನಾವರ್ತನ ಆಚರಣೆಗಳು**

"ಜೀವನಾವರ್ತನವು ಮನುಷ್ಯನ ಹುಟ್ಟಿನಿಂದ ತೊಡಗಿ ಸಾವಿನಲ್ಲಿ ಕೂಡಿಕೊಳ್ಳುತ್ತವೆ. ಇವುಗಳ ನಡುವೆ ಅನೇಕ ಸ್ಥಿತ್ಯಂತರದ ಹಂತಗಳಿರುತ್ತವೆ. ಇಂತಹ ಸಂದರ್ಭದಲ್ಲಿ ನಡೆಸುವ ಆಚರಣೆಗಳು ಸ್ಥಿತ್ಯಂತರದ ವಿಧಗಳು ಅಥವಾ ಪರಿವರ್ತನೆಯ ವಿಧಿಗಳೆಂದು ಕರೆಯಬಹುದು."[೩] ಇಂತಹ ವಿಧಿ ಆಚರಣೆಗಳು ಕಾಲದಿಂದ ಕಾಲಕ್ಕೆ ದೇಶದಿಂದ ದೇಶಕ್ಕೆ ವ್ಯತ್ಯಾಸವಾಗುತ್ತಾ ಹೋಗುತ್ತವೆ.

ಮನುಷ್ಯನ ಹುಟ್ಟು ಸಾವುಗಳ ನಡುವೆ ನಡೆಯುವ ಅನೇಕ ಚಟುವಟಿಕೆಗಳಿಗೆ ಧಾರ್ಮಿಕತೆಯೇ ಮೂಲ ಪ್ರೇರಕ ಶಕ್ತಿಯಾಗಿರುತ್ತದೆ. ಧಾರ್ಮಿಕತೆ ಇಲ್ಲದೆ ಯಾವ ಕಾರ್ಯಗಳು ನಡೆಯುವುದಿಲ್ಲ. ಪ್ರತಿ ಸಾಂದರ್ಭಿಕ ಪರಿಸ್ಥಿತಿಯಲ್ಲಿ ಅವನು ಆಚರಿಸುವ ಆಚರಣೆಗಳು ಎಂದು ಕರೆಯಬಹುದು. ಅಂತವುಗಳಲ್ಲಿ ವೈಯಕ್ತಿಕವಾಗಿ, ಕೌಟುಂಬಿಕವಾಗಿ ಇಲ್ಲವೊ ಸಾಮೂಹಿಕವಾಗಿ ಆಚರಣೆಗೆ ಒಳಪಡುತ್ತದೆ. ಗ್ರಾಮ ದೈವಗಳು ಅವರ ಆಚರಣೆಯ ಕೇಂದ್ರತ್ವ ಪಡೆದುಕೊಂಡಿರುವುದು ಸಾಮಾನ್ಯ.

ಊರಿನ ಪ್ರತಿಯೊಂದು ಮನೆಯಲ್ಲಿ, ಸಮುದಾಯಗಳಲ್ಲಿ ಮಂಗಳಕಾರ್ಯ ನಡೆದ ಮೊದಲಿಗೆ ಚಾಂಗದೇವರಿಗೆ ಪೂಜೆ ಸಲ್ಲಿಸಿ ಕಾರ್ಯವನ್ನು ಮುಂದುವರಿಸುತ್ತಾರೆ. ಅಪಾಯ ಹಾಗೂ ಸಂಕಷ್ಟದ ಪರಿಸ್ಥಿತಿಯಲ್ಲಿ ಮಾನವ ದೇವರ ಮೊರೆ ಹೋಗುವುದು ಸಾಮಾನ್ಯವಾಗಿದೆ.

ಆಗ ಅವರು ದೇವರಿಗೆ ಹರಕೆ ಹೊರುತ್ತಾರೆ. ಹರಕೆ ಎಂದರೆ ಅಂದುಕೊಂಡಿದ್ದನ್ನು ತೀರಿಸುವುದು. ಹೊತ್ತ ಹರಕೆಯನ್ನು ಒಳ್ಳೆಯ ಸಂದರ್ಭದಲ್ಲಿ ತೀರಿಸುತ್ತಾರೆ. ಜನನ, ನಾಮಕರಣ, ಜವುಳ ಕಾರ್ಯಕ್ರಮ ಮೈನರೆದಾಗ ವಿವಾಹದ ಸಂದರ್ಭದಲ್ಲಿ ಹಾಗೂ ಮರಣ ಇಂತಹ ಸನ್ನಿವೇಶಗಳು ಹರಕೆಯನ್ನು ತೀರಿಸಲು ಸಹಕಾರಿಯಾಗಿವೆ. ಆದರೆ ಕೆಲವೊಮ್ಮೆ ತನ್ನೂರ ಗ್ರಾಮ ದೈವಗಳಿಗೆ ಮಾಡಿಕೊಂಡ ಹರಕೆ ವಿಫಲವಾದರೆ, ಬೇರೆ ಊರಿನ ಮತ್ತೊಂದು ದೇವತೆಗೆ ಹರಕೆ ಹೋಗುತ್ತಾರೆ. ಉದಾಹರಣೆಗೆ: ಧರ್ಮಸ್ಥಳದ ಮಂಜುನಾಥ, ಮಂತ್ರಾಲಯದ ರಾಘವೇಂದ್ರ ಸ್ವಾಮಿ, ತಿರುಪತಿ ತಿಮ್ಮಪ್ಪ, ಮುನಿರಾಬಾದಿನ ಹುಲಿಗೆಮ್ಮ, ಸವದತ್ತಿಯ ಎಲ್ಲಮ್ಮನಿಗೆ ಹರಕೆ ಹೊರುತ್ತಾರೆ.

ಕಡಲಬಾಳು ಗ್ರಾಮದಲ್ಲಿ ವಿವಿಧ ಸಮುದಾಯದ ಜನರು ವಾಸಿಸುತ್ತಾರೆ. ಅದರಲ್ಲಿ ಬಹುಸಂಖ್ಯಾತರಾಗಿ ವಾಲ್ಮೀಕಿಗಳು, ಮುಸ್ಲಿಂರು ಮಡಿವಾಳರು, ಮಾದಿಗರು, ಲಿಂಗಾಯಿತರು ಇದ್ದಾರೆ. ಹೀಗಾಗಿ ಅನೇಕ ಸಮುದಾಯದ ಅಲ್ಪಸಂಖ್ಯಾತ ಜನರು ತಮ್ಮ ಸಮುದಾಯದ ಅಲ್ಪಸ್ವಲ್ಪ ಆಚರಣೆಗಳನ್ನು ಮಾಡಿಕೊಂಡರೂ ಬಹುತೇಕ ಆಚರಣೆಗಳಲ್ಲಿ ವಾಲ್ಮೀಕಿ, ಲಿಂಗಾಯತ ಸಮುದಾಯದ ಆಚರಣೆಗಳೇ ಕಂಡುಬರುತ್ತವೆ. ಹೀಗಾಗಿ ವಿವಿಧ ಸಮುದಾಯದ ಆಚರಣೆಗಳಲ್ಲಿ ಕಂಡುಬರುವ ವಿಭಿನ್ನತೆಯನ್ನು ಮಾತ್ರ ಇಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

"ವ್ಯಕ್ತಿಯು ಹುಟ್ಟಿನಿಂದ ಸಾವಿನವರೆಗೂ ನಡೆಯುವ ಆಚರಣೆಗಳು ವೈವಿಧ್ಯಮಯದಿಂದಲೇ ಕೂಡಿರುತ್ತವೆ. ಒಂದು ಸಮುದಾಯದ ಜನ ಆಚರಿಸುವ ಆಚರಣೆಗಳು ಒಂದೇ ತೆರನಾಗಿರುತ್ತವೆ. ಕೆಲವು ವೇಳೆ ತಮ್ಮ ಸುತ್ತ ಮುತ್ತಲಿನ ಬಹು ಸಂಖ್ಯಾತ ಸಮುದಾಯದ ಪ್ರಭಾವ ಪಡೆದು ಅಲ್ಪಸ್ವಲ್ಪ ವ್ಯತ್ಯಾಸವಾದರೂ ಅವುಗಳು ತಮ್ಮ ಮೂಲವನ್ನು ಹಾಗೆ ಉಳಿಸಿಕೊಂಡಿವೆ. ಪ್ರತಿ ಸಾಂದರ್ಭಿಕ ಪರಿಸ್ಥಿತಿಯಲ್ಲಿಯೂ ವ್ಯಕ್ತಿಯು ಆಚರಿಸುವ ಆಚರಣೆಗಳಿಗೆ ಜೀವನಾ ವರ್ತನ ಆಚರಣೆ ಎಂದು ಕರೆಯುತ್ತಾರೆ." ಇಲ್ಲಿ ಗ್ರಾಮದ ದೈವದ ಆಚರಣೆಗಳು ಕೇಂದ್ರ ಬಿಂದುವಾಗಿರುವುದು ಸಾಮಾನ್ಯ. ಕಡಲಬಾಳು ಗ್ರಾಮದ ಜನರು ವಿವಿಧ ರೀತಿಯ ಆಚರಣೆಗಳಿಗೆ ಮೂಲ ದೈವವಾಗಿ ಗ್ರಾಮ ದೈವವಾಗಿ ಭಕ್ತಿ ಜನರ ಬದುಕಿನೊಳಗೆ ಆರಾಧನೆ ಮಾಡುತ್ತಾರೆ.

**ಹುಟ್ಟು** : ಕಡಲಬಾಳು ಗ್ರಾಮ ಪರಿಸರದಲ್ಲಿ ಇತ್ತೀಚೆಗೆ ಹೆರಿಗೆಗೆಂದು ಆಸ್ಪತ್ರೆಗೆ ಹೋಗುವುದು ಸಾಮಾನ್ಯವಾಗಿದೆ. ೧೫-೨೦ ವರ್ಷಗಳ ಹಿಂದೆ ಊರಿನಲ್ಲಿ ಇದ್ದ ಅನುಭವಸ್ಥ ಸ್ತ್ರೀಯರು, ಸೂಲಗಿತ್ತಿಯರು ಸುಸೂತ್ರವಾಗಿ ಹೆರಿಗೆಯನ್ನು ಮಾಡಿಸುತ್ತಿದ್ದುಂಟು. ಹೆರಿಗೆಯಾಗುವಾಗ ಹೆರಿಗೆ ನೋವು ಕಾಣಿಸಿಕೊಂಡಂತಹ ಸಂದರ್ಭದಲ್ಲಿ ಬಂಧು ಬಳಗದವರು ಅಕ್ಕ ಪಕ್ಕದ ಮನೆಯವರು ಬಾಣಂತಿಗೆ ಆರೈಕೆಯನ್ನು ಮಾಡಿಕೊಡುತ್ತಾರೆ. ಸೂಲಗಿತ್ತಿಯರು ಬಂದು ಧೈರ್ಯ ಹೇಳುತ್ತಾರೆ.

ಹೆಣ್ಣಾಗಲಿ, ಗಂಡಾಗಲಿ ಮಗು ಹುಟ್ಟಿದ ತಕ್ಷಣ ಎಲ್ಲರ ಬಾಯಿಗೆ ಸಿಹಿ ಹಾಕುತ್ತಾರೆ. ಹೆರಿಗೆಯ ದಿನ ಹತ್ತಿರವಾಗುತ್ತಿದ್ದಂತೆ ಸೂಲಗಿತ್ತಿಯರು ಆ ಸಂದರ್ಭದಲ್ಲಿ ಹತ್ತಿರವಿರಬೇಕು. ಹೆರಿಗೆಯಾದ ನಂತರ ತಾಯಿ ಮತ್ತು ಮಗುವಿನ ಕರುಳಬಳ್ಳಿ ಅಥವಾ ಹೊಕ್ಕುಳಬಳ್ಳಿಯನ್ನು ಬ್ಲೇಡಿನಿಂದ ಕತ್ತರಿಸುತ್ತಾರೆ.

ಮಗುವನ್ನು ತಾಯಿಯಿಂದ ಬೇರ್ಪಡಿಸಿ ಮೊರದಲ್ಲಿ ಬಟ್ಟೆಯನ್ನು ಹಾಸಿ ಬೊಕ್ಕ ಹಾಕುತ್ತಾರೆ. ಹುಟ್ಟಿದ ತಕ್ಷಣ ಮಗುವಿಗೆ ಮೆತ್ತಿಕೊಂಡಿದ್ದ ರಕ್ತ ಎಲ್ಲವನ್ನು ಒರಸಿ, ಮಗು ಉಸಿರಾಡಲು ಅನುವು ಮಾಡುತ್ತಾರೆ. ಕಿವಿ, ಮೂಗು, ಬಾಯಿ ಎಲ್ಲಾ ಸ್ವಚ್ಛಮಾಡಿ ಕಿವಿಯಲ್ಲಿ ಮೆಲ್ಲಗೆ ಊದುತ್ತಾರೆ. ಮತ್ತೆ ನೆತ್ತಿಯ ಮೇಲೆ ಬಾಗಿಸಿ ಕಾಲುಗಳನ್ನು ಸಹ ಮೇಲಕ್ಕೆ ಎತ್ತಿ ಜೋತಾಡಿಸುತ್ತಾರೆ. ಒಂದು ಕಂಚಿನ ತಟ್ಟೆ ಬಡಿದು ಶಬ್ದ ಮಾಡಿ ಮಗು ಹುಟ್ಟಿದ ಸುದ್ದಿಯನ್ನು ತಿಳಿಸುತ್ತಾರೆ. ಸೂಲಗಿತ್ತಿಯರು ಬೆರಳಿನಿಂದ ಜೇನುತುಪ್ಪ ಸವರಿ ಮಗುವಿನ ಬಾಯಿಗೆ ಹಾಕುತ್ತಾರೆ. ಮಗು ಹುಟ್ಟಿದ ಸುದ್ದಿಯನ್ನು ಮಗುವಿನ ತಂದೆಗೆ ತಿಳಿಸುತ್ತಾರೆ. ನಂತರದಲ್ಲಿ ಎಲ್ಲರಿಗೂ ತಿಳಿಸುತ್ತಾರೆ. ಮಗು ತಾಯಿ ಇಬ್ಬರಿಗೂ ಸ್ನಾನ ಮಾಡಿಸಿ, ಚಳಿ ಶೀತ ತಾಗದೆ ಇರುವ ಹಾಗೆ ನೋಡಿಕೊಳ್ಳುತ್ತಾರೆ. ಕಿವಿಗೆ ಹತ್ತಿಯನ್ನು ಹಾಕಿರುತ್ತಾರೆ.

ಮಗುವಿಗೆ ಬೆಚ್ಚನೆಯ ಬಟ್ಟೆಯನ್ನು ಹಾಕಿ ಸೂತಕ ಕಳೆದ ಮೇಲೆ ತೊಟ್ಟಿಲಿಗೆ ಹಾಕುತ್ತಾರೆ. ತಾಯಿ ಮತ್ತು ಮಗು ಬಹಳ ಬಿಸಿಯಾದ ನೀರು ಹಾಕಿ ಸ್ನಾನ ಮಾಡಿಸುತ್ತಾರೆ. ಎಳೆ ಮಕ್ಕಳಿಗೆ ಉಗುರು ಬೆಚ್ಚನೆಯ ನೀರು ಹಾಕಿದ್ರೆ ಶೀತ ಆಗ್ತದ, ಮಕ್ಕಳು ನೀರು ಕುಡಿದ್ರೆ ಕೆಮ್ಮು ಶೀತ ಆಗುವುದು. ಬಿಸಿ–ಬಿಸಿ ನೀರು ಮೈ ಮೇಲೆ ಹಾಕಿದರೆ, ಜಂಪಾಳ ಊದಿದರೆ ಮಕ್ಕಳು ಹಾಲು ಕುಡಿದು ಸುಮ್ಮನೆ ಮಲಗುತ್ತಾರೆ. ಎಳು ದಿನ ಅಥವಾ ಒಂಬತ್ತನೆಯ ದಿನಕ್ಕೆ ಸೂತಕ ತೆಗೆಯುತ್ತಾರೆ. ಮನೆಯ ಕೋಣೆ ಎಲ್ಲಾ ಸಾರಿಸಿ, ಗುಡಿಸಿ ಬೆಳಗಿ ತೊಳೆದು ಮನೆ ದೇವರಿಗೆ ಎಡೆ ಇಟ್ಟು ಸೂತಕವನ್ನು ಕಳೆಯುತ್ತಾರೆ. ಈ ಶಾಸ್ತ್ರವು ಕಡಲಬಾಳು ಗ್ರಾಮದಲ್ಲಿ ಇಂದಿಗೂ ಇದೆ.

ನಾಮಕರಣ : ಕಡಲಬಾಳು ಗ್ರಾಮದ ಜನರು ಹುಟ್ಟಿದಂತಹ ಮಗುವಿಗೆ ಹೆಸರಿಡುವುದನ್ನು ನಾಮಕರಣ ಎನ್ನುತ್ತಾರೆ. ಈ ಹೆಸರಿಡುವ ಶಾಸ್ತ್ರವನ್ನು ಮೂರು ತಿಂಗಳಿಗೂ, ಆರು ತಿಂಗಳಿಗೂ, ಒಂದು ವರ್ಷದ ಒಳಗೆ ಶಾಸ್ತ್ರ ಕೇಳಿ ಒಳ್ಳೆಯ ಶುಭದಿನವನ್ನು ನಿಗದಿಮಾಡಿ ಬಂಧು ಮಿತ್ರರು ಎಲ್ಲರಿಗೂ ತಿಳಿಸಿ ನಾಮಕರಣ ಶಾಸ್ತ್ರವನ್ನು ಮಾಡುತ್ತಾರೆ. ಅಲ್ಲಿಯವರೆಗೆ ತಂದೆ–ತಾಯಿ ತಾತಾ ಹೆಸರಿನಿಂದ ಕರೆಯುತ್ತಾರೆ. ಕೆಲವರು ಪ್ರೀತಿಯಿಂದ ಚಿನ್ನ, ಮುದ್ದು, ರನ್ನ, ಪುಟ್ಟ, ಅಪ್ಪಿ, ಚಿಂಟು, ಪಿಂಕಿ, ಬಂಗಾರು ಹೀಗೆ ಪ್ರೀತಿಯಿಂದ ಕರೆಯುತ್ತಾರೆ. ನಾಮಕರಣವು

ತಂದೆಯ ಮನೆಯಲ್ಲಿ ಆಗಬೇಕು. ಮಕ್ಕಳಿಗೆ ತಂದೆಯ ಮನೆತನದ ಹೆಸರು ಮನೆ ದೇವರ ಹೆಸರು ಒಕ್ಕಲುಗಳ ಹೆಸರಿಡುವುದು ಇಂದಿಗೂ ಉಳಿದು ಕೊಂಡು ಬಂದಿದೆ. ಸಾಮಾನ್ಯವಾಗಿ ಇಲ್ಲಿ ಬಹುಪಾಲು ಜನರು ಆಧುನೀಕರಣದಿಂದಾಗಿ ನಂತರದಲ್ಲಿ ಎರಡು ಹೆಸರು ಇವೆ. ಒಂದು ಹುಟ್ಟು ಹೆಸರು. ಮತ್ತೊಂದು ಅಡ್ಡ ಹೆಸರು. ಹುಟ್ಟು ಹೆಸರೆಂದರೆ ಮನೆತನದ ಮನೆ ದೇವರ ಹೆಸರು ದೇವರ ಪೂಜಾರಿಯವರನ್ನು ಕರೆಸಿ ಮನೆಯ ಹಿರಿಯರ ಊರಿನ ಎಲ್ಲ ಜನರು ಸುಮ್ಮುಖದಲ್ಲಿ ಹೆಸರನ್ನು ಕಟ್ಟುತ್ತಾರೆ. ಇಷ್ಟ ದೈವಗಳಿಗೆ ಪೂಜೆಮಾಡಿ ವಿಭೂತಿ ಧಾರಣೆ ಮಾಡಿ ಮಗುವಿಗೂ ನೆರದಂತಹ ಎಲ್ಲರಿಗೂ ವಿಭೂತಿ ಧಾರಣೆ ಮಾಡಿ ಮಗುವಿನ ಹಣೆಯ ಮೇಲೆ ೩ ಬಾರಿ ವಿಭೂತಿ ಇಟ್ಟು ೩ ಬಾರಿ ಆ ಮಗುವನ್ನಿಟ್ಟು ಹೆಸರನ್ನು ಹೇಳುತ್ತಾರೆ. ಅಲ್ಲಿ ಎಲ್ಲರೂ ಮಗುವಿಗೆ ತಲೆ ಸವರಿ ಆಶೀರ್ವಾದ ಮಾಡುತ್ತಾರೆ.

ಕಡಲಬಾಳು ಗ್ರಾಮದಲ್ಲಿ ದೇವಸ್ಥಾನದಲ್ಲಿ ಹೆಸರು ಕಟ್ಟಿಸುತ್ತಾರೆ. ಕೆಲವರು ಹುಡುಗರು ಬೇಕೆಂದು ಅವರ ಅಡ್ಡ ಹೆಸರನ್ನು ಅವರ ಆಕೃತಿ ಪ್ರಕೃತಿ ನೋಡಿ ಅಡ್ಡ ಹೆಸರನ್ನು ಕರೆಯುತ್ತಾರೆ.

**ಜವುಳ:** ಕಡಲಬಾಳುವಿನಲ್ಲಿ ಗಂಡು ಮಕ್ಕಳಿಗೆ ೫, ೯, ೧೧ನೇ ತಿಂಗಳಲ್ಲಿ ತಲೆ ಕೂದಲು ತೆಗೆಯುವ ಶಾಸ್ತ್ರವನ್ನು ಮಾಡುತ್ತಾರೆ. ಇದನ್ನು ಜವುಳ ಅಥವಾ ಹುಟ್ಟು ಮುಡಿ ತೆಗೆಯುವುದು ಎನ್ನುವರು. ಈ ಜವುಳ ತೆಗೆಯುವ ಕಾರ್ಯಕ್ರಮ ಮನೆಯಲ್ಲಿ ನಡೆಯುತ್ತದೆ.

**ಮುಂಜಿವಿ:** ಈ ಆಚರಣೆ ಹೇಳುವಂತೆ ಗಂಡು ಮಕ್ಕಳಿಗೆ ಬಾಲ್ಯದಲ್ಲಿ ನಡೆಸುವ ಆಚರಣೆಯಾಗಿದೆ. ಬ್ರಾಹ್ಮಣರಿಗೆ ಇದು ಉಪನಯನದ ವಿಧಿಯಾಗಿದೆ. ಮುಂಜಿವಿ ಒಂದು ರೀತಿಯಲ್ಲಿ ಮದುವೆ ಆದಂತೆಯೇ. ತುಂಬ ಅದ್ದೂರಿಯಾಗಿ ಮಾಡುತ್ತಾರೆ.

ಮನೆಯಲ್ಲಿ ಮಗುವಿನ ತಂದೆ–ತಾಯಿಗಳು ತೀರಿದರೆ, ಯಾರಾದರೂ ತೀರಿದರೆ ಕಷ್ಟ ಕೊಡಲು ಮುಂಜಿವಿ ಆದ ಮಗನೇ ಬೇಕು. ಮುಂಜಿವಿ ಮಾಡಿಸಿ ಜನಿವಾರ ಹಾಕುತ್ತಾರೆ. ವೀರಶೈವರಲ್ಲಿ ಮುಖ್ಯ ವಿಧಿಯಾಗಿದೆ. ಇದನ್ನು ಹೆಚ್ಚಾಗಿ ೮ ವರ್ಷದ ನಂತರ ಮಾಡುತ್ತಾರೆ.

ಕೂದಲು ಕತ್ತರಿಸಿಕೊಂಡು ಸ್ನಾನ ಮಾಡಿ 'ಕಾವಿ ಬಟ್ಟೆ' ಧರಿಸಿಕೊಂಡು ಸ್ವಾಮಿಗಳಿಂದ ಲಿಂಗಧಾರಣೆ ಮಾಡಿಸಿ ಕಿವಿಯಲಿ ಪಂಚಾಕ್ಷರಿ ಮಂತ್ರದ ಉಪದೇಶ ನೀಡುತ್ತಾರೆ. ಮದುವೆಯಲ್ಲಿ ಪಾದಪೂಜೆಗೆ ಅರ್ಹರಾಗಿರುತ್ತಾರೆ. ಈ ವಿಧಿಯು ೭ ರಿಂದ ೧೨ ವರ್ಷದವರಿಗೆ ನಡೆಯುತ್ತದೆ.

ದೇವಸ್ಥಾನದಲ್ಲಿ ಕುಲದೇವರಲ್ಲಿ ಅಥವಾ ಹರಕೆ ಹೊತ್ತ ದೇವರ ಸನ್ನಿಧಿಯಲ್ಲಿ ಮಾಡುತ್ತಾರೆ. ಜವುಳ ಕಾರ್ಯವನ್ನು ಸೋದರ ಮಾವನು ಮಾಡಿಸುತ್ತಾನೆ. ಮಗುವನ್ನು ಮೊದಲು ತೊಡೆಯ

ಮೇಲೆ ಕೂಡಿಸಿ ಸೀಳಿದ ವೀಳ್ಯದೆಲೆಯಿಂದ ಐದು ಕಡೆಗೆ ಎಲೆಗತ್ತರಿ ಮಾಡಿ, ನಂತರ ಅದನ್ನು ಕತ್ತರಿಯಿಂದ ೫ ಕಡೆ ಶಾಸ್ತ್ರಕ್ಕೆ ಕತ್ತರಿಸುತ್ತಾರೆ. ನಂತರ ಕ್ಷೌರಿಕರು ತಲೆಯನ್ನು ಬೋಳಿಸುತ್ತಾರೆ. ಮಗುವಿಗೆ ಸ್ನಾನ ಮಾಡಿಸಿ ದೇವರಿಗೆ ಪೂಜೆಯಾದ ನಂತರದಲ್ಲಿ ಬಂಧುಗಳು ಜವುಳ ತೆಗೆಸಿಕೊಂಡು ಮಗುವಿನ ಬಟ್ಟೆ, ಜವುಳ ತೆಗೆದ ಕೂದಲನ್ನು ಬಟ್ಟೆಯಲ್ಲಿ ಕಟ್ಟಿ ದೇವರ ಸನ್ನಿಧಿಯಲ್ಲಿ ಅಥವಾ ನದಿಯಲ್ಲಿ ಬಿಟ್ಟು ಬರುತ್ತಾರೆ. ಈ ಶಾಸ್ತ್ರವನ್ನು ಅತಿ ಹೆಚ್ಚಾಗಿ ತಿರುಪತಿ ತಿಮ್ಮಪ್ಪ, ಹಾಗೆಯೇ ಧರ್ಮಸ್ಥಳದ ಮಂಜುನಾಥನ ದೇವಸ್ಥಾನದಲ್ಲಿ ಕಾಣಬಹುದಾಗಿದೆ.

**ಋತುಮತಿ:** ಋತುಮತಿ ಆಚರಣೆಯೂ ಕಡಲಬಾಳುನಲ್ಲಿ ಕಂಡುಬರುತ್ತದೆ. ಋತುಮತಿಯಾದವಳನ್ನು ಯಾರೂ ಮುಟ್ಟುವಂತಿಲ್ಲ. ಈ ಕಾಲಾವಧಿಯಲ್ಲಿ ಆಕೆಗೆ ವಿಶಿಷ್ಟವಾದ ಆಹಾರ, ಕೆಲವೊಂದು ವಿಧಿ–ನಿಷೇಧಗಳಿರುತ್ತವೆ.

ಮೈನೆರೆದ ಹುಡುಗಿಗೆ ಐದು ದಿನಗಳವರೆಗೆ ಶ್ಯಾವಿಗೆ, ಕೊಬ್ರಿ, ಬೆಲ್ಲ, ತುಪ್ಪ ತಿನ್ನಲು ಕೊಡುತ್ತಾರೆ. ಹಾಗೇ ಸಿಹಿ ತಿನ್ನುವುದರಿಂದ ಕೆಟ್ಟ ರಕ್ತ ಪೂರ್ತಿಯಾಗಿ ಹೊರ ಹೋಗುತ್ತದೆ ಎಂಬ ನಂಬಿಕೆ ಇದೆ. ಮೈನೆರೆದ ಸಮಯ ಚೆನ್ನಾಗಿಲ್ಲದಿದ್ದರೆ ದಾನ ಕೊಡುತ್ತಾರೆ. ಕಾರ್ಯಕ್ರಮದಲ್ಲಿನ ಕೊನೆಯ ದಿನ ಊಟದ ವ್ಯವಸ್ಥೆ ಇದ್ದು, ಅಂದು ಮುಖ್ಯವಾಗಿ ಋತುಮತಿಯಾದ ಹುಡುಗಿಯ ಸೋದರ ಮಾವನು ತಂದಿರುವ ಉಡುಗೊರೆಯನ್ನು ಧರಿಸಿರುತ್ತಾಳೆ.

ಮೈನೆರೆದ ಸಂಪ್ರದಾಯವನ್ನು ಕೆಲವು ಹಿಂದುಳಿದ ಸಮುದಾಯದವರು ಬಹಳ ವಿಜೃಂಭಣೆಯಿಂದ ಆಚರಿಸುತ್ತಾರೆ. ಆ ಹುಡುಗಿಗೆ ಮೊದಲೇ ಗಂಡು ಗೊತ್ತಾಗಿದ್ದರೆ ಆ ಹುಡುಗನನ್ನು ಅವಳ ಜೊತೆ ಕೂಡ್ರಿಸಿ ಆರತಿ ಮಾಡುತ್ತಾರೆ. ಕೆಲವರು ಚಿಕ್ಕ ಮಗು ಇರುವಾಗಲೇ ಅವರಿಗೆ ಮದುವೆ ಗುರುತು ಮಾಡಿರುತ್ತಾರೆ. ಚಿಕ್ಕ ಮಗುವಿಗೆ ಬಾಲ್ಯ ವಿವಾಹ ಮಾಡುವುದನ್ನು ನಮ್ಮ ಸಂಪ್ರದಾಯದಲ್ಲಿ ಕಾಣುತ್ತೇವೆ. ಅವರು ಜೀವನ ಸಂಗಾತಿಗಳಾಗಿರುತ್ತಾರೆ.

ಸಾಮಾನ್ಯವಾಗಿ ಋತುಮತಿಯಾದ ಹುಡುಗಿಗೆ ಎಲ್ಲರೂ ಉಡುಗೊರೆ ಕೊಡುತ್ತಾರೆ. ಇತ್ತೀಚಿಗೆ ೫ ದಿವಸ ಕೂಡ್ರಿಸಿ ಆರತಿ ಮಾಡುತ್ತಾರೆ. ಹಿಂದೆ ೧೬ ದಿವಸದವರೆಗೆ ಆರತಿ ಮಾಡುವ ಶಾಸ್ತ್ರವನ್ನು ಮಾಡುತ್ತಿದ್ದರಂತೆ.

**ಮದುವೆ ಸಂಪ್ರದಾಯ :** ಹಿಂದೂ ಸಂಸ್ಕೃತಿಯಲ್ಲಿ ಮದುಮಗಳನ್ನು ಮದುಮಗನಿಗೆ ಕನ್ಯಾದಾನವೆಂದು ಕೊಡುಗೆಯ ರೂಪದಲ್ಲಿ ಮದುವೆ ಮಾಡಿ ಕೊಡುವ ಸಂಪ್ರದಾಯವಿದೆ. ಮದುವೆಯು ಸಾಮಾನ್ಯವಾಗಿ ಹೆಣ್ಣಿನ ಮನೆಯಲ್ಲಿ ನಿಶ್ಚಯಿಸುವ ಸಂಪ್ರದಾಯವಾಗಿದೆ.

ಇತ್ತೀಚಿನ ದಿನಗಳಲ್ಲಿ ದೇವಸ್ಥಾನಗಳಲ್ಲಿ ಮಠ–ಮಂದಿರಗಳಲ್ಲಿ ಇಲ್ಲವೇ ಛತ್ರಗಳಲ್ಲಿ ಸಹ ಬಹುತೇಕವಾಗಿ ಮದುವೆಯು ನಡೆಯುತ್ತದೆ. ನಿಶ್ಚಿತಾರ್ಥಗಳಲ್ಲಿ ಮದುವೆಯ ಪ್ರಸ್ತಾಪ ನಿಶ್ಚಿತ ರೂಪ ತಾಳುತ್ತದೆ.

ವಧು ಮತ್ತು ವರನ ತಾಯಿ–ತಂದೆಯನ್ನು ಗೌರವದಿಂದ ಬರಮಾಡಿಕೊಳ್ಳುವರು. ವಧುವರರ ಪೂರ್ವಜರನ್ನು ಆಹ್ವಾನಿಸುವುದು. ವಧುವರರು ಪರಸ್ಪರ ಕೈಗೆ ದಾರ ಕಟ್ಟುವುದು, ವಧುವರರ ಕರಗಳನ್ನು ಜೋಡಿಸಿ ಹಾಲೆರೆಯುವುದು, ವಧುವರರ ತಲೆಗಳ ಮೇಲೆ ಅಕ್ಕಿಕಾಳನ್ನು ಹಾಕುವುದು. ಗುರುಹಿರಿಯರಿಂದ ಮುಟ್ಟಿಸಿದ ಮಂಗಳಸೂತ್ರವನ್ನು ಕಟ್ಟುವುದು, ವಧುವರರು ಪವಿತ್ರ ಅಗ್ನಿಕುಂಡ ಸುತ್ತಿ, ಏಳು ಹೆಜ್ಜೆಗಳನ್ನು ಸಹ ಕ್ರಮಿಸುವುದು ಇದನ್ನು "ಸಪ್ತಪದಿ" ಎನ್ನುವರು.

ಇವು ವಿವಾಹದ ಧಾರ್ಮಿಕ ವಿಧಿಗಳಲ್ಲಿ ಮುಖ್ಯವಾದವು. ಲಿಂಗಾಯಿತರು ನೆರವೇರಿಸು ವಂತಹ ಮದುವೆಗಳಲ್ಲಿ ಹೋಮಕ್ಕೆ ಅವಕಾಶವಿರುವುದಿಲ್ಲ. ಇದಕ್ಕೆ ಬದಲಾಗಿ ಪಂಚಕಲಶ ಅಂದರೆ ಪವಿತ್ರ ಬಿಂದಿಗೆಗಳ ಪ್ರತಿಷ್ಠಾಪನೆಯಾಗುತ್ತದೆ.

ವೀರಭದ್ರ ಕುಲದೇವತೆಯನ್ನು ಆರಾಧಿಸುವ ಕೆಲವು ಕುಟುಂಬಗಳು ಮದುವೆಯ ಮೊದಲು ಗುಗ್ಗಳ ಸೇವೆಯನ್ನು ಕೈಗೊಳ್ಳುವರು. ಸೂತ್ರವನ್ನು ಕಟ್ಟುವರು. ಮತ್ತಿತರ ವಿವಾಹ ವಿಧಿಗಳು ಬೇರೆ ಹಿಂದೂಗಳ ವಿಧಿಗಳಂತೆಯೇ ಇರುತ್ತವೆ.

ಸಾಮಾನ್ಯವಾಗಿ ಇವರ ವಿವಾಹ ವಿಧಿಯನ್ನು ಜಂಗಮರು ನಡೆಸಿಕೊಡುತ್ತಾರೆ. ಲಿಂಗಾಯಿತ ಒಕ್ಕಲಿಗ ಮತ್ತಿತರ ಅನೇಕ ಸಮುದಾಯಗಳಲ್ಲಿ ಮದುವೆಯ ಮೊದಲು ಒಂದು ಕಂಬವನ್ನು ನಿಲ್ಲಿಸಿ ಅದಕ್ಕೆ ಕಳ್ಳಿ ಕಟ್ಟುತ್ತಾರೆ ಅದಕ್ಕೆ ಹಾಲುಗಂಬ ಎನ್ನಲಾಗಿದೆ. ಮನೆಯ ಮುಂದೆ ನಿಲ್ಲಿಸುತ್ತಾರೆ. ಮಾಂಗಲ್ಯ ಕಟ್ಟುವುದಕ್ಕೆ ಮುಂಚೆ ಇದಕ್ಕೆ ವಾಡಿಕೆಯಂತೆ ಪೂಜಾ ವಿಧಿಗಳನ್ನು ಸಲ್ಲಿಸುತ್ತಾರೆ. ವರದಕ್ಷಣೆ ಪಿಡುಗು ಇಂದಿಗೂ ಅನೇಕ ರೀತಿ ಸಮುದಾಯಗಳಲ್ಲಿರುವುದು ಕಂಡುಬರುತ್ತದೆ.

ವೈಶ್ಯ ಬ್ರಾಹ್ಮಣರಲ್ಲಿ ಗಂಡು ಹೆಣ್ಣಿನ ಜಾತಕ ಕೂಡಿ ಬಂದರೆ ವಿವಾಹ ನಿಷ್ಕರ್ಷೆಯಾಗುತ್ತದೆ. ಕೆಲವರಲ್ಲಿ ಎದುರು ಬದುರು ಕೊಡುವ ಪದ್ಧತಿಯೂ ಇದೆ. ಹಿಂದೆ ರಕ್ತಸಂಬಂಧಿಕರಲ್ಲಿ ಮದುವೆ ಮಾಡಿಕೊಳ್ಳುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಅಂತರ್ ಸಮುದಾಯ ವಿವಾಹಗಳು ನಡೆಯುತ್ತವೆ.

ಅನೇಕ ಸಂಪ್ರದಾಯಗಳಲ್ಲಿ ಮದುವೆಯ ಸಂಪ್ರದಾಯವೂ ಒಂದಾಗಿದೆ. ಕುಟುಂಬ ರಚನೆಯ ಚಲನ ಶಕ್ತಿಯೇ ಈ ಮದುವೆ. ಹೊಸ ಸಂಬಂಧವಾದಲ್ಲಿ ವಿಭಿನ್ನ ಗೋತ್ರದಲ್ಲಿ ಮದುವೆ ನಡೆಯುತ್ತದೆ. ಅಕ್ಕನ ಮಗಳು ಸೋದರ ಮಾವ ಸೊದರತ್ತೆಯ ಮಗಳು ಮದುವೆಗೆ ಸಮಾಜದಲ್ಲಿ ಒಪ್ಪಿಗೆ. ಅಣ್ಣ-ತಂಗಿಯರ ಮದುವೆ ನಿಷೇಧ. ಗಂಡು-ಹೆಣ್ಣುಗಳ ಜಾತಕ ಸರಿಬಂದರೆ ಮದುವೆಗೆ ಒಪ್ಪಿಗೆ ಸಿಗುತ್ತದೆ. ಅವರಿಬ್ಬರ ಕುಲ ಒಂದೇ ಆಗಿರಬಾರದು. ಬೇರೆ-ಬೇರೆಯಾಗಿರಬೇಕು. ರಕ್ತ ಸಂಬಂಧದಲ್ಲಿ ಹೆಚ್ಚಾಗಿ ಮದುವೆಗಳು ನಡೆಯುತ್ತಿದ್ದವು. ಇದರಿಂದ ಸಂಬಂಧ ಗಟ್ಟಿಗೊಳ್ಳುತ್ತವೆ. ಆದರೆ ಇತ್ತೀಚೆಗೆ ರಕ್ತ ಸಂಬಂಧದಲ್ಲಿ ಮದುವೆಯಾದರೆ ಹುಟ್ಟಿದ ಮಕ್ಕಳು ಅಂಗವಿಕಲರಾಗಿ ಹುಟ್ಟುತ್ತಾರೆ. ಈ ಸಂಬಂಧವು ಕಡಿಮೆಯಾಗಿದೆ. ಹಿಂದೆ ಇದ್ದ ಬಾಲ್ಯವಿವಾಹ ಈಗಿಲ್ಲ. ವಿಧುರರಿಗೆ ಮರು ಮದುವೆ ಇದೆ. ಇತ್ತೀಚೆಗೆ ವಿಧವೆಯರು ಮರು ಮದುವೆಯಾಗುತ್ತಿದ್ದರೂ ಅದು ವಿರಳವಾಗಿ ಕಂಡು ಬರುತ್ತದೆ. ಹಿಂದೆ ಮರು ಮದುವೆಗಳು ಶಾಸ್ತ್ರ ಸಂಪ್ರದಾಯದಂತೆ ಹಳ್ಳಿಯಲ್ಲೇ ಮನೆಯ ಮುಂದೆ ಚಪ್ಪರ ಹಾಕಿ ಹೆಣ್ಣು-ಗಂಡನ್ನು ಎತ್ತಿನ ಗಾಡಿಗಳ ಮೇಲೆ ಕೂರಿಸಿ ಮೆರವಣಿಗೆಯ ಮೂಲಕ ಕರೆತಂದು ಶಾಸ್ತ್ರೋಕ್ತವಾಗಿ ಮಾಡುತ್ತಿದ್ದರು. ಇತ್ತೀಚೆಗೆ ಛತ್ರದಲ್ಲಿ ಮದುವೆ. ಹಿಂದೆ ಎರಡು ಮೂರು ದಿನಗಳ ಕಾಲ ಮದುವೆ. ಇಂದು ಒಂದು ದಿನಕ್ಕೆ ಸಿಮೀತವಾಗಿದೆ. ತುಂಬಾನೇ ಸರಳವಾಗುತ್ತದೆ. ಮದುವೆಗಳಲ್ಲಿನ ಕೆಲವು ಸಂಪ್ರದಾಯಗಳು ಮೌಲ್ಯ ಕಳೆದುಕೊಳ್ಳುತ್ತಾ ಸಾಗಿವೆ.

**ಕನ್ಯಾ ನೋಡುವ ಶಾಸ್ತ್ರ:** ಈ ಶಾಸ್ತ್ರ ಪ್ರತಿಯೊಬ್ಬ ಹೆಣ್ಣಿನ ಮನೆಯಲ್ಲಿ ನಡೆಯುವ ಶಾಸ್ತ್ರ. ವಧುವನ್ನು ನೋಡಲು ಹೋಗುವಾಗ ಹೆಣ್ಣಿಗೆ ಹಣ್ಣು, ಹೂವುಗಳನ್ನು ತೆಗೆದುಕೊಂಡು ಹೋಗುತ್ತಾರೆ. ವಿವಾಹ ಮಾಡುವಾಗ ಬೆಡಗು ಗೋತ್ರ ನೋಡಿ ಮಾಡುತ್ತಾರೆ.

ಕನ್ಯಾ ವರನ ಮನಸ್ಸಿಗೆ ಬಂದ ಮೇಲೆ ಗಂಡಿನವರ ಮನೆತನ ನೋಡಲು ಹೋಗುತ್ತಾರೆ. ಮನೆತನ ಒಪ್ಪಿಗೆಯಾದಲ್ಲಿ ಅವರವರ ಅನುಕೂಲದ ಮೇಲೆ ಮಾತುಕತೆ, ಕೊಡುಕೊಳ್ಳುವ ವಿಚಾರವನ್ನು ಹಿರಿಯರ ಸಮ್ಮುಖದಲ್ಲಿ ಗೊತ್ತುಪಡಿಸುವರು.

ನಿಶ್ಚಿತಾರ್ಥ ವಧುವಿನ ಹಾಗೂ ವರನ ಕಡೆಯವರಿಗೆ ವರ, ಕನ್ಯೆಗೆ ಒಪ್ಪಿಗೆ ಕೊಡುಕೊಳ್ಳುವಿಕೆ ಒಪ್ಪಿಗೆಯಾಗಿ ಒಪ್ಪಿದ ಮೇಲೆ ಹೆಣ್ಣಿನವರ ಮನೆಯಲ್ಲಿ ಒಂದು ಗೊತ್ತಾದ ದಿನದಿಂದ ನಡೆಯುವ ಕಾರ್ಯ ಇದಾಗಿದೆ. ಬಹುತೇಕ ಎಲ್ಲಾ ಸಮುದಾಯದಲ್ಲೂ ಕಂಡುಬರುತ್ತದೆ. ಆಯಾ ಪ್ರದೇಶ ಸಮುದಾಯದ ಹೆಣ್ಣಿನ ಗಂಡಿನ ಕಡೆಯ ಹಿರಿಯರು ಸೇರಿ ಸಂಬಂಧ ಒಪ್ಪಿಗೆಯಾದ ಸಂಕೇತವಾಗಿ 'ತಾಂಬೂಲ'ವನ್ನು ಬದಲಾಯಿಸಿಕೊಳ್ಳುವಿಕೆಯನ್ನು ಕಾಣುತ್ತೇವೆ. ಅವಾಗ ಬೀಗರಿಗೆ ವಿಶೇಷವಾಗಿ ಸಿಹಿ ಶ್ಯಾವಿಗೆ ಪಾಯಸ ಮಾಡಿ ಊಟಕ್ಕೆ ಬಡಿಸುತ್ತಾರೆ. ಶ್ಯಾವಿಗೆ ವಿಶೇಷ

ಅಂದರೆ, ಆ ಶ್ಯಾವಿಗೆಯ ಬಳ್ಳಿಯ ಹಾಗೆ ಸಂಬಂಧ ಇರಲಿ ಎಂಬುದು ಇಲ್ಲಿಯವರ ಅಭಿಮತವಾಗಿದೆ.

ವಧು-ವರರನ್ನು ಜೊತೆಗೆ ಕೂಡಿಸಿ ಹಾರ ಹಾಕಿ ಆರತಿ ಮಾಡುತ್ತಾರೆ. ಗಂಡಿನ ಕಡೆಯವರು ಹುಡುಗಿಗೆ ಸೀರೆ, ಕುಪ್ಪಸ, ಬಂಗಾರ ಹಾಕುತ್ತಾರೆ. ನಿಶ್ಚಿತಾರ್ಥವಾದರೆ "ಅರ್ಧ ಮದುವೆ" ಆದಂತೆ. ಆಗ ಯಾವುದೇ ಸಣ್ಣ ಕಾರಣಕ್ಕೆ ಮದುವೆ ಮುರಿದುಕೊಳ್ಳುವ ಸಾಧ್ಯತೆ ಕಡಿಮೆ.

**ಲಗ್ನ ಪತ್ರಿಕೆ ಕಟ್ಟಿಸುವುದು:** ನಮ್ಮ ಸಂಸ್ಕೃತಿಯಲ್ಲಿ ಮದುವೆ ಮುಂಚೆಗೆ ಈ ಲಗ್ನ ಪತ್ರಿಕೆ ಪ್ರಮುಖವಾಗಿದೆ. ಈ ಮದುವೆಗೆ ಎರಡು ದಿನ ಇರುವಾಗಲೇ ಹಿರಿಯರು ಬಂಧು-ಬಳಗದವರ ಸಮಕ್ಷಮದಲ್ಲಿ ಲಗ್ನ ಪತ್ರಿಕೆಗಳನ್ನು ಪೂಜೆ ಮಾಡುತ್ತಾರೆ. ಆಯಾ ಸಂಪ್ರದಾಯ, ಆಚರಣೆಗೆ ತಕ್ಕಂತೆ, ಈ ಕಾರ್ಯವನ್ನು ಪುರೋಹಿತರು, ಐನೋರು ಮಾಡಿಸುತ್ತಾರೆ. ಕೆಲವರು ಮನೆಯ ದೇವರಿಗೆ ಮೊದಲು ಲಗ್ನ ಪತ್ರಿಕೆಯನ್ನು ತಲುಪಿಸುತ್ತಾರೆ. ಕೆಲವರು ದೇವಸ್ಥಾನಕ್ಕೆ ನೀಡುತ್ತಾರೆ.

ಕೆಲವರು ಲಗ್ನದ ಅಕ್ಕಿ ಎಂದು ಐದು ಸೇರು ಅಕ್ಕಿ, ಬೆಲ್ಲ, ಲಗ್ನ ಪತ್ರಿಕೆ, ಎಲೆ, ಅಡಿಕೆ, ದಕ್ಷಿಣೆ ತೆಗೆದುಕೊಂಡು ಗಂಡಿನ ಮನೆಗೆ ಹೋಗುತ್ತಾರೆ. ಬೀಗರಾದವರು ಲಗ್ನಕ್ಕೆ ತಂದವನಿಗೆ ಸಿಹಿ ಊಟ ಮಾಡಿಸಿ ಬಟ್ಟೆ ಕೊಟ್ಟು ಕಳಿಸುತ್ತಾರೆ. ಕೋರು ಊಟ-ದೇವರೂಟದ ಹಿಂದಿನ ದಿನ ಹತ್ತಿರದ ಸಂಬಂಧಿಕರಿಗೆ ದೇವರೂಟದ ದಿನ ಊರಿನವರಿಗೆ ಅನುಕೂಲದ ಮೇರೆಗೆ ದೂರದ ಊರಿನ ಬಳಗಕ್ಕೆ ಲಗ್ನ ಪತ್ರಿಕೆಯನ್ನು ಹಂಚುತ್ತಾರೆ.

ಹತ್ತಿರದ ಬಳಗಕ್ಕೆ ಲಗ್ನ ಪತ್ರಿಕೆಯ ಜೋಡಿ ಎರಡು ಕೊಬ್ಬರಿ ಬಟ್ಟಲು, ಎರಡು ಅಡಿಕೆ ಇಟ್ಟು ಕರೆಯುವುದು ನಮ್ಮ ಸಂಪ್ರದಾಯ, ಆಚರಣೆಯಲ್ಲಿ ಪ್ರಮುಖವಾಗಿದೆ ಎಂದು ತಿಳಿಯಬಹುದು.

ಸಂಪ್ರದಾಯದ ಹಾಗೆ ಕೆಲವರು ಕುಂಕುಮ, ಅರಿಶಿಣ ಹಚ್ಚುವುದರೊಂದಿಗೆ ಅವರು ಹೆಣ್ಣು ಮಕ್ಕಳನ್ನು ಮದುವೆಗೆ ಕರೆಯುತ್ತಾರೆ/ಆಹ್ವಾನಿಸುತ್ತಾರೆ. ಮದುವೆಗೆ ಎರಡು ದಿನ ಮುಂಚೆ ಲಕ್ಷ್ಮಿ ಪೂಜೆ ಮಾಡುತ್ತಾರೆ. ಹಿರಿಯರಿಗೆ ಹೊಸ ಬಟ್ಟೆ ಏರಿಸುತ್ತಾರೆ.

**ದೇವರೂಟ/ಕೋರೂಟ:** ಈ ಕಾರ್ಯವನ್ನು ಮದುವೆಯ ಹಿಂದಿನ ದಿನ ಹಂದರ ಹಾಕಿ ಮದುಮಕ್ಕಳನ್ನು ಮಾಡಿ ದೈವದೂಟ ನೀಡುತ್ತಾರೆ. ಆದಕಾರಣ ಈ ಕಾರ್ಯವನ್ನು ದೇವತಾಕಾರ್ಯ ಎಂದು ಕರೆಯುತ್ತಾರೆ. ಹಿಂದೆ ಎರಡು ರೀತಿಯಾದ ಹಂದ್ರಗಳಿವೆ. ಹಿರೇಹಂದ್ರ, ಮರಿಹಂದ್ರ ಗಳಿವೆ. ಹೀರೆಹಂದ್ರದ ಬದಲಾಗಿ ಶಾಮಿಯಾನ ಹಾಕಿ ಮರಿಹಂದ್ರ ಮಾತ್ರ ಹಾಕುತ್ತಾರೆ.

ಹಾಲುಗಂಬ ಹಾಕುವ ಶಾಸ್ತ್ರವನ್ನು ಮಾಡಿದ ನಂತರ ಹಂದ್ರವನ್ನು ಹಾಕುತ್ತಾರೆ. ಹಂದರಗಂಬಕ್ಕೆ ಜಾಜು ಸುಣ್ಣದ ಪಟ್ಟಿ ಹಚ್ಚುತ್ತಾರೆ.

ಹಂದ್ರದ ಮಧ್ಯದಲ್ಲಿ ಅಂತರಗಾಯಿಯನ್ನು ಸಹ ಕಟ್ಟುತ್ತಾರೆ. ಕಂಬದಲ್ಲಿ ಒಂದು ದೀಪದಲ್ಲಿ ಹಚ್ಚಿಟ್ಟಿರುತ್ತಾರೆ. ಅಂದೇ ಮನೆಯ ಗೋಡೆಯ ಹೊರಭಾಗದಲ್ಲಿ ಸುಣ್ಣ ಮತ್ತು ಕೆಮ್ಮಣ್ಣಿನ ಜೋರು ಬಿಡುವುದನ್ನು ಕಾಣುತ್ತೇವೆ.

ಈ ಕೆಲಸವನ್ನು ಗಂಡಿನ ಮನೆಯಲ್ಲಾದರೆ ಅಕ್ಕ-ತಂಗಿಯರು ಮಾಡುತ್ತಾರೆ. ಕೆಲವರಲ್ಲಿ ಅವರ ಸೋದರ ಮಾವ ಮಾಡುತ್ತಾನೆ. ಚಟ್ಟಾ ಬಡಿದವರಿಗೆ ಆರತಿ ಮಾಡಿ ದೋತ್ರ ಸೀರೆ ಕುಪ್ಪಸವನ್ನು ಕೊಡುವುದನ್ನು ಕಾಣುತ್ತೇವೆ.

**ಸುರಿಗಿ ನೀರು:** ಎಲ್ಲಾ ವರ್ಗದ ಎಲ್ಲಾ ಸಮುದಾಯದವರು ಸುರಿಗೆ ನೀರಿನ ಪದ್ಧತಿಯನ್ನು ಕಾಣುತ್ತೇವೆ. ಮದುವೆ ಹಿಂದಿನ ದಿನ ಮದುಮಗ ಮತ್ತು ಮದುಮಗಳನ್ನು ಮಾಡಬೇಕಾದರೆ ಸುರಿಗೆ ನೀರು ಎರೆಯುತ್ತಾರೆ. ಮದುವೆ ಕಲ್ಯಾಣಮಂಟಪದಲ್ಲಾದರೆ, ಮದುವೆಯ ದಿನ ಬೆಳಿಗ್ಗೆ ಸುರಿಗೆ ನೀರನ್ನು ಹಾಕುತ್ತಾರೆ. ವಧು-ವರರ ಜೊತೆಯಲ್ಲಿ ತಂದೆ ತಾಯಿ ಹಾಗೂ ಅಕ್ಕ-ತಂಗಿ ಅತ್ತೆ ಆಗುವವರು ಸುರಿಗೆ ನೀರಿಗೆ ಕುಳಿತುಕೊಳ್ಳುತ್ತಾರೆ, ಸುರಿಗೆಗೆ ಕುಳಿತುಕೊಂಡವರಿಗೆ, ತಲೆಗೆ ಎಣ್ಣೆ ಹಚ್ಚಿ ಮುಖಕ್ಕೆ ಮೈಗೆ ಅರಿಶಿಣ ಹಚ್ಚಿ ಬಿಸಿ ನೀರು ಮತ್ತು ತಣ್ಣೀರಿನಿಂದ ಸ್ನಾನ ಮಾಡಿಸಿ ಕೊನೆಗೆ ಆರತಿ ಮಾಡಿ ಅವರೆಲ್ಲರಿಗೂ ಹೊಸ ಬಟ್ಟೆಯನ್ನು ಕೊಡುತ್ತಾರೆ. ಸುರಿಗಿಗೆ ಮೊದಲು ಅವರ ಸುತ್ತಲೂ ಐದು ತಂಬಿಗೆ ಇರುತ್ತವೆ. ಮದುವೆಯಾದ ಗಂಡು ಮಕ್ಕಳು ಆ ಐದು ತಂಬಿಗೆಗಳನ್ನು ಐದು ಮಂದಿ ಹಿಡಿದುಕೊಂಡು ಹಾಗೆ ಕುಳಿತುಕೊಂಡಿರುತ್ತಾರೆ. ಅರಿಶಿಣ ಹಾಕಿ ಐದು ಸುತ್ತು ದಾರ ಸುತ್ತುತ್ತಾರೆ. ಇದರ ಒಳಗಡೆ ನಿಂತು ಸುರಿಗೆಯ ನೀರು ಹಾಕಬೇಕು.

ಈ ಸುರಿಗೆಯ ನೀರು ವಧು-ವರರ ಮೈ ಮೇಲೆ ಬಿದ್ದರೆ ಮೈ ಒಡೆಯುತ್ತಾರೆ ಎಂಬುದು ನಂಬಿಕೆ. ಅಂದರೆ ಚೆನ್ನಾಗಿ ಸುಂದರ ದಷ್ಟ-ಪುಷ್ಟವಾಗಿ ಬೆಳೆಯುತ್ತಾರೆ ಎಂಬುದು ನಮ್ಮ ನಂಬಿಕೆಯಾಗಿದೆ.

**ಐರಾಣಿ ತರುವುದು** : ಐರಾಣಿ ತರುವ ಶಾಸ್ತ್ರವನ್ನು ಕಡಲುಬಾಳುವಿನಲ್ಲಿ ಅತಿ ಹೆಚ್ಚಾಗಿ ಕಂಡು ಬರುವುದನ್ನು ಕಾಣುತ್ತೇವೆ. ಮುಸ್ಲಿಂರನ್ನು ಹೊರತುಪಡಿಸಿ, ಐರಾಣಿ ತರುವಾಗ ಕುಂಬಾರರ ಮನೆಯಿಂದ, ಅಕ್ಕಿ, ಬೆಳೆ, ಬೆಲ್ಲ, ಕೊಟ್ಟು ಸುಣ್ಣದಿಂದ ಚಿತ್ರಗಳನ್ನು ಬಿಡಿಸಿರುತ್ತಾರೆ. ಹಾಗೆಯೇ ಚಿಕ್ಕಗಡಿಗೆಗಳಿಂದ ಹಿಡಿದು ದೊಡ್ಡ ಗಡಿಗೆಗಳವರೆಗೆ ಎರಡೆರಡರಂತೆ ತಂದು ಅವುಗಳನ್ನು

ಗುಡಿಗಳಲ್ಲಿ ಇಟ್ಟು ಪೂಜೆ ಮಾಡಿಸುತ್ತಾರೆ. ತದನಂತರ ಮೆರವಣಿಗೆಯ ಮೂಲಕ ಅವುಗಳನ್ನು ತೆಗೆದುಕೊಂಡು ದೇವರ ಮನೆಯಲ್ಲಿಟ್ಟು ಪೂಜೆ ಮಾಡುತ್ತಾರೆ.

**ಮದುಮಕ್ಕಳನ್ನು ಮಾಡುವುದು:** "ಮದುವೆಯಲ್ಲಿ ಮದುಮಗನನ್ನೇ ಬಿಟ್ಟು ಹೋದ್ರಂತೆ" ಅನ್ನುವ ಹಾಗೆ. ಮದುವೆಯಲ್ಲಿ ಮದುಮಗನ ಪಾತ್ರ ಮಹತ್ವದ್ದಾಗಿದೆ. ಒಂದು ಮಣೆಯ ಮೇಲೆ ಕೂಡಿಸಿ, ಹೊಸ ಬಟ್ಟೆ ತೊಡಿಸುತ್ತಾರೆ. ಜೊತೆಗೆ ಕೈಯಲ್ಲಿ ಬಿಳಿವಸ್ತ್ರದಲ್ಲಿ ತೆಂಗಿನ ಕಾಯಿ ಕೊಟ್ಟು ಕೊರಳಲ್ಲಿ ಹೂವಿನ ಹಾರ ಹಾಕಿ ನಾನಾ ರೀತಿಯಲ್ಲಿ ಶೃಂಗರಿಸಿ ಮನೆಯಲ್ಲಿ ಆರತಿಯನ್ನು ಮಾಡುತ್ತಾರೆ. ಮದುಮಗಳು ಆದರೆ, ಹಸಿರುಬಳೆ ತೊಡಿಸಿ ಕಾಲಿಗೆ, ಕೆನ್ನೆಗೆ ಅರಿಶಿಣ ಹಚ್ಚುತ್ತಾರೆ.

ಮದುಮಗಳ ಮದುವೆಗೆ ಬಳೆಯನ್ನು ಹಾಕಲು ಬಂದ ಬಳೆಗಾರನಿಗೆ ಮದುವೆಯ ಮನೆಯವರು ಅಕ್ಕಿ ಬೇಳೆ, ಬೆಲ್ಲ ಹಾಗೇ ದಕ್ಷಿಣೆಯನ್ನು ಕೊಟ್ಟು ಕಳುಹಿಸುವಂತಹ ಆಚರಣೆಯನ್ನು ಕಾಣಬಹುದಾಗಿದೆ. ಮದುಮಗಳು ದೂರದ ಪ್ರಯಾಣವನ್ನು ಮಾಡು ವಂತಿಲ್ಲ, ಕಂಡಕಂಡಲ್ಲಿ ತಿರುಗಾಡುವಂತಿಲ್ಲ, ಅವರು ಹಸಿಮೈ ಎಂದು ಅವರನ್ನು ತುಂಬಾ ಜೋಪಾನ ಮಾಡುತ್ತಾರೆ. ಯಾವುದೇ ಕೆಟ್ಟವರ ದೃಷ್ಟಿ ತಾಗಬಾರದು ಎಂದು ಕೆನ್ನೆಗೆ ಹಾಗೆಯೇ ಅಂಗಾಲಿಗೆ ಕಾಡಿಗೆ ಬೊಟ್ಟು ಇಡುತ್ತಾರೆ.

**ಒಳಕಲ್ಲು ಪೂಜೆ:** ಮದುವೆಯ ಮನೆಯಲ್ಲಿ ಒಳಕಲ್ಲು ಮತ್ತು ಬೀಸುವ ಕಲ್ಲಿಗೆ ವಿಶೇಷ ಪೂಜೆಯನ್ನು ಮಾಡಲಾಗಿದೆ. ಒಳಕಲ್ಲು ಮತ್ತು ಬೀಸುವ ಕಲ್ಲುಗಳನ್ನು ತೊಳೆದು ಸುಣ್ಣ ಬಣ್ಣಗಳಿಂದ ಅಲಂಕಾರ ಮಾಡುತ್ತಾರೆ. ಐದು ಜನ ಮುತ್ತೈದೆಯರು ಸೇರುತ್ತಾರೆ. ಕುಟ್ಟುವಾಗ ಬೀಸುವಾಗ ಕೆಲಸ ಮಾಡುತ್ತಲೇ ಹಾಡನ್ನು ಹಾಡುತ್ತಾರೆ. ಒಳಕಲ್ಲು ಪೂಜೆಯ ನಂತರ ಹಂದ್ರದಲ್ಲಿ ಮುತ್ತೈದೆಯರು ಸಂಡಿಗೆ, ಶ್ಯಾವಿಗೆಯನ್ನು ಇಡುವ ಕೆಲಸವನ್ನು ಸಹ ಮಾಡುತ್ತಾರೆ. ಶ್ಯಾವಿಗೆ ಮಾಡಿದ ಮರವನ್ನು ಪೂಜೆ ಮಾಡಿ ದೇವರ ಮುಂದೆ ಇಡುತ್ತಾರೆ. ಈ ಕಾರ್ಯಕ್ಕೆ ಬಂದ ಪ್ರತಿಯೊಬ್ಬ ಮಹಿಳೆಯರಿಗೆ ಉಪಾಹಾರ ಊಟದ ವ್ಯವಸ್ಥೆ ಇರುತ್ತದೆ.

**ಎದುರು ಗೊಂಬುವುದು:** ಹೆಸರೇ ಹೇಳುವಂತೆ ಮದುವೆ ಗಂಡಿನ ಮನೆಯಲ್ಲಿ ನಡೆದರೆ ಮದುಮಗಳನ್ನು ಹಾಗೂ ಜೊತೆಗೆ ಬಂದವರನ್ನು, ಹೆಣ್ಣಿನ ಮನೆಯಲ್ಲಿ ನಡೆದರೆ ಮದುಮಗನನ್ನು ಹಾಗೂ ಜೊತೆಗೆ ಬಂದವರನ್ನು ಆಹ್ವಾನಿಸುವ ಕಾರ್ಯಕ್ಕೆ ಎದುರುಗೊಂಬುವುದು ಎಂದು ಕರೆಯಲಾಗಿದೆ. ಮದುಮಗನನ್ನು ಆಹ್ವಾನಿಸಲು ಹಿರಿಯರೆಲ್ಲರೂ ಬ್ಯಾಂಡಿನೊಂದಿಗೆ ಬರುತ್ತಾರೆ. ಇದ್ದಲ್ಲಿಗೆ ಆರತಿಯನ್ನು ತೆಗೆದುಕೊಂಡು ಹೋಗುವ ಆಚರಣೆಯನ್ನು ಕಾಣಬಹುದಾಗಿದೆ. ಮದುಮಗಳ ತಮ್ಮ ಅಥವಾ ಅಣ್ಣನಾಗುವವರು ಮದುಮಗನಿಗೆ ತಂಬಿಗೆಯಲ್ಲಿರುವ ನೀರಿನಿಂದ

ಕಣ್ಣೊರೆಸಿ, ಕರವಸ್ತ್ರದಿಂದ ಒರಸಿ ಕುಂಕುಮವನ್ನು ಹಚ್ಚಿ, ಹೂವಿನ ಹಾರ ಹಾಕಿ ನಗು–ನಗುತ್ತಲೇ ಅವರನ್ನು ಸ್ವಾಗತಿಸಿಕೊಳ್ಳುತ್ತಾರೆ.

ಮದುಮಗನನ್ನು ಮತ್ತು ಬೀಗರ ತಂಡವನ್ನು ಸ್ವಾಗತಿಸಿ ಅವರಿಗೆ ವಿಶ್ರಾಂತಿ ಸ್ಥಳದ ವ್ಯವಸ್ಥೆಯನ್ನು ಮಾಡಿರುತ್ತಾರೆ. ನಂತರ ಅವರಿಗೆ ಉಪಾಹಾರದ ಎಲ್ಲ ವ್ಯವಸ್ಥೆಯನ್ನು ಮಾಡಿರುತ್ತಾರೆ. ಅಂದು ರಾತ್ರಿ ದೊಡ್ಡವೀಳ್ಯ ನಡೆಯುವುದು ವಿಶೇಷ.

ಅಕ್ಕಿಯಿಂದ ಕಂಬಳಿಯ ಮೇಲೆ ಹಾಸಕ್ಕಿ ಹಾಕುವರು. ಒಡ್ಡರು, ಬೇಡರು 'ಓಂ' ಎಂದು ಬರೆದು ತುಂಬಿದ ಕಳಸವನ್ನಿಟ್ಟು, ಕಾಯಿ ಒಡೆಯುವರು. ಇಲ್ಲಿ ವಧುವು ಗಂಡಿನವರು ತಂದು ಕೊಟ್ಟ ಸೀರೆಯನ್ನು ಉಟ್ಟುಕೊಂಡಿರಬೇಕು. ಮಧುಮಗಳು ಗದ್ದುಗೆಯ ಮೇಲೆ ಕುಳಿತುಕೊಳ್ಳಬೇಕಾಗಿದೆ. ಗಂಡಿನವರು ಅಡಿಕೆ ಎಲೆಯನ್ನು ಮದುಮಗಳ ಕೈಗೆ ತುಂಬುತ್ತಾರೆ. ನಂತರ ಎಲ್ಲರೂ ಸಹ ಆರತಿಯನ್ನು ಮಾಡುತ್ತಾರೆ. ಪರಸ್ಪರ ಗಂಡು–ಹೆಣ್ಣಿನವರ ಕಡೆಯವರನ್ನು ಕರೆಸುತ್ತಾರೆ. ನಂತರ ತೆಂಗಿನ ಕಾಯಿಯನ್ನು ಬದಲಾಯಿಸಿ ಗುಲಾಲು ಹಚ್ಚಿ ಸಕ್ಕರೆ ಹಂಚಿ ಪರಸ್ಪರ ಆಲಂಗಿಸಿ ಮದುವೆಗೆ ಬಂದವರನ್ನು ಹಾರ್ಧಿಕವಾಗಿ ಸ್ವಾಗತಿಸಿ ಸೌಜನ್ಯ ಮೆರೆಯುತ್ತಾರೆ. ಮುಸ್ಲಿಂರಲ್ಲಿ ಮದುವೆಯ ಹಿಂದಿನ ದಿನವೇ ದಿಬ್ಬಣ ಮಾಡುತ್ತಾರೆ.

**ಬಾಸಿಂಗ ಕಟ್ಟುವುದು:** ಮದುಮಕ್ಕಳಿಗೆ ಸರ್ವೇಸಾಮಾನ್ಯವಾಗಿ ಬಾಸಿಂಗ ಕಟ್ಟುವುದು ನಮ್ಮ ಸಂಪ್ರದಾಯವಾಗಿದೆ. ಮುಸ್ಲಿಂರು ವರನಿಗೆ ಕುದುರೆಯ ಮೇಲೆ ಮೆರವಣಿಗೆ ಮಾಡಿಸುತ್ತಾರೆ. ಹೂವಿನಿಂದ ಅಲಂಕಾರ ಮಾಡುತ್ತಾರೆ. ಕೆಲವರಲ್ಲಿ ವರನಿಗೆ ಬಾಸಿಂಗವನ್ನು ಸೋದರ ಮಾವ ಕಟ್ಟಿದರೆ ಕೆಲವು ಕಡೆ ತಾಯಿ ಕಟ್ಟುವ ಪದ್ಧತಿ ಕಾಣುತ್ತೇವೆ.

**ಮಾಂಗಲ್ಯ ಕಟ್ಟುವುದು(ಧಾರೆ ಮಹೂರ್ತ):** ಮನುಷ್ಯನಿಗೆ ಹೃದಯ ಹೇಗೆ ಮುಖ್ಯವೋ ಹಾಗೆಯೇ ಒಂದು ಹೆಣ್ಣಿಗೆ ಮಾಂಗಲ್ಯ ಭಾಗ್ಯವು ಅಷ್ಟೇ ಮುಖ್ಯವಾಗಿದೆ. ವರನಿಗೆ ಮಡಿ ಉಡಿಸಿ, ಮೈ ಮೇಲೆ ಶಲ್ಯ ಹೊದಿಸಿ, ಬಾಸಿಂಗ ಕಟ್ಟಿ, ಕೈಯಲ್ಲಿ ತೆಂಗಿನಕಾಯಿಟ್ಟು ಧಾರೆ ಮಂಟಪಕ್ಕೆ ಬರುತ್ತಾರೆ. ವಧುವಿಗೆ ರೇಷ್ಮೆ ಸೀರೆಯಲ್ಲಿ ಅಲಂಕಾರ ಮಾಡಿ, ಬಾಸಿಂಗ ತೊಡಿಸಿ, ಕೈಯಲ್ಲಿ ತೆಂಗಿನ ಕಾಯಿ ಇಟ್ಟು ಧಾರೆ ಮಂಟಪಕ್ಕೆ ದಾರಿಯುದ್ದಕ್ಕೂ ಹಾಕಲಾದ ತಟ್ಟೆಯ ಮೇಲೆ ಕಾಲಿಡುತ್ತಾ ಬರುತ್ತಾಳೆ. ಇದಕ್ಕೆ "ಸಪ್ತಪದಿ" ತುಳಿಯುವುದು ಎನ್ನುವರು

ಮಾಂಗಲ್ಯ ಕಟ್ಟುವುದು ವಿವಾಹದ ಮುಖ್ಯ ಘಟ್ಟವಾಗಿದೆ. ಈ ಶಾಸ್ತ್ರವನ್ನು ಎಲ್ಲ ವರ್ಗದವರು ಸಹ ಆಚರಣೆ ಮಾಡುತ್ತಾರೆ. ಮದುವೆ ಕಲ್ಯಾಣ ಮಂಟಪದಲ್ಲಿ ನಡೆದರೆ ವೀರಶೈವರು ಈ ಕಾರ್ಯವನ್ನು ಮನೆಯಲ್ಲಿ ಮುಗಿಸಿಕೊಂಡು ಬಂದಿರುತ್ತಾರೆ.

ವಡ್ಡರ ಸಮುದಾಯದಲ್ಲಿ ತಾಳಿಕಟ್ಟುವ ಮುನ್ನ ಹಂದರದಲ್ಲಿ ನೆಟ್ಟ ಹಾರೆಗೆ ತಾಳಿ ಮುಟ್ಟಿಸುತ್ತಾರೆ. ಮುಸ್ಲಿಂರಲ್ಲಿ ಅತ್ತೆ ಅಥವಾ ತಾಯಿ ತಾಳಿ ಕಟ್ಟುತ್ತಾರೆ. ಹರಿಜನ, ಕುಂಬಾರ, ಕುರುಬ ಅವರಿಗೆ ಐನೋರು ಈ ಕಾರ್ಯವನ್ನು ಮಾಡಿ ಮುಗಿಸುತ್ತಾರೆ.

ಹೆಣ್ಣು ಗಂಡಿನ ಕಡೆಯವರಿಂದ ಸಾಕ್ಷಿ ಹಾಕಿಸುತ್ತಾರೆ. ಕೆಲವು ಹಿಂದೂ ಪದ್ಧತಿಗಳನ್ನು ಹೋಲುವುದು ಈ ಭಾಗದಲ್ಲಿ ಕಂಡುಬರುವುದು ವಿಶೇಷವಾಗಿದೆ. ಮಂಟಪದಲ್ಲಿ ಮಾಂಗಲ್ಯವನ್ನು ಕಟ್ಟುತ್ತಾರೆ. ವೈಶ್ಯರಲ್ಲಿ ಮಾಂಗಲ್ಯಕ್ಕಿಂತ ಮುಂಚೆಯೇ ಹಲವು ಪೂಜೆ ಮಾಡುತ್ತಾರೆ.

ವಧುವಿನ ಗೌರಿ ಪೂಜೆ, ವರನ ಕಾಶಿಯಾತ್ರೆ ವಿಶಿಷ್ಟ ಆಚರಣೆಗಳಾಗಿವೆ. ಹುಡುಗಿಯ ತಂದೆ-ತಾಯಿಯರು ಕಾಶಿಗೆ ವಿರಕ್ತನಾಗಿ ಹೋದ ಅಳಿಯನನ್ನು ವಾಪಸ್ಸು ಕರೆತಂದು "ಕನ್ಯಾದಾನ" ಮಾಡುವ ಸಂಕೇತ ಇದಾಗಿದೆ. ಮಾಂಗಲ್ಯದ ನಂತರ ಹೋಮ ಮಾಡುವುದು, ಅರುಂಧತಿ ನಕ್ಷತ್ರ ದರ್ಶನ ಬಹುತೇಕ ವರ್ಗಗಳಲ್ಲಿ ಕಂಡುಬರುತ್ತದೆ. ಮತ್ತೆ ಕೆಲವರು ನೀರಿನಲ್ಲಿ ಮೂಗುತಿ, ಉಂಗುರು ಹಾಕಿ ಹುಡುಕಲು ಹೇಳುವರು. ಯಾರು ಹುಡುಕುತ್ತಾರೋ ಅವರೇ ಜೀವನದಲ್ಲಿ ಮುಂದೆ ಅಧಿಕಾರವನ್ನು ಚಲಾಯಿಸುತ್ತಾರೆ ಎಂಬ ನಂಬಿಕೆ ಇದೆ.

ಮಾಂಗಲ್ಯ ಕಟ್ಟಿಸುವಾಗ ಹುಡುಗಿಗೆ ಕೆಂಪು ಹಳದಿ ಸೀರೆ ಹುಡುಗನಿಗೆ ರೇಶ್ಮೆ ಮಡಿ ಪಂಚೆ ದೋತ್ರ ಪೈಜಾಮ ತೊಡಿಸುತ್ತಾರೆ. ಮೈಸೂರಿನ ಪೇಟಾ ತೊಡಿಸುವ ಪದ್ಧತಿ ಕಂಡುಬರುವುದು. ಮದುವೆಯಾದ ನಂತರದಲ್ಲಿ ಅವರವರ ಅನುಕೂಲಕ್ಕೆ ತಕ್ಕಂತೆಯೇ ಗಂಡಿನವರು ಹೇಳಿದ ದಿವಸ ಉಡಿ ತುಂಬಿಸಿಕೊಡುತ್ತಾರೆ. ಉಡಿ ತುಂಬಿ ಕೊಡುವುದಕ್ಕೆ "ಸೋಬಾನ ಪ್ರಸ್ಥ" ಎಂತಲೂ ಕರೆಯುತ್ತಾರೆ, ಕೆಲವು ಮನೆತನಗಳಲ್ಲಿ ಮದು ಮಕ್ಕಳನ್ನು ಮಂಚದ ಮೇಲೆ ಕೂಡಿಸಿ ವಿವಿಧ ತಿಂಡಿ, ಪದಾರ್ಥಗಳನ್ನಿಟ್ಟು ಆರತಿ ಮಾಡುತ್ತಾರೆ.

ಜೊತೆಗೆ ಹಾಲು-ಹಣ್ಣು-ಹಂಪಲುಗಳನ್ನು ಇಟ್ಟಿರುತ್ತಾರೆ, ಮಂಚಕ್ಕೆ ಅಲಂಕಾರವನ್ನು ಸಹ ಮಾಡಿರುವುದನ್ನು ಸೋಬಾನದಲ್ಲಿ ಕಾಣಬಹುದಾಗಿದೆ. ಮುಸ್ಲಿಂರಲ್ಲಿ ಮದುವೆಯಾದ ಐದು ದಿನಗಳವರೆಗೂ ಹೂ ಮುಡಿಸಿ ಆರತಿ ಮಾಡುತ್ತಾರೆ.

ಮದುವೆಯಾದ ೯ನೇ ದಿನ ನಾಗೋಲಿ ಶಾಸ್ತ್ರ ಮಾಡಿ ಹಂದ್ರವನ್ನು ತಿರುವಿ ಹಾಕುತ್ತಾರೆ. ನಂತರದಲ್ಲಿ ಬಾಸಿಂಗ, ಹೂವಿನ ಹಾರ ಎಲ್ಲವನ್ನು ತೆಗೆದುಕೊಂಡು ಹೋಗಿ ಗಂಗೆ ಪೂಜೆ ಮಾಡುವಂತ ಆಚರಣೆಯೂ ಹಿಂದೂ ಸಂಪ್ರದಾಯದಲ್ಲಿ ವಿಶಿಷ್ಟವಾಗಿದೆ.

**ಸೀಮಂತ :** ಸೀಮಂತ ಕಾರ್ಯವನ್ನು ಮನೆಯ ಮಗಳು ಮೊದಲ ಬಾರಿ ಅಂದರೆ ಚೊಚ್ಚಲ ಗರ್ಭಿಣಿಯಾದರೆ ಆಕೆಗೆ ೭ನೇ ತಿಂಗಳಲ್ಲಿ ಅಥವಾ ೮ನೇ ತಿಂಗಳಲ್ಲಿ ಸೀಮಂತ ಕಾರ್ಯವನ್ನು

ಮಾಡುತ್ತಾರೆ. ಹಾಗೇ ಗರ್ಭಿಣಿ ಮಾನಸಿಕವಾಗಿ ದೈಹಿಕವಾಗಿ ತುಂಬಾನೇ ಶಾಂತಳಾಗಿರಬೇಕು. ಸದಾ ಉಲ್ಲಾಸಿತಳಾಗಿರುವುದರಿಂದ ಹುಟ್ಟುವ ಮಗು ಎಲ್ಲಾ ರೀತಿಯಲ್ಲಿ ಚೆನ್ನಾಗಿರುತ್ತದೆ ಎಂಬ ದೃಷ್ಟಿಯಿಂದ ಗರ್ಭಿಣಿಗೆ ಈ ರೀತಿಯಾದ ಆಚರಣೆಗಳನ್ನು ಮಾಡಿ ಸಂತೋಷಪಡಿಸುವಂತಹ ಉದ್ದೇಶ ಇದಾಗಿದೆ. ಈ ಭಾಗದಲ್ಲಿ ಸೀಮಂತವನ್ನು ಅದ್ದೂರಿಯಾಗಿ ಶಾಸ್ತ್ರೋಕ್ತವಾಗಿಯೇ ಎಲ್ಲರೂ ಮಾಡುತ್ತಾರೆ. ಸೀಮಂತವನ್ನು ಸಾಮಾನ್ಯವಾಗಿ ಇಲ್ಲಿ ತವರಿನ ಮನೆಯವರೇ ಮಾಡುತ್ತಾರೆ. ಒಂದು ವೇಳೆ ಹೆಣ್ಣು ಮಗಳು ಗಂಡನ ಮನೆಯಲ್ಲಿಯೇ ಸೀಮಂತ ಮಾಡಿ ಕರೆದುಕೊಂಡು ಹೋಗಲು ಒಳ್ಳೆಯ ದಿನ, ಸಮಯವೂ ಮುಖ್ಯ. ಏಳು ಅಥವಾ ಒಂಭತ್ತು ಜನರು ಬರುತ್ತಾರೆ.ಅವರು ಮುತ್ತೈದೆಯರೇ ಆಗಿರುತ್ತಾರೆ. ಗರ್ಭಿಣಿಗೆ ಹೊಸ ಸೀರೆ ರವಿಕೆ ಕೊಟ್ಟು ಎಲೆ, ಅಡಿಕೆ, ಹೂವು, ಅರಿಶಿನ, ಕುಂಕುಮ, ಬಟ್ಟೆ ಹಾಗೂ ಎಲ್ಲಾ ತರಹದ ಹಣ್ಣುಗಳನ್ನು ಮಾಡಬೇಕು. ನಂತರ ತಲೆಮೇಲೆ ಅಕ್ಕಿ ಕಾಳು ಹಾಕಿ ಕೊಬ್ಬರಿ ಬೆಲ್ಲ ತುಂಬಿದ ತಟ್ಟೆಯನ್ನು ನೀಡುತ್ತಾರೆ. ಗರ್ಭಿಣಿಯು ಬರುವಾಗ ಅಲ್ಲಿರುವ ಪ್ರತಿಯೊಬ್ಬರ ಹಿರಿಯರಿಗೂ ಎಲೆ ಅಡಿಕೆ ಕೊಟ್ಟು ಕಾಲಿಗೆ ಬಿದ್ದು ಆಶೀರ್ವಾದವನ್ನು ಪಡೆದುಕೊಂಡು ಬರುತ್ತಾಳೆ. ತವರಿನಲ್ಲಿ ತನ್ನ ಬಯಕೆಗಳನ್ನು ತವರಿನವರೇ ಪೂರೈಸುತ್ತಾರೆ.

**ಸೂತಕ ಕಳೆಯುವುದು :** ವ್ಯಕ್ತಿ ಹುಟ್ಟಿದಾಗ ಮತ್ತು ಸತ್ತಾಗ ಇಲ್ಲಿನ ಜನರಿಗೆ ಸೂತಕವಾಗುತ್ತದೆ. ಮಗು ಹುಟ್ಟಿದ ೭ನೇ ದಿನಗಳಾದ ನಂತರ, ವ್ಯಕ್ತಿ ಸತ್ತಾಗ ೯, ೧೩ ಹಾಗೂ ೧೧ನೇ ದಿನಗಳಿಗೆ ಸೂತಕ ತೆಗೆಯುತ್ತಾರೆ. ಮನೆಯ ಪ್ರತಿಯೊಂದು ವಸ್ತುಗಳನ್ನು ಸ್ವಚ್ಛಗೊಳಿಸಿ ಎಲ್ಲಾ ಬಟ್ಟೆಗಳನ್ನು ತೊಳೆದು ಕಸತುಂಬಿ ಮನೆಯನ್ನು ಸಾರಿಸಿ, ಹೊಸ ನೀರು ತಂದು ಬಟ್ಟೆ ಬರೆ ಎಲ್ಲಾ ಸಾಮಾನುಗಳನ್ನು ಬೆಳಗ್ಗೆ ತೊಳೆದು, ಮನೆ ಕೋಣೆ ಎಲ್ಲಾ ಸಾರಿಸಿ, ಗುಡಿಸಿ ಪಡಸಾಲೆ ತೊಳೆದು ಹಿತ್ಲು-ಗಿತ್ಲು ಎಲ್ಲ ಸ್ವಚ್ಛ ಮಾಡಬೇಕು. ಮನೆ ಮುಂದೆ ಸಗಣಿ ಹಾಕಿ, ರಂಗೋಲಿ ಹಾಕಿ, ಎಡೆಹಾಕಿ ಪೂಜೆಮಾಡಿ ಹೀಗೆ ಪ್ರತಿಯೊಂದು ಜನನ ಮತ್ತು ಮರಣ ಹೊಂದಿದಾಗ ಸೂತಕ ಕಳೆಯುವುದು ಕಡ್ಡಾಯವಾಗಿದೆ. ಇದು ಅವರವರ ಒಕ್ಕಲಿನಲ್ಲಿ ಅಣ್ಣ-ತಮ್ಮ ಸಂಬಂಧಿಕರಲ್ಲಿ ಸತ್ತರೆ ಅಥವಾ ಹುಟ್ಟಿದರೆ ಮಾತ್ರ. ಬೇರೆ ಒಕ್ಕಲಿನಲ್ಲಿ ಸತ್ತರೆ ಅಥವಾ ಹುಟ್ಟಿದರೆ ಸೂತಕ ತೆಗೆಯುವುದಿಲ್ಲ.

**ಶವಸಂಸ್ಕಾರ ಪದ್ಧತಿ :** ಭೂಮಿಯ ಮೇಲೆ ಹುಟ್ಟಿದ ಪ್ರಾಣಿ, ಜೀವಿ ಒಂದಲ್ಲ ಒಂದು ದಿನ ಸಾಯಲೇಬೇಕು. ಹುಟ್ಟಿದಾಗ ಯಾವ ರೀತಿ ಸಂಸ್ಕಾರ ದೊರೆಯುತ್ತದೆಯೋ ಸತ್ತ ಮೇಲೂ ಅನೇಕ ಸಂಸ್ಕಾರಗಳನ್ನು ನಡೆಸಲಾಗುತ್ತದೆ. ಆಯಾ ಸಂಪ್ರದಾಯದ ಅನುಗುಣವಾಗಿ ಮಾಡಲಾಗಿದೆ.

ಶವವನ್ನು ಹೂಳುವುದು, ಸುಡುವುದು ಎರಡು ರೀತಿಯಾದ ಪದ್ಧತಿಯನ್ನು ಕಾಣಬಹುದು. ಪಂಚಭೂತಗಳಿಂದಾದ ಈ ಶರೀರವನ್ನು ಪಂಚಭೂತಗಳಲ್ಲಿ ಲೀನ ಮಾಡುವಾಗ ದೇಹದಿಂದ ಬಿಟ್ಟು ಹೋದ ಆತ್ಮಕ್ಕೆ ಒಂದು ಉತ್ತಮವಾದ ಮುಕ್ತಿ ನೀಡಬೇಕು. ಆದ್ದರಿಂದ ಅವು ಅಂತ್ಯ ಕ್ರಿಯೆಗಳಷ್ಟೇ ಅಲ್ಲ, ಅವು ಉತ್ತರ ಕ್ರಿಯೆಗಳು, ಅವು ಅನೇಕ ಶಾಸ್ತ್ರ ವಿಧಿಗಳಿಂದ ಕೂಡಿರುವುದರಿಂದ ನಾವು ಇದನ್ನು ಸಂಸ್ಕಾರ ಎಂದು ಕರೆಯುತ್ತೇವೆ. ಸಾಮಾನ್ಯವಾಗಿ ಶವವನ್ನು ಬಿದಿರಿನ ಚೆಟ್ಟದ ಮೇಲೆ ಮಲಗಿಸಿ ಸ್ಮಶಾನಕ್ಕೆ ಕೊಂಡೊಯ್ಯುತ್ತಾರೆ. ಶವವನ್ನು ಪೂರ್ವ ಅಥವಾ ಉತ್ತರಕ್ಕೆ ಮುಖ ಮಾಡಿ ಹೂಳುವುದು ಈಗಲೂ ಆಚರಣೆಯಲ್ಲಿರುವುದು. ಮರಣವಾದ ಹನ್ನೊಂದನೆ ದಿನ ಶಿವಗಣಾರಾಧನೆಯನ್ನು ಆಚರಿಸಿ ಬಂಧು ಮಿತ್ರರಿಗೆ ಭೋಜನ ಮಾಡುತ್ತಾರೆ. ಮುಸ್ಲಿಂರು ಸಾಯುವಾಗ ಕಲಿಮಾ ಓದಿಸಿ ನೀರು ಹಾಕುತ್ತಾರೆ.

ಸತ್ತ ನಂತರ ಶವವನ್ನು ಸ್ನಾನದಿಂದ ಶುದ್ಧೀಕರಿಸಿ ಪುರುಷನಾದರೆ ಬಿಳಿ ಬಟ್ಟೆ, ಸ್ತ್ರೀಯಾದರೆ ಕೆಂಪು ಬಟ್ಟೆಯನ್ನು ತೊಡಿಸಿ, ಸುಗಂಧವನ್ನು ಬಟ್ಟೆಗೆ ಹಚ್ಚಿ, ಕಣ್ಣಿಗೆ ಕಾಡಿಗೆ ಹಚ್ಚುತ್ತಾರೆ. ಸ್ತ್ರೀಯಾದರೆ ಮದುವೆ ವಧುವಿನಂತೆಯೇ ಅಲಂಕಾರ ಮಾಡಿರುತ್ತಾರೆ.

ಈ ಸಂದರ್ಭದಲ್ಲಿ ಹೊರಗಾದ ಹೆಂಗಸರನ್ನು ಹತ್ತಿರ ಸೇರಿಸುವುದಿಲ್ಲ. ಶವದ ಸುತ್ತ ಬಂಧು ಮಿತ್ರರು ಕುಳಿತು 'ಕುರಾನ್' ಪಠನೆ ಮಾಡುತ್ತಾರೆ. ಶವ ಸಂಸ್ಕಾರಕ್ಕೆ ಮೊದಲು ನಮಾಜ್ ಮಾಡುತ್ತಾರೆ. ತಲೆಯನ್ನು ಉತ್ತರ ದಿಕ್ಕಿಗೆ ಮುಖಮಾಡಿ 'ಮೆಕ್ಕ' ಕಡೆಗೆ ಮಾಡಿ ಶವವನ್ನು ಹೂಳುತ್ತಾರೆ. ಸಾಯುವುದಕ್ಕೆ ಮುಂಚೆ ಗಂಗಾ ಜಲವನ್ನು ಬಿಡುವುದು ರೂಢಿಯಲ್ಲಿದೆ. ಲಿಂಗಾಯಿತರು, ಕುರುಬ, ಹರಿಜನ, ಶವವನ್ನು ಕೂಡಿಸಿ ಗೂಟಕ್ಕೆ ಬಡಿಯುತ್ತಾರೆ. ಶವಕ್ಕೆ ಸ್ನಾನ ಮಾಡಿಸಿ ವಿಭೂತಿ, ಕುಂಕುಮ ಹಚ್ಚಿ ಕೈಯಲ್ಲಿ ಪತ್ರೆ, ಹೂವನ್ನು ಕೊಡುತ್ತಾರೆ. ಬಾಯಲ್ಲಿ ತಾಂಬೂಲ ಕುಟ್ಟಿ ಇಡುವರು. ಶವದ ಹತ್ತಿರ ಕೆಳಗೆ ಆರತಿ ಹಚ್ಚಿ ಇಡುತ್ತಾರೆ. ಇನ್ನಿತರ ಸಮುದಾಯಗಳಲ್ಲಿ ಶವವನ್ನು ಮಲಗಿಸುತ್ತಾರೆ. ಇವರು ಶವವನ್ನು ಸುಡುತ್ತಾರೆ. ಕುರುಬ, ಲಿಂಗಾಯಿತ, ಹರಿಜನ, ವಡ್ಡರು ಶವವನ್ನು ಹೂಳುತ್ತಾರೆ.

ಮುಸ್ಲಿಂರನ್ನು ಬಿಟ್ಟು ಬಂಧುಗಳು ಬರುವವವರೆಗೆ ಶವದ ಮುಂದೆ ಭಜನೆ ಮಾಡುತ್ತಾರೆ. ಆದರೆ ಬ್ರಾಹ್ಮಣರು ಮಾತ್ರ ಶವವನ್ನು ಬೇಗನೆ ಸ್ಮಶಾನಕ್ಕೆ ಕೊಂಡೊಯ್ಯುತ್ತಾರೆ. ಅಷ್ಟೇ ಅಲ್ಲದೆ, ಲಿಂಗಾಯಿತರು ಶವವನ್ನು ಕಾಲುಮಡಿಚಿ ಕೂಡಿಸಿ ಅಲಂಕರಿಸುತ್ತಾರೆ.

ಸಂಸ್ಕಾರಗಳು ಒಂದು ಸಮುದಾಯದ ಸಂಪ್ರದಾಯಗಳ ಪ್ರಮುಖ ಅಂಗಗಳಾಗಿರುವುದ ರಿಂದ ಆಯಾ ಸಮುದಾಯಕ್ಕೆ ಸಂಬಂಧಿಸಿದಂತೆ ಶವ ಸಂಸ್ಕಾರಗಳಿಗೆ ಗಮನವವನ್ನು ಕೊಡಬೇಕಾಗುತ್ತದೆ. ಮನುಷ್ಯನ ದೇಹ ಜನನ ಪೂರ್ವದಿಂದಲೂ ಆಚರಣೆ ಸಂಸ್ಕಾರಗಳಿಗೆ

ಒಳಪಟ್ಟಿದೆ. ಈ ದೇಹದ ಮರಣಾನಂತರವೂ ಅನೇಕ ಸಂಸ್ಕಾರಗಳು ನಡೆಯುತ್ತವೆ. ಎಲ್ಲಾ ಸಮುದಾಯಗಳಲ್ಲೂ ಈ ಆಚರಣೆಗಳಿಂದ ಕೂಡಿವೆ. ಜೀವಂತ ವ್ಯಕ್ತಿಗೆ ಮಾಡುವ ವಿಧವಿಧವಾದ ಕ್ರಿಯಾಚರಣೆಗಳು ಎಷ್ಟು ಮುಖ್ಯವೋ ನಂತರ ಮಾಡುವಂತಹ ಕ್ರಿಯಾಚರಣೆಗಳು ಪಂಚಭೂತಗಳಿಂದಾದ ಕಾರ್ಯವೂ ಪಂಚಭೂತಗಳಿಗೆ ದೇಹದಿಂದ ಪರಿತ್ಯಕ್ತವಾದ ಆತ್ಮಕ್ಕೆ ಒಂದು ಉತ್ತಮವಾದ ನೆಲೆಯನ್ನು ಅನುಸಂಧಾನ ಮಾಡುವ ಉದ್ದೇಶವೂ ಆಗಿರುತ್ತದೆ. ಆದ್ದರಿಂದ ಅವು ಅಂತ್ಯಕ್ರಿಯೆಗಳು. ಅಲ್ಲಿ ಅವು ಉತ್ತರ ಕ್ರಿಯೆಗಳು.

ಸಾಮಾನ್ಯವಾಗಿ ಎಲ್ಲಾ ಸಮುದಾಯದಲ್ಲಿ ವ್ಯಕ್ತಿಯ ಜೀವ ಹೋಗುತ್ತಿದೆ ಎಂದು ತಿಳಿದಾಗ ವ್ಯಕ್ತಿಯ ಬಾಯಿಗೆ ಅವರ ಮಕ್ಕಳಿಂದ ನೀರು, ಹಾಲು ಬಿಡಿಸುತ್ತಾರೆ. ಮಕ್ಕಳು ಯಾರು ಹತ್ತಿರ ಇಲ್ಲದಿದ್ದರೆ ಅಲ್ಲಿರುವ ಯಾರಾದರೂ ಬಿಡುತ್ತಾರೆ. ಶಾಸ್ತ್ರೋಕ್ತವಾಗಿ ಮೂರು ಬಾರಿ ನೀರು ಬಿಡುವುದು ಇದೆ. ವ್ಯಕ್ತಿ ಸಾಯುತ್ತಾ ಇದ್ದಾನೆ, ಈಚೆ ಗಿಡಿ ಎಂಬ ಪದ ಬಳಸುತ್ತಾರೆ. ಅಂದರೆ ವ್ಯಕ್ತಿ ಕೆಲವೇ ನಿಮಿಷಗಳಲ್ಲಿ ಪ್ರಾಣ ತ್ಯಾಗ ಮಾಡುತ್ತಾನೆ. ಎಂದೇ ಅರ್ಥ. ವ್ಯಕ್ತಿ ಮನೆಯ ಒಳಗಡೆ ನೋಡುತ್ತಿದ್ದಾರೆ. ಅವರಿಗೆ ಮುಕ್ತಿ ಸಿಗುವುದಿಲ್ಲ ಎಂಬುದು ಇಲ್ಲಿನ ಜನರ ನಂಬಿಕೆ. ೩ ತಿಂಗಳು, ೬ ತಿಂಗಳು ಒಂದು ವರ್ಷಗಳ ಕಾಲ ಮನೆಯನ್ನು ತೊರೆಯಬೇಕಾಗುತ್ತೆ. ಆದಕಾರಣ ಪ್ರಾಣ ಹೋಗುತ್ತಿದ್ದಂತೆ ಈಚೆಗಿಡಿಯುವುದು ಇಲ್ಲಿಯ ಸಂಸ್ಕಾರವಾಗಿದೆ. ವ್ಯಕ್ತಿ ಸತ್ತ ಮೇಲೆ ಕಾಲುಗಳು, ಕೈಗಳನ್ನು ಮಡಿಸುತ್ತಾರೆ. ಕೈಗಳನ್ನು ಎದೆಯ ಮೇಲಿಡುತ್ತಾರೆ. ಕಣ್ಣು ಮುಚ್ಚುತ್ತಾರೆ. ಮುಖ ಒರೆಸಿ ವಿಭೂತಿ ಧಾರಣೆ ಮಾಡುತ್ತಾರೆ. ದಾಸಯ್ಯಗಳಾದವರಿಗೆ ನಾಮವನ್ನು ಬರೆಯುತ್ತಾರೆ. ಪಕ್ಕದಲ್ಲೇ ಒಂದು ಲೋಟದಲ್ಲಿ ಅಕ್ಕಿ ತುಂಬಿ ಗಂಧದ ಕಡ್ಡಿ ಹತ್ತಿಸಿ ಇಡುತ್ತಾರೆ. ಮನೆಯ ಮುಂದೆ ಹಳೇಕೊಂಟುಗಳಿಂದ ಬೆಂಕಿ ಹಾಕುತ್ತಾರೆ. ಮುಂದೆ ಬೆಂಕಿ ಹಾಕುವುದು ಯಾರಾದರೂ ಸತ್ತಿದ್ದಾರೆ ಎಂದರ್ಥ. ಶವಸಂಸ್ಕಾರ ಆಗುವವರೆಗೆ ಈ ಬೆಂಕಿ ಹೊಗೆ ಹಾಕುತ್ತಲೇ ಇರಬೇಕು. ನಂತರ ಎಲ್ಲಾ ಬಂಧು ಬಾಂಧವರಿಗೆ ತಿಳಿಸುತ್ತಾರೆ. ಎಲ್ಲರು ಬರುವವರೆಗೆ ರಾತ್ರಿಯಲ್ಲಾ ದೇವರ ಹಾಡು, ಹರಿಕಥೆಗಳನ್ನು ಕೇಳುತ್ತಾ ಬರುವವರಿಗಾಗಿ ಕಾಯುತ್ತ ಕುಳಿತುಕೊಳ್ಳುತ್ತಾರೆ. ಈ ನಡುವೆ ಬಂಧು ಬಾಂಧವರು ಗೋಳಾಡುತ್ತಾರೆ. ಸತ್ತ ವ್ಯಕ್ತಿಯ ಗುಣಗಾನ ಮಾಡುತ್ತಾರೆ. ಸುಮ್ಮನೆ ಸಮಾಧಾನ ಪಡಿಸುತ್ತಾರೆ. ಊರಿನ ಹಿರಿಯರು ಅನುಭವದಂತೆ, ಮುಂದೆ ನಂತರ ಶವ ಸಂಸ್ಕಾರಕ್ಕೆ ಬೇಕಾದ ಸಿದ್ಧತೆ ಮಾಡುತ್ತಾರೆ.

ಶವವನ್ನು ಸ್ನಾನ ಮಾಡಿಸಿ, ಅದನ್ನು ಕುಳ್ಳಿರಿಸಿ ಅಥವಾ ಮಲಗಿಸಿ ತಮಟೆಯವನನ್ನು ಕರೆಸಿ ತಮಟೆ ಬಾರಿಸುತ್ತಾರೆ. ಪ್ರತಿಯೊಂದು ಶಾಸ್ತ್ರ ಮಾಡುವಾಗ ತಮಟೆಯ ಸದ್ದು ಇರಲೇಬೇಕು. ಶಾಸ್ತ್ರ ಮಾಡಲು ಪ್ರಾರಂಭವಾಗುತ್ತ ತಮಟೆ ಸಿದ್ಧ ಮಾಡ್ರಿ ಎಂದು ಹೇಳುತ್ತಾರೆ.

**ಚಟ್ಟ :** ಸಾಮಾನ್ಯವಾಗಿ ಹೆಣ ಹೊರಲು ಮಾಡುವಂತ ಸಾಧನವೇ ಚಟ್ಟ. ಇದನ್ನು ಬಿದಿರಿನಿಂದಲೇ ಮಾಡುವುದು ವಿಶೇಷವಾಗಿದೆ. ಮನೆಯಲ್ಲಿರುವ ಹಳೆಯ ಬಿದಿರಿನ ಗಳಗಳನ್ನು ತೆಗೆದುಕೊಂಡು ಉದ್ದನೆಯ ೨ ಬೊಂಬುಗಳನ್ನು ತಂದು ಆರು ಏಳು ಅಡಿ ಉದ್ದದ ಅಳತೆಗೆ ಸಮಾನವಾಗಿ ಕತ್ತರಿಸಿ ಅವುಗಳನ್ನು ೨ ಬಿದಿರಿನ ಬೊಂಬುಗಳಿಗೆ ಅಡ್ಡಲಾಗಿಟ್ಟು, ಹಗ್ಗ ಹಾಸಿಗೆ ದಿಂಬು ಇಡುತ್ತಾರೆ. ೪ ಮೂತಿಯಿಂದ ಸೇರಿದ ಗೋಪುರದ ರೀತಿಯಲ್ಲಿ ಬಿದಿರಿನಿಂದ ಬೊಂಬುನಿಟ್ಟು ಕಮಾನು ಕಟ್ಟುತ್ತಾರೆ. ಅದರ ತುದಿಗೆ ಕಲಸದ ಹಾಗೆ ಇರುತ್ತದೆ. ಸುತ್ತಲೂ ಹೂವಿನಿಂದ ಅಲಂಕಾರ ಮಾಡಿ ೪ ದಿಕ್ಕುಗಳಿಗೂ ಕಟ್ಟಿ ಅಲಂಕಾರಗೊಳಿಸುತ್ತಾರೆ.

**ಹೆಣಕ್ಕೆ ಶೃಂಗರಿಸುವುದು:** ಸತ್ತ ಹೆಣಗಳಿಗೆ ಶೃಂಗರಿಸುವುದು ಸಹಜವಾಗಿದೆ. ಮನೆಯ ಮುಂದಿನ ಒಂದು ಜಾಗದಲ್ಲಿ ಗುಂಡಿತೋಡಿ ಅಡ್ಡಲಾಗಿ ಒಂದು ಮಣ್ಣಿನ ಮಡಿಕೆ ಇಡುತ್ತಾರೆ. ಹೆಣಕ್ಕೆ ಸ್ನಾನ ಮಾಡಿಸಲು ಒಂದು ದೊಡ್ಡ ತಾಮ್ರದ ಹಂಡೆಯಲ್ಲಿ ನೀರು ಕಾಯಿಸುತ್ತಾರೆ. ಎಲ್ಲ ಸಂಬಂಧಿಕರು ೩-೩ ಜೊಂಬು ನೀರನ್ನು ಹಾಕಿ ಸ್ನಾನ ಮಾಡಿಸುತ್ತಾರೆ. ಹಂಡೆಯಲ್ಲಿ ನೀರನ್ನು ಉಳಿಸದೆ ಎಲ್ಲ ಹೊಯ್ದು ಆ ಮೇಲೆ ಹಂಡೆಯನ್ನು ಬೋರಲು ಹಾಕುತ್ತಾರೆ. ನಂತರ ಒಂದು ಕಟ್ಟೆಯ ಮೇಲೆ ಕೂರಿಸಿ ಹೆಣಕ್ಕೆ ಹೊಸ ಬಟ್ಟೆ ಧರಿಸಿ ವಿಭೂತಿ ಧಾರಣೆ ಮಾಡಿ, ಕುಂಕುಮ ಇಟ್ಟು, ಹೂವಿನಹಾರ ಹಾಕಿ ಎಲ್ಲರೂ ಪೂಜೆ ಮಾಡುತ್ತಾರೆ. ಅಡಿಕೆ ಎಲೆಯನ್ನು ಜಜ್ಜಿ ಪುಡಿ ಮಾಡಿ ಬಾಯಿಗೆ ತುಂಬುತ್ತಾರೆ. ಧೂಪ ಹಾಕಿ ನಮಸ್ಕಾರ ಮಾಡಿದನಂತರ ಹೆಣವನ್ನು ಚಟ್ಟದ ಮೇಲೆ ಮಲಗಿಸುತ್ತಾರೆ. ಕುರ್ಚಿಗೆ ಕಟ್ಟಿ ಕೂರಿಸುತ್ತಾರೆ. ಆ ಕಡೆ ಈ ಕಡೆ ಜಾರದಂತೆ ದಾರದಿಂದ ಬಿಗಿದು ಕಟ್ಟುತ್ತಾರೆ. ೪ ಮೂಲೆಯಲ್ಲಿ ೪ ಜನರು ನಿಂತು ಒಂದೇ ಸಮತಾಗಿ ಚಟ್ಟವನ್ನು ಎತ್ತಿ ೩ ಸುತ್ತ ತಿರುಗಿ ಒಯ್ಯುತ್ತಾರೆ. ದಾರಿಯುದ್ದಕ್ಕೂ ಹೂವು, ಕಾಸನ್ನು ಹೆಣದ ಮೇಲೆ ಎರಚುತ್ತಾರೆ. ಹೆಣದ ಮುಂದೆ ಸತ್ತವನ ಹಿರಿಯ ಮಗ ಮಡಿಕೆಯಲ್ಲಿ ಬೆಂಕಿಕೆಂಡ ಹಾಕಿ ಅದನ್ನು ಹಿಡಿದು ಹೋಗುತ್ತಾನೆ. ಊರಾಚೆ ಸಣ್ಣ-ಸಣ್ಣ ಕಲ್ಲನ್ನು ತೆಗೆದು ಪಕ್ಕದಲ್ಲಿ ಹಾಕುತ್ತಾನೆ. ನಂತರ ಸಂಸ್ಕಾರ ಮಾಡುವ ಜಾಗದಲ್ಲಿ ೩ ಸುತ್ತು ಸುತ್ತಿ ತಲೆಯನ್ನು ದಕ್ಷಿಣ ದಿಕ್ಕಿನ ಕಡೆಗೆ ಮಾಡಿ ಉತ್ತರ ದಿಕ್ಕಿಗೆ ಚಟ್ಟವನ್ನು ಇಳಿಸುತ್ತಾರೆ. ಈ ಪ್ರದೇಶದಲ್ಲಿ ಹೆಣವನ್ನು ಹೂಳುವ ಮತ್ತು ಸುಡುವ ಎರಡು ಸಂಸ್ಕಾರಗಳು ಇವೆ. ಹಿಂದೆ ಹೆಣವನ್ನು ಹೂಳುತ್ತಿದ್ದರು. ಇತ್ತೀಚೆಗೆ ಎಲ್ಲರೂ ಹೆಣವನ್ನು ಸುಡುತ್ತಾರೆ. ಸಮನಾದ ಜಾಗವನ್ನು ಸಿದ್ಧಮಾಡಿ ಕೆಳಗೆ ದೊಡ್ಡ-ದೊಡ್ಡ ಕೊರಡುಗಳನ್ನಿಟ್ಟು ಅದರ ಮೇಲೆ ಹೆಣ ಇಟ್ಟು ಸುತ್ತಲು ಸೌದೆಗಳನ್ನಿಟ್ಟು ಹೆಣವನ್ನು ಮುಚ್ಚುತ್ತಾರೆ.

**ಕೊಡಲಿ ಪೂಜೆ:** ಇದಾದ ಮೇಲೆ ಸೌದೆಗಳನ್ನು ಕಡಿಯಲು ತಂದಿದ್ದಂತಹ ಕೊಡಲಿಯ ಕಾವನ್ನು ತೆಗೆದು ಹಿಂದು ಮುಂದಾಗಿ ಹಾಕಿ ಅದನ್ನು ನೆಲಕ್ಕೆ ಮೂರು ಸಾರಿ ಮುಟ್ಟಿಸಿ ನಂತರ ಸಮಾಧಿಯ ಮುಂದೆ ಪೂರ್ವಕ್ಕೆ ಹಿಂದೆ ತಿರುಗಿ ಕೊಡಲಿಯನ್ನು ಎಸೆಯುತ್ತಾರೆ. ಹೀಗೆ ಮೂರು ಬಾರಿ ಮಾಡುತ್ತಾರೆ. ನಂತರ ತಂದೆ ಸತ್ತರೆ ಹಿರಿಯ ಮಗನಿಂದ ತಾಯಿ ಸತ್ತರೆ ಕಿರಿಯ ಮಗನಿಂದ ಬೆಂಕಿಯನ್ನು ಹಾಕಿಸುತ್ತಾರೆ. ಮಕ್ಕಳಿಲ್ಲದವರು ಸಂಬಂಧಿಕರ ಕೈಯಲ್ಲಿ ಈ ಕಾರ್ಯ ಮಾಡಿಸುವರು.

**ನೀರು ಮುಟ್ಟುವುದು :** ಕೊನೆಗೆ ಅಲ್ಲಿ ಸೇರಿದವರೆಲ್ಲರಿಗೂ ಎಲೆ ಅಡಿಕೆ ಕೊಡುತ್ತಾರೆ. ಅದನ್ನು ಮನೆಗೆ ಯಾರು ತರುವುದಿಲ್ಲ. ಯಾರಾದರೂ ಅಜ್ಜಿ ಸಿಕ್ಕಿದರೆ ಅವರಿಗೆ ಕೊಟ್ಟು ಬಿಡುತ್ತಾರೆ. ಇತ್ತೀಚೆಗೆ ಚಾಕಲೇಟು ಕೊಡುವ ಪದ್ಧತಿ ಬಂದಿದೆ. ಅಲ್ಲಿಂದಲೇ ಬರುವಾಗ ಪ್ರತಿಯೊಬ್ಬರೂ ನೀರನ್ನು ಮುಟ್ಟಿ ಮುಖ, ಕೈ, ಕಾಲು, ತೊಳೆದು ತಲೆಯ ಮೇಲೆ ನೀರನ್ನು ಚಿಮುಕಿಸಿಕೊಂಡು ಬರುತ್ತಾರೆ. ದೇವಸ್ಥಾಕ್ಕೆ ಹೋಗಿ ಎಲ್ಲರೂ ಕೈ ಮುಗಿದು ನಂತರ ಸತ್ತವನ ಮನೆಯ ಹತ್ತಿರ ಹೋಗಿ ಶವ ಸಂಸ್ಕಾರ ದಿನವೂ ಮನೆಯ ಬಾಗಿಲು ಹಾಕದ ಎಲ್ಲಿಯೂ ಹೋಗದೆ ಯಾರಾದರು ಹಿರಿಯಾಕೆ ಅಜ್ಜಿ ಇದ್ದುಕೊಂಡು ಮನೆ ಕಸಗೂಡಿಸಿ ಸಗಣಿ ಹಾಕಿ ಸಾರಿಸಿ ಹೆಣ ಇರುವ ಜಾಗದಲ್ಲಿ ಉರಿಯುವ ದೀಪ ಇಟ್ಟಿರುತ್ತಾರೆ. ಆ ದೀಪ ನೋಡಿ ಕೈ ಮುಗಿದು ತಮ್ಮ ಮನೆಗೆ ಹೋಗುತ್ತಾರೆ. ಹಾಗೆ ಮನೆಗಳಿಗೆ ಹೊರಗಡೆ ಸ್ನಾನಮಾಡೇ ಒಳಗೆ ಹೋಗಬೇಕು. ಇಲ್ಲದಿದ್ದರೆ ಒಳಗೆ ಬಿಡುವುದಿಲ್ಲ. ಆ ಮೇಲೆ ನಿಧನ ಹೊಂದಿದ ವ್ಯಕ್ತಿಯ ಮನೆಯವರೆಲ್ಲರಿಗೂ ಬಂಧು ಮಿತ್ರರು ಮನೆಯಲ್ಲೇ ಸ್ನಾನ, ಊಟ, ತಿಂಡಿ, ಟೀಯನ್ನು ಮಾಡಿಸುತ್ತಾರೆ.

**ತಿಥಿ :** ಯಾರೇ ಸತ್ತರು ಇಲ್ಲಿ ೧೧ ದಿನಕ್ಕೆ ತಿಥಿ ಕಾರ್ಯವನ್ನು ಮಾಡುವ ಸಂಪ್ರದಾಯ ಸಾಮಾನ್ಯವಾಗಿದೆ. ಸಮಾಧಿಯ ಹತ್ತಿರ ಹೋಗಿ ಶಾಸ್ತ್ರೋಕ್ತವಾಗಿ ಎಲ್ಲಾ ಸಂಪ್ರದಾಯಗಳನ್ನು ನೆರವೇರಿಸಿ ಬರುತ್ತಾರೆ. ತಿಥಿ ದಿನ ಊರಿಗೆಲ್ಲ ಕುರಿ ಕಡಿದು ಮಾಂಸದ ಆಹಾರದ ಊಟವನ್ನು ಹಾಕುತ್ತಾರೆ. ಇದು ಊರಿನ ಜನರೆಲ್ಲ ಸೇರಿ ಒಟ್ಟಿಗೆ ಕೂಡಿ ಭಾಗವಹಿಸುತ್ತಾರೆ. ಅಂದು ಮುಂಜಾನೆಯಿಂದ ಸಂಜೆಯವರೆಗೂ ಬಿಡುವು ಇಲ್ಲದೆ ಕೆಲಸದಲ್ಲಿ ತೊಡಗುತ್ತಾರೆ.

ಬೆಳಿಗ್ಗೆ ಬೇಗನೇ ಎದ್ದು ಎಲ್ಲರೂ ಕೂಡಿ ಕುರಿಯ ಮಾಂಸವನ್ನೆಲ್ಲ ತುಂಡರಿಸಿ ಸಾರು ಮಾಡುತ್ತಾರೆ. ಮುದ್ದೆ ಅನ್ನ ಇವು ಸಾಮಾನ್ಯವಾಗಿರುತ್ತವೆ. ಎಲ್ಲವೂ ತಯಾರಾದ ಮೇಲೆ ಮನೆಯಲ್ಲಿ ಮಾಡಿರುವಂತೆ ಪ್ರತಿಯೊಂದು ಪದಾರ್ಥವನ್ನು, ತಿಂಡಿ ತೀರ್ಥವನ್ನು ಎಲ್ಲವನ್ನು ತೆಗೆದುಕೊಂಡು ಸಮಾಧಿಯ ಹತ್ತಿರ ಹೋಗಿ ಊರಿನಲ್ಲಿ ಇಷ್ಟ ದೇವರು ಎಲ್ಲವನ್ನು ಕರೆಯುತ್ತಾರೆ/

ಹೊಂಬಾಳ ತಂದು ಸಮಾಧಿಯಲ್ಲಿ ತಲೆಯ ಕಡೆ ಅದಕ್ಕೆ ಹಾಲು-ತುಪ್ಪ ಬಿಡುತ್ತಾರೆ. ಈ ಎಲ್ಲಾ ಶಾಸ್ತ್ರಗಳು ಮುಗಿದ ಮೇಲೆ ಹೆಣ ಹೊತ್ತಿದ್ದವರ ಹೆಗಲನ್ನು ತೊಳೆಯುವ ಕಾರ್ಯ. ಎಷ್ಟು ಜನ ಹೆಣಹೊತ್ತಿರುತ್ತಾರೆ ಅಷ್ಟು ಜನರನ್ನು ಅಂಗಿ ಬಿಚ್ಚಿಸಿ ಭುಜಗಳಿಗೆ ವಿಭೂತಿ ಬಳಿದು ಒನಕೆಯನ್ನು ಹೆಗಲ ಮೇಲೆ ಇಟ್ಟು ದಾಸಯ್ಯ ಆದವನು ಸತ್ತವರ ಹೆಸರನ್ನು ಹೇಳಿ ಕುಲದೇವರು ಹೋಯ್ತು ಎಂದು ೩ ಬಾರಿ/ಸಾರಿ ಹೇಳುತ್ತಾನೆ. ಎಲ್ಲರೂ ಹಾಗೆ ಹೇಳುತ್ತಾರೆ. ಈ ಮೇಲೆ ಹೇಳಿದ ಜೀವನಾವರ್ತನ ಆಚರಣೆಗಳು ಒಟ್ಟಾರೆ ಎಲ್ಲಾ ಸಮುದಾಯಗಳಿಗೆ ಸಂಬಂಧಿಸಿದವುಗಳು. ಇಲ್ಲಿ ಕೆಲವು ಸಮುದಾಯಗಳಲ್ಲಿ ಆಚರಿಸುವ ಜೀವನಾವರ್ತನ ಆಚರಣೆಗಳನ್ನು ಬಿಡಿಬಿಡಿ ಯಾಗಿ ಕೊಡಲಾಗಿದೆ.

### ಕುರುಬರು

### ಹೆಸರಿಡುವುದು

ತಾಯಿ ಮಗುವಿಗೆ ಹೆಸರಿಡುವ ಮುಂಚೆ ಆ ಮಗುವಿಗೆ ಪ್ರೀತಿಯಿಂದ ಬೇಬಿ, ಪುಟ್ಟ, ಪುಟ್ಟಿ, ಬಂಗಾರು, ಚಿನ್ನ ಎಂದು ಕರೆಯುತ್ತಾಳೆ. ನಂತರದಲ್ಲಿ ಆ ಮಗು ಹೆಣ್ಣಾಗಿದ್ದರೆ ಉದಾಹರಣೆಗೆ 'ಅಂಜಲಿ' ಅಂತ ಗಂಡಾಗಿದ್ದರೆ 'ನವೀನ್' ಎಂದು ಇಡುತ್ತಾರೆ. ತವರಿನಿಂದ ತಾಯಿ, ಮಗು ಮತ್ತು ತೊಟ್ಟಿಲನ್ನು ಗಂಡನ ಮನೆಗೆ ತರುತ್ತಾರೆ. ಆ ಮಗುವಿಗೆ ಮಾವನಾಗುವವರು ತೊಟ್ಟಿಲನ್ನು ಹೊತ್ತುಕೊಂಡು ಊರಿನ ದೇವಸ್ಥಾನಕ್ಕೆ ಹೋಗಿ ದರ್ಶನ ಮಾಡಿ ಕಾಯಿ ಕರ್ಪೂರವನ್ನು ಮಾಡಿಸಿಕೊಂಡು ಮನೆಗೆ ಬರುತ್ತಾರೆ.

ಮನೆಯಲ್ಲಿ ಅತ್ತೆಯಾಗುವವರು ಆ ಮಗುವಿಗೆ ಹೆಸರಿಡಬೇಕು. ಆ ತೊಟ್ಟಿಲನ್ನು ಅಲಂಕಾರ ಮಾಡಿ ನಂತರ ತೊಟ್ಟಿಲ ನಾಲ್ಕು ಕಡೆಗೂ ಗುಗ್ಗರಿ ಇಡುತ್ತಾರೆ. ನಂತರ ಅದಕ್ಕೆ ಪೂಜೆ ಮಾಡುತ್ತಾರೆ. ಆ ತೊಟ್ಟಿಲಿಗೆ ಮಗುವನ್ನು ಹಾಕುತ್ತಾರೆ. ಇದನ್ನು ಹೆಸರಿಡುವ ಶಾಸ್ತ್ರ ಎಂತಲೂ ಕರೆಯುತ್ತಾರೆ. ಆ ಅತ್ತೆ ಹೆಸರಿಟ್ಟ ನಂತರ ತನ್ನ ಅಣ್ಣನಲ್ಲಿ ಬಂಗಾರವನ್ನು(ಉಡುಗೊರೆ) ಕೇಳುತ್ತಾಳೆ.

### ಋತುಮತಿ

ಒಬ್ಬ ಹುಡುಗಿ ಸಂಪೂರ್ಣವಾಗಿ ಹೆಣ್ಣಾಗಬೇಕಾದರೆ ಮೊದಲು ಋತುಮತಿಯಾಗಬೇಕು. ೧೨, ೧೪, ೧೬ ವರ್ಷದ ವಯಸ್ಸಿನಲ್ಲಿ ಋತುಮತಿಯಾಗುತ್ತಾರೆ. ೫ ದಿನ ಆಕೆಗೆ ನೀರು ಹಾಕುತ್ತಾರೆ. ಮೊದಲ ೫ ದಿನದವರೆಗೆ ಚಪ್ಪರದಲ್ಲಿ ಕೂಡಿಸುತ್ತಾರೆ. ನಂತರ ಹಾಲು, ತುಪ್ಪ, ಕೊಬ್ಬರಿ ಎಣ್ಣೆಯಿಂದ ಆಕೆಗೆ ಸ್ನಾನ ಮಾಡಿಸಿ, ಆಕೆ ಮಲಗುವ ಕೊಠಡಿಯಲ್ಲಿ ಕಂಬಳಿ ಹಾಕಿ

ಅದರ ಕೆಳಗೆ ಬೇವಿನಸೊಪ್ಪು ಹಾಕಿ ಅದರ ಮೇಲೆ ಆಕೆಯನ್ನು ಕೂಡಿಸುತ್ತಾರೆ. ನಂತರದಲ್ಲಿ ಆಕೆಗೆ ಕೊಬ್ಬರಿ ಕಾರ ಕೊಡುತ್ತಾರೆ.

ಮಧ್ಯಾಹ್ನ ಉಪ್ಪಿಟ್ಟು, ಶ್ಯಾವಿಗೆಯನ್ನು ಊಟಕ್ಕೆ ಮಾಡಿಕೊಡುತ್ತಾರೆ. ಆ ಮೇಲೆ ಆ ಋತುಮತಿಯಾದವಳು ಆ ಶ್ಯಾವಿಗೆಯನ್ನು ಒಂದು ಬೆರಳು, ೨ ಬೆರಳು, ೩ ಬೆರಳಿನಿಂದ ತಿನ್ನಬೇಕು. ಇದು ವಿಶೇಷವಾದಂತಹ ಶಾಸ್ತ್ರವಾಗಿದೆ. ನಂತರ ಸಂಜೆ ಸಮಯದಲ್ಲಿ ಮತ್ತೆ ಅರಿಶಿಣ ಹಚ್ಚಿ ನೀರು ಹಾಕುತ್ತಾರೆ. ಋತುಮತಿಯಾದವಳು ಚಿಕ್ಕ ಮಕ್ಕಳನ್ನು ಮುಟ್ಟುವಂತಿಲ್ಲ. ಸಂಜೆ ಕುರಿಸಿ ಸೋಬಾನ ಹಾಡನ್ನು ಹಾಡುತ್ತಾರೆ. ಹೀಗೆ ೯ ದಿನವರೆಗೆ ಕುರಿಸಿ ಹಾಡನ್ನು ಹಾಡುತ್ತಾರೆ. ೯ ದಿನದ ನಂತರದಲ್ಲಿ ಭೀಗರ ಸಂಬಂಧಿಕರು, ಬಂಧುಗಳು ಬಂದು ಕೊನೆಯ ದಿನ ಸುಖಭೋಜನವನ್ನು ಮಾಡುತ್ತಾರೆ.

**ಹುಟ್ಟು**

ಪ್ರತಿಯೊಬ್ಬರಿಗೂ ಹುಟ್ಟು ಮುಖ್ಯವಾಗಿರುತ್ತದೆ. ಹುಟ್ಟಿದ ನಂತರ ಎಲ್ಲರೂ ಸಾಯಲೇಬೇಕು. "ಹುಟ್ಟು ಖಚಿತ ಸಾವು ನಿಶ್ಚಿತ" ನಂತರ ಜೀವನವನ್ನು ನಡೆಸಿಕೊಂಡು ಹೋಗಬೇಕು. ಹುಟ್ಟಿದ ಮಗುವನ್ನು ಮರದಲ್ಲಿ ಹಾಕಿ ಗಂಡು ಮಗು ಆದರೆ ಬಾರಿಕೋಲು ಹಾಕಿ ನಿವಾಳಿಸುತ್ತಾರೆ(ದೃಷ್ಠಿ ತೆಗೆಯುತ್ತಾರೆ). ಹೆಣ್ಣು ಹುಡುಗಿ ಹುಟ್ಟಿದರೆ ಅದರ ಜೊತೆಗೆ ತಿಡಗುನಿ ಇಡುತ್ತಾರೆ. ಗಂಡು ಮಗು ಹುಟ್ಟಿದರೆ ಸೊಂಟಕ್ಕೆ ಕೆಂಪು ಉಡುದಾರವನ್ನು ಕಟ್ಟುತ್ತಾರೆ. ಹೆಣ್ಣು ಮಗು ಹುಟ್ಟಿದರೆ ಕಲರ್‌ದಾರ ಕಟ್ಟುವ ಶಾಸ್ತ್ರ ಈಗಲೂ ಜೀವಂತವಾಗಿದೆ.

ಹುಟ್ಟಿದ ಮಗುವಿನ ತಾಯಿಗೆ ೩ ದಿನದವರೆಗೆ ನೀರು ಹಾಕುತ್ತಾರೆ. ನಂತರ ಅವರ ಮನೆಯಲ್ಲಿ ಹೊಲೆ ಮನೆಯನ್ನು ತೆಗೆಯುತ್ತಾರೆ. ಸಗಣಿರಾಡಿಯಿಂದ ನೆಲ ಸಾರಿಸಿ ೩ ದಿನದ ನಂತರದಲ್ಲಿ ೯ ದಿನದಲ್ಲಿ/೧೬ ದಿನದಲ್ಲಿ ಗಂಡನ ಮನೆಯವರು ಆಕೆಗೆ ಕಾರ ಕೊಬ್ಬರಿಯನ್ನು ತರುತ್ತಾರೆ. ನಂತರ ಆ ಬಾಣಂತಿಗೆ ಬಿಸಿ ನೀರನ್ನು ಹಾಕುತ್ತಾರೆ. ಆಕೆಗೆ ಗೋಧಿ ಪದಾರ್ಥದಿಂದ ಮಾಡಿದ ಊಟ ಕೊಡುತ್ತಾರೆ. ೧ ತಿಂಗಳು ಆದ ನಂತರ ಹೋಳಿಗೆ ಮಾಡಿಕೊಂಡು ಗಂಗಮ್ಮ ಪೂಜೆ ಮಾಡಿಕೊಂಡು ಬರುವ ಶಾಸ್ತ್ರವನ್ನು ಈಗಲೂ ಕಾಣಬಹುದಾಗಿದೆ.

**ಸಾವು**

ಸಾವು ಮತ್ತು ಹುಟ್ಟು ಒಂದೇ ನಾಣ್ಯದ ಎರಡು ಮುಖಗಳು ಇದ್ದಂತೆ ಸತ್ತಾಗ, ಸತ್ತ ವ್ಯಕ್ತಿಯನ್ನು ನಾಲ್ಕು ಮಂದಿ ಹೊತ್ತುಕೊಂಡು ಹೋಗುವ ಶಾಸ್ತ್ರವನ್ನು ಈಗಲೂ ಕಾಣಬಹುದಾಗಿದೆ. ನಂತರ ೩ ಅಡಿ ಅಗಲ ೬ ಅಡಿ ಉದ್ದದ ಕುಣಿ ತೋಡಿ ಅವರನ್ನು ಮಣ್ಣು ಮಾಡುತ್ತಾರೆ.

ಮಣ್ಣು ಮಾಡಿ ಬರುವಾಗ ಅವರ ನೆರಳು ಬಸುರಿ ಹೆಂಗಸರ ಮೇಲೆ ಬೀಳಬಾರದು. ನಂತರದಲ್ಲಿ ಸತ್ತಮನೆಯಲ್ಲಿ ೩ ದಿನದವರೆಗೆ ಸೂತಕ ಹಾಗೆ ಇರುತ್ತದೆ. ನಂತರ ಅವರು ಮನೆಯಲ್ಲಿ ಕುರಿ, ಕೋಳಿ, ಮಾಂಸ ಮಾಡಿಕೊಂಡು ೩ ದಿನದ(ಇಂಡಿ ಮುರುಕೂಳು) ಎಂದು ಮಾಡುತ್ತಾರೆ.

೯ ದಿನಗಳ ನಂತರದಲ್ಲಿ ಅವರಿಗೆ ಏನು ಏನು ಇಷ್ಟವೋ ಆ ಪದಾರ್ಥಗಳನ್ನು ಅವರ ಫೋಟೋ ಮುಂದೆ ಇಟ್ಟು ಪೂಜೆ ಮಾಡಬೇಕು. ಅಜ್ಜ-ಅಜ್ಜಿ ಆದರೆ ಅವರ ಪ್ರಿಯವಾದ ತೀರ್ಥಗಳು, ತಿಂಡಿಗಳನ್ನು ಸಹ ಇಟ್ಟು ಪೂಜೆ ಮಾಡಬೇಕು. ಪ್ರತಿಯೊಂದು ಹಣ್ಣುಗಳು, ದ್ರಾಕ್ಷಿ, ಮಾವು, ಸಾರಾಯಿ, ತಂಬಾಕು ಮುಂತಾದ ಎಲ್ಲಾ ಇಷ್ಟವಾದ ವಸ್ತುಗಳನ್ನು ಇಡುತ್ತಾರೆ. ನಂತರದಲ್ಲಿ ಅವರ ದಿವಸವನ್ನು ಒಂದು ವರ್ಷದಲ್ಲಿ, ಐದು ವರ್ಷದಲ್ಲಿ ಎಂದು ಅವರ ದಿವಸ ಮಾಡುತ್ತಾರೆ. ಮತ್ತೆ 'ಪಂಚಮಿ ಹಬ್ಬ'ದಲ್ಲಿ 'ಹಿರಿಯರ ಹಬ್ಬ' ಎಂತಲೂ ಮಾಡುತ್ತಾರೆ. ಮತ್ತೆ ದೀಪಾವಳಿಯಲ್ಲಿ ಸಹ ಹಿರಿಯರನ್ನು ಮತ್ತೇ ಸ್ಮರಿಸುತ್ತಾರೆ.

**ಮದುವೆ**

ಈ ವಿಧಾನವು ಎಲ್ಲಾ ಸಮುದಾಯಗಳಲ್ಲಿ ಇರುವಂತೆ ಈ ಸಮುದಾಯದಲ್ಲಿ ಸಹ ನಡೆಯುತ್ತದೆ. ಮದುವೆ ಯಾವ ಗಳಿಗೆ ನಡೆಯಬೇಕು ಎಂಬುದನ್ನು ಚರ್ಚಿಸಿ ನಿರ್ಧರಿಸುತ್ತಾರೆ. ಜೊತೆಗೆ ಲಗ್ನ ಪತ್ರಿಕೆ ಕಟ್ಟಿಸುವುದರ ಬಗ್ಗೆ ಮಾತುಕತೆ ನಡೆಸುತ್ತಾರೆ. ಅಲ್ಲದೆ ಅಡಿಕೆ, ಎಲೆ, ದಕ್ಷಿಣೆ ಇಟ್ಟು ಮುಂದಿನ ವಿಚಾರ ಮಾತನಾಡುತ್ತಾರೆ. ಅಂದು ಸಂಜೆ ಹಿರಿಯರ ಜೊತೆಗೂಡಿ ಲಗ್ನ ಪತ್ರಿಕೆ ಹಂಚುವ ಕಾರ್ಯಕ್ರಮ ನಡೆಸುತ್ತಾರೆ.

**ಬಡಿಗೇರರು**

**ಋತುಮತಿ**

ಹೆಣ್ಣು ಮಗಳು ೧೨ ವರ್ಷ ತುಂಬಿದ ನಂತರ ಅಥವಾ ೧೩, ೧೪ ವರ್ಷದೊಳಗೆ ಋತುಮತಿ ಆಗುತ್ತಾರೆ.

ಈ ಕಾರ್ಯಕ್ರಮಕ್ಕೆ ಮೊಟ್ಟ ಮೊದಲಿಗೆ ಋತುಮತಿಯಾದ ದಿವಸ ತಮ್ಮ ಮನೆಯಲ್ಲಿ ಸಂಬಂಧಿಕರನ್ನು ಕರೆಸಬೇಕು. ತಮ್ಮ ಮಗಳಿಗೆ ನೀರು ಹಾಕಬೇಕು, ಅಥವಾ ತಮ್ಮ ಮನೆಯ ಹತ್ತಿರ, ತಮಗೆ ಇಷ್ಟವಾದವರನ್ನು ಕರೆಸಿ ಅವರ ಕೈಯಲ್ಲಿ ಋತುಮತಿಯಾದವಳಿಗೆ ಉರಸುತ್ತೇವೆ. ನಂತರ ಸಂಭ್ರಮದಿಂದ ಮುಂದಿನ ಕಾರ್ಯಕ್ರಮ ಆರಂಭಿಸುತ್ತಾರೆ. ಋತುಮತಿಯಾದ

ದಿನಾಂಕದಿಂದ ೧೬ ದಿನದವರೆಗೆ ಮನೆಯಲ್ಲಿ ಸಂಭ್ರಮ, ಸಡಗರದಿಂದ ಊರಿನ ಸುತ್ತ ಮುತ್ತಲಿನ ತಮಗೆ ಬೇಕಾದವರನ್ನು ಕರೆಸಿ, ತಮ್ಮ ಮನೆಯಲ್ಲಿ ಕುಳ್ಳಿರಿಸಿ ಆರತಿ ಮಾಡುತ್ತೇವೆ. ಕೊನೆಯ ದಿನ ಅಂದರೆ ೧೬ನೇ ದಿನದಲ್ಲಿ ಅಥವಾ ೯ನೇ ದಿನದಲ್ಲಿ/೫ನೇ ದಿನದಲ್ಲಿ ತಮ್ಮ ಬೀಗರಿಗೆ ವಿಷಯ ತಿಳಿಸಿ, ತಮ್ಮ ಎಲ್ಲಾ ಸಂಬಂಧಿಕರಿಗೆ ಮೃಷ್ಟಾನ್ನ ಭೋಜನ ಮಾಡಿಸುತ್ತಾರೆ. ಮತ್ತು ತಮ್ಮ ಮಗಳಿಗೆ ಆರತಿ ಮಾಡಿ, ಬಂಗಾರ, ಬೆಳ್ಳಿ, ಸೀರೆ ಇತರೆ ಉಡುಗೆಗಳನ್ನು ಕೊಡುತ್ತಾರೆ. ಹಾಗೂ ಪ್ರೀತಿ ವಿಶ್ವಾಸದಿಂದ ಮಾತನಾಡಿಸುತ್ತಾರೆ.

**ಹೂ ಮುಡಿಸುವಿಕೆ**

ಅಂದರೆ ಸೀಮಂತ ಕಾರ್ಯಕ್ರಮವನ್ನು ಹೆಣ್ಣು ಮೊದಲ ಗರ್ಭಿಣಿ ಆದಾಗ ಮಾಡುತ್ತಾರೆ. ಅದಕ್ಕೂ ಮೊದಲು ಬವುಕಿ ಊಟವೆಂದು ಅಂದರೆ ರೊಟ್ಟಿ ಚಟ್ನಿ, ಗೋಧಿ ಚಪಾತಿ, ಲಡ್ಡು, ಭಜಿ, ಮೆಣಸಿನಕಾಯಿ, ಅನ್ನ ಮುಂತಾದ ಅವಳಿಗೆ ಇಷ್ಟವಾದ ಪದಾರ್ಥಗಳನ್ನು ಹೆಣ್ಣಿನ ತವರುಮನೆಯಿಂದ ಗರ್ಭಿಣಿಗೆ ಕಳುಹಿಸುತ್ತಾರೆ. ಆ ದಿನ ಗಂಡನ ಮನೆಯಲ್ಲಿ ನಮ್ಮ ಮಗಳು ನಮ್ಮ ಸೊಸೆ ಇರುತ್ತಾರೆಂದು ಸಂಬಂಧಿಕರು ರೊಟ್ಟಿ, ಕಾಳು ಇತರೆ ಪದಾರ್ಥವನ್ನು ಅವರಿಗೆ ಕೊಡುತ್ತಾರೆ. ಜೊತೆಗೆ ಬಟ್ಟೆ/ಸೀರೆ/ಬಂಗಾರ–ಉಡುಪುಗಳನ್ನು ಸಹ ಕೊಡುತ್ತಾರೆ. ಅಂದರೆ ನಮ್ಮ ರಕ್ತ ಸಂಬಂಧಿಕರನ್ನು ಕರೆಸಿ ಊಟ ಮಾಡಿಸುತ್ತೇವೆ.

**ಹೆಸರಿಡುವಿಕೆ**

ಹೆಸರಿಡುವಿಕೆಯೆಂದರೆ ನಾಮಕರಣ ಎಂದು ಕರೆಯುತ್ತಾರೆ. ಹೆರಿಗೆ ಆದ ದಿನಾಂಕ, ಸಮಯ/ಗಳಿಗೆ ಅಂದರೆ ಯಾವ ಸಮಯ ಹೆರಿಗೆ ಅಗಿರುತ್ತದೆ ದಿನಾಂಕ ಬರೆದುಕೊಂಡು, ಕೂಸಿನ ಹೆಸರಿನ ಬಗ್ಗೆ ಆಚಾರ್ಯರಿಂದ ಯಾವ ಸಮಯ ಚೆನ್ನಾಗಿದೆ ಎಂದು ತಿಳದು, ಇಂಥದ್ದು ಹೆಸರಿಡಬೇಕು ಅಂಥ ಅಂದರೆ ಶಶಿಧರ/ಶಿವ/ದೇವೇಂದ್ರ ಹೀಗೆ ದೇವರ ಹೆಸರಿನಲ್ಲಿ ಕರೆಯುತ್ತಾರೆ.

ಹೆಸರನ್ನು ತೆಗೆದುಕೊಂಡು ಹೋಗಿ ನಮ್ಮ ಮನೆಯವರೆಲ್ಲ ಕುಳಿತುಕೊಂಡು ಹೋಗಿ ೧೬ ದಿನಗಳ ಒಳಗೆ ಸಣ್ಣದಾದ ನಾಮಕರಣ ಮಾಡುತ್ತೇವೆ. ಇದಾದ ನಂತರ ೩ ತಿಂಗಳು/೫ ತಿಂಗಳೊಳಗೆ ಮತ್ತೆ ಸಡಗರದಿಂದ ಸಂಭ್ರಮದಿಂದ ಮನೆಯವರೆಲ್ಲರೂ ಕೂಡಿ ಗಂಡಿನ ಮನೆಯವರು ಸೀರೆ ಮಾಡಿ ದೇವಿ ಊರಮ್ಮ, ರಾಘವೇಂದ್ರ ಸ್ವಾಮಿ/ಆಂಜನೇಯ ಸ್ವಾಮಿ ಹೀಗೆ ದೇವರ ಹೆಸರು ನೆನೆಯುತ್ತ ನಮಗೆ ಬೇಕಾದ ಹೆಸರನ್ನು ಇಡುತ್ತಾರೆ. ಬಲತ್ಕಾರ ಬರುವ ರೀತಿಯಲ್ಲಿ ಹೆಸರು ಇಡುವ ಪದ್ಧತಿ ಈಗಲೂ ನಡೆಯುತ್ತದೆ.

ಸೋದಾರ ಮಾವ/ಚಿಕ್ಕಪ್ಪನ ಕಡೆಗೆ ಹೆಸರಿಡುವ ಪದ್ಧತಿ ನಡೆಯುತ್ತದೆ. ನಂತರ ಕಂದನ ಅಪ್ಪ/ಅಮ್ಮನಿಗೆ ಬೆಳ್ಳಿ, ಬಂಗಾರ ಉಡುಗೊರೆ ಕೊಡುವ ಪದ್ಧತಿ ನಡೆಯುತ್ತದೆ.

**ಸಾವು(ಶವಸಂಸ್ಕಾರ)**

ಸತ್ತ ಸಮಯ ದಿನಾಂಕ ಅಂದರೆ ಯಾವ ಸಮಯ, ಯಾವ ಗಳಿಗೆ, ದಿನಾಂಕ, ನಕ್ಷತ್ರ ತೆಗೆದುಕೊಂಡು ಆಚಾರ್ಯ ಹತ್ತಿರ/ಬ್ರಾಹ್ಮಣರ ಹತ್ತಿರ ಹೋಗಿ ಪ್ರಶ್ನೆ ಕೇಳಿಸುತ್ತಾರೆ. ಗಳಿಗೆ, ನಕ್ಷತ್ರ ದೋಷ ಬಂದಾಗ ಮನೆ ಬಿಡುವುದು, ನಕ್ಷತ್ರ ಸರಿ ಇದ್ದರೆ ಅದೇ ಮನೆಯಲ್ಲಿದ್ದು ೩ ದಿನದಲ್ಲಿ ಒಂದು ಕಾರ್ಯಕ್ರಮ, ಮನೆಯ ಹಿರಿಯರೆಲ್ಲರೂ ಸೀರೆ ಮಾಡ್ತಾರೆ ಅಂದರೆ ಹಿರಿಯ ಮಗ/ಮಗಳು ಇದ್ದರೆ, ೩ ದಿನದ ಮಟ್ಟಿಗೆ ಸತ್ತ ಮನಗೆಗೆ ಬೇಕಾದ ಎಲ್ಲಾ ಆಹಾರವನ್ನು ಕೊಡುತ್ತಾರೆ. ನಂತರ ಅವರ ಸತ್ತ ಜಾಗದಲ್ಲಿ ನೀರು/ಊಟ ಇಡುತ್ತಾರೆ. ಆಗ ಆ ಕಾಡಿನಲ್ಲಿ ಬರುವ ಯಾವುದೇ ಪಕ್ಷಿ/ಪ್ರಾಣಿ ಅಲ್ಲಿ ಬಂದು ಕುಳಿತು ಅದನ್ನು ತಿಂದರೆ ಒಳ್ಳೆಯದು ಎಂಬ ಭಾವನೆ ಈಗಲೂ ಜನರಲ್ಲಿ ಇದೆ. ಒಂದು ವೇಳೆ ಯಾವುದು ಪ್ರಾಣಿ/ಪಕ್ಷಿಗಳು ಬರದಿದ್ದರೆ, ಏನೋ ಆಗಿದೆ ಎಂಬ ಭಾವನೆ ಮೂಡಿ, ಮುಂದಿನ ವಿಚಾರಗಳನ್ನು ಚರ್ಚಿಸುವ ಪದ್ಧತಿ ಇದೆ.

**ಮದುವೆ**

ಮೊಟ್ಟ ಮೊದಲಿಗೆ ನಮ್ಮ ಸಂಬಂಧಿಕರಲ್ಲಿ ನಾಲ್ಕು ಜನ ಸೀರೆ, ಮದುವೆ ದಿನಾಂಕ/ಯಾವುದು ಯಾವ ದಿನಾಂಕ, ಯಾವ ಗಳಿಗೆ, ಮೂಹೂರ್ತ ಚೆನ್ನಾಗಿದೆ ಎಂಬುದನ್ನು ನಿರ್ಧಾರ ಮಾಡಿಕೊಂಡು ಲಗ್ನ ಪತ್ರಿಕೆಯನ್ನು ಹಾಕಿಸಿಕೊಳ್ಳುತ್ತೇವೆ. ಮತ್ತು ಮದುವೆಯ ಮೂರು ದಿನ ಮುಂಚಿತವಾಗಿ ಅಡಿಕೆ ಎಲೆ, ದಕ್ಷಿಣೆ ಇಟ್ಟು ಅಹಂದರ ಹಾಕಲಿಕ್ಕೆ ವೀಳ್ಯದೆಲೆ ಕೊಟ್ಟು ಬರುತ್ತೇವೆ. ಅಂದು ಆಕಿದ ನಂತರ ಅಂದ್ರೆ ಪೂಜೆ ಅವರ ಕಡೆಗೆ ಮಾಡಿಸಿ ತಿಂಡಿ–ತೀರ್ಥ ಮುಗಿಸಿದ ನಂತರ ಮೂರು ದಿನ ಊರಿನ ಜನ ಮುತ್ತೈದೆರು ಸಾಯಂಕಾಲ ೪.೩೦ರಿಂದ ಊರಿನ ಮನೆ–ಮನೆಗಳಿಗೆ ಹೋಗಿ ಲಗ್ನ ಪತ್ರಿಕೆ ಹಂಚಿ ಬರುತ್ತೇವೆ ಮತ್ತು ೩ನೇ ದಿನ ಮದುಮಗನನ್ನು ಮಾಡಿ, ಅರಿಸಿನ ಹಚ್ಚಿ ಬರುತ್ತೇವೆ. ಅಲ್ಲದೆ ಹೆಣ್ಣಿನವರಿಗೆ ಲಗ್ನದ ಅಕ್ಕಿಯನ್ನು ಮಾಡಿ ಕೊಟ್ಟು ಬರುತ್ತೇವೆ. ನಂತರ ಸಂಜೆ ಹಾಸ್ಯ ಕಾರ್ಯಕ್ರಮ ಹಮ್ಮಿಕೊಂಡು ಸಂತೋಷ ಪಡುತ್ತಾರೆ.

**ವೀರಶೈವರು**

**ಸೀಮಂತ(ಹೂ ಮುಡಿಸುವ ಕಾರ್ಯ)**

ಈ ಸೀಮಂತ ಕಾರ್ಯವನ್ನು ಸ್ತ್ರೀಯರು ಗರ್ಭಧಾರಣೆಯಾದ ೪, ೬, ೮ನೇ ತಿಂಗಳಲ್ಲಿ ಜೋತಿಷ್ಯದಿಂದ ನಿರ್ಧರಿಸಲ್ಪಟ್ಟ ಶುಕ್ಲ ಪಕ್ಷದ ಶುಭ ತಿಥಿ, ಶುಭ ನಕ್ಷತ್ರದಲ್ಲಿ ಮಾಡಬೇಕಾಗುವುದು

ಪೂರ್ವೋಕ್ತ ಪ್ರಕಾರವಾಗಿ ಮನೆಯನ್ನು ಸಾರಣೆ ಎಹಾಗೂ ರಂಗವಲ್ಲಾದಿಗಳಿಂದ ಅಲಂಕಾರ ಮಾಡಿ ನಾಂದೀ ಸಮಾರಾಧನೆಗಳನ್ನು ಆಚರಿಸಿ ಶುದ್ಧ ಪ್ರದೇಶದಲ್ಲಿ ಭದ್ರಸನದ ಮೇಲೆ ಪತಿಯು ತನ್ನ ಬಲಭಾಗದಲ್ಲಿ ಪತ್ನಿಯನ್ನು ಕುಳ್ಳಿರಿಸಿಕೊಂಡು ಪ್ರಾಣಾಮಾಯವನ್ನು ಮಾಡಿ ದೇವಾನಾಮಗಳನ್ನುಚ್ಚರಿಸಿ–

"ಗಾಯೇತಾಮಿ ವೀಣಾ ಗಾರಿ, ನೌಸಗ್ಂಶಾಸ್ತ್ರಿ
ಸೋಮಯೆವಿನೋರಾಜೆತ್ಯಪು ಭ್ರಷಣೀ ಪ್ರಜಾಃ
ವಿವೃತ್ತ ಚಕ್ರ ಆಸ್ತಿಗೆನಾಸ್ತಿ ದೇಣ ಮಮನೇ ತವ॥;

ಹೀಗೆ ಹೇಳಿ ವೀಣಾಗಾನ ಮಾಡಿಸುತ್ತ ಮುತ್ತೈದೆಯರು ಮಂಗಲಕರವಾದ ಪದ್ಯವನ್ನಾಗಲೀ ಅಥವಾ ಪದಗಳನ್ನಾಗಲೀ ಹಾಡುವುದು ಶಿವ ಮಹೇಶ್ವರರಿಂದ ಆಶೀರ್ವಾದವನ್ನು ತೆಗೆದುಕೊಳ್ಳುವರು.

**ಹೆಸರಿಡುವಿಕೆ**

ಜ್ಯೋತಿಷ್ಯರಿಂದ ನಿರ್ಧಾರ ಮಾಡಿದ ಶುಭ ದಿವಸದಲ್ಲಿ ಮೊದಲು ಶ್ರೀ ಗುರುಗಳನ್ನು ಮನೆಗೆ ಕರೆತಂದು ಇಷ್ಟಲಿಂಗಾರ್ಚನೆ ಮುಗಿದ ನಂತರ ದಂಪತಿಗಳು ಕೂಸಿನೊಂದಿಗೆ ಮಂಗಲ ಸ್ನಾನವನ್ನು ಮಾಡಿ ಗುರುಗಳೆದುರಿಗೆ ಹೆಸರು ಇಡುತ್ತಾರೆ.

ಜನನವಾದ ಮಗುವಿನ ಹೆಸರು, ಅಂದಿನ ನಕ್ಷತ್ರದ ಹೆಸರು ಹಾಗೂ ಹುಟ್ಟಿದ ದಿನ ಹೆಸರು ಇದ್ದಕ್ಕಿದ್ದ ಹಾಗೆ ಬರೆಯುವುದೇ ಮಾಸ ನಾಮ ನಕ್ಷತ್ರ ನಾಮವೆನಿಸುವುದು.

ಮಾಸನಾಮ ನಕ್ಷತ್ರನಾಮ ವ್ಯವಹಾರ ನಾಮಾದಿಷ್ಠಿತದೇವತಾಭ್ಯೋ ನಮಃ ಎಂಬ ಮಂತ್ರದಿಂದ ಪೂಜೆ ಮಾಡಬೇಕು. ಆ ಬಳಿಕ ತಂದೆಯು ಇದೇ ಕೂಸಿನ ಹೆಸರೆಂದು ನೆರೆದ ಜನಗಳಿಗೆ ತಿಳಿಸಬೇಕು ಆಗ ಎಲ್ಲರೂ "ತಥಾಸ್ತು" ಎಂದು ಅನ್ನಬೇಕು ತರುವಾಯ ಕೂಸಿನ ಬಲಗಿವಿಯಲ್ಲಿ ಆ ಹೆಸರನ್ನೇ ಗುರುಗಳು ಗಟ್ಟಿಯಾಗಿ ಹೇಳಿ ಅದೇ ಹೆಸರಿನಿಂದ ಗುರುಗಳಿಗೂ ಮಹೇಶ್ವರರಿಗೂ ಕೂಸಿನಿಂದ ನಮಸ್ಕಾರವನ್ನು ಮಾಡಿಸಬೇಕು. ತದನಂತರ ಮಗುವಿನ ಯೋಗಕ್ಷೇಮವು ಅತ್ಯಮೂಲ್ಯ ಎಂದು ಹೇಳುವುದರ ಮೂಲಕ ನಾಮಕರಣ ಪ್ರಾರಂಭಿಸುತ್ತಾರೆ.

**ಮದುವೆ**

ಈ ದಿವಸ ಪ್ರಾತಃಕಾಲದಲ್ಲಿ "ಅಂಕುರಾರೋಹಣ" ಕಾರ್ಯವನ್ನು ಹಿಂದೆ ಸರ್ವಪೂಜಾ ಪ್ರಕರಣದಲ್ಲಿ ಬರೆದಂತೆ ಸಶಾಸ್ತ್ರೀಯವಾಗಿ ಶಿವಪೂಜಾ ಗೃಹದಲ್ಲಿಯೇ ನೆರವೇರಿಸಬೇಕು.

ತದನಂತರ "ವಿವಾಹ ಮಂಟಪವನ್ನು ಸ್ಥಾಪಿಸಿ ಅದರ ಮಧ್ಯದಲ್ಲಿ ರಂಗವಲ್ಲಿ ಹಾಕಿ ಹಿಂದೆ ಸರ್ವಪೂಜಾ ಪ್ರಕರಣದಲ್ಲಿ ಹೇಳಿದ ಪ್ರಕಾರ ಪಂಚಕಲಶ ಸ್ಥಾಪನ ಮಾಡುತ್ತಾರೆ ಹಾಗೂ ಸ್ವಸ್ತಿ ಪುಣ್ಯಾವಾಚನನಾರರೀ ಸಮಾರಂಭ ಕಾರ್ಯಗಳನ್ನು ಹಿಂದೆ ತಿಳಿಸಿದಂತೆ ಪಂಚಕಲಶ ಸ್ಥಾಪನೆ ಪೂರ್ವದಲ್ಲಿಯೇ ಮಾಡುತ್ತಾರೆ. ನಂತರ ಶ್ರೀ ಗಣಪತಿಪೂಜೆ, ಗೌರೀಪೂಜೆ, ವಿವಾಹ ಮಂಟಪಪೂಜೆ, ಪಂಚಕಳಸ ಪೂಜೆಗಳನ್ನು ಅನುಕ್ರವಾಗಿ ಮಾಡುತ್ತಾರೆ.

**ಕಂಕಣಧಾರಣ ಕಾರ್ಯ**

ಈ ಕಂಕಣಧಾರಣ ಕಾರ್ಯವನ್ನು ಅಂಕುರಾರ್ಪಣವನ್ನು ಮಾಡಿದ ದೇವರ ಕೋಣೆಯಲ್ಲಿ ವಧುವರರನ್ನು ಸಮಾಜದಲ್ಲಿ ಕುಳ್ಳಿರಿಸಿಕೊಂಡು ಪುರೋಹಿತನು ದೇಶಕಾಲಾರಿಗಳನ್ನು ಉಚ್ಚರಿಸಿ. ವಧುವರರಿಗೆ–ದಂಡಿ–ಬಾಸಿಂಗ ಧಾರಣೆ ಕ್ರಮ ಪಂಚಕಲಶ ಪೂಜಾ ಮುಗಿದ ತರುವಾಯ ಗುರುಮಹೇಶ್ವರ ಸನ್ನಿಧಿಯಲ್ಲಿ ಮಂಗಲವಾದ್ಯವಾಗುತ್ತಿರಲಾಗಿ ದಂಡಿ ಬಾಸಂಗಗಳನ್ನು ಪೂಜಿಸಿ ಮಂತ್ರದಿಂದ ವಧುವರರ ಹಣೆಯಲ್ಲಿ ದಂಡಿ ಭಾಸಿಂಗವನ್ನು ಧರಿಸಬೇಕು. ಆ ಮೇಲೆ ವಧುವರರು ಗುರುಗಳಿಗೂ ಹಿರಿಯರಿಗೂ ಇಷ್ಟ ದೇವರಿಗೆ ನಮಸ್ಕರಿಸಬೇಕು.

**ಶವ ಸಂಸ್ಕಾರ ವಿಧಾನ**

ವಿಭೂತಿ ವೀಳ್ಯೆದ ಕ್ರಮವು ಮುಗಿದ ನಂತರ ಶಿವೈಕ್ಯನಾದವನನ್ನು ಮರಣ ಹೊಂದಿದ್ದನ್ನು ತಿಳಿದುಕೊಂಡು ಆ ಲಿಂಗಾದೀಯನ್ನು ಸ್ನಾನ ಮಾಡಿಸುವುದಕ್ಕಾಗಿ ಸಂಕಲ್ಪವನ್ನು ಮಾಡಿ ದೇಶಾಕಾಲಾದಿಗಳನ್ನು ಹೇಳುತ್ತಾರೆ.

ಅಸ್ಸಾಂ ಗುಣವಿಶೇಷಣ ವಿಶಿಷ್ಟ ಹೊಂದಿ ಅಸ್ಸಾಂ ಶುದ್ಧ ಲಿಥ ಲಿಂಗಸ್ಯ ಪಿತ್ರು ಶೋತ್ರಿಸ್ಯ ಶಮಣ ಲಿಂಗ ಪುರ ಸ್ಪರರ ಲಿಂಗರೂಪ ಶರೀರಂ ಸಹದ್ರ ಶಿಕ್ಷಾಂ ನಮಸ್ತೆ ರುದ್ರ ಮನ್ಯಾನ ಪಂಚಬ್ರಹ್ಮ ಮಂತ್ರ್ಯಸ್ಸಹ ಸ್ನಪಯಿಷ್ಟೆ ಎಂದು ಸಂಕಲ್ಪ ಮಾಡಬೆಕು. ಆಮೇಲೆ

ಓಂ ಸಹಸ್ರಶಿಷಾ... ವ್ಯಣಿಮಹೇ ಹಾಗು ಓಂ ನಮಸ್ತೆ ರುದ್ರ ಮನ್ಯಾವ ಉತೋತ ಇಷ್ಟವೇ ನಮಃ ಓಂ ಓಂ ಬೇದಾಮಿ ಮತ್ತು ಓಂ ಸದ್ಯೋಜಾತಂ ಪ್ರಪದ್ಯಾಮಿ ಬ್ರಹ್ಮಶಿವೋವೋ ಅಸ್ತ್ರ ಸದಾ ಶಿವೋ ಎಂಬ ಮಂತ್ರಗಳಿಂದ ಆ ಲಿಂಗದ ಶರೀರಕ್ಕೆ ಸ್ನಾನ ಮಾಡಿಸಿ ಬಿಳಿ ವಸ್ತ್ರವನ್ನು ತೊಡಿಸಿ ದೇಹಕ್ಕೆ ಭಸ್ಮವನ್ನು ಸವರಿಸಿ, ಜಲ ಮಿಶ್ರಿತ ಭಸ್ಮದಿಂದ ಆಯಾಯಾ ಸ್ಥಾನವನ್ನು ತ್ರಿಪುರದ ಧಾರುಣವನ್ನು ಮಾಡಿ ರುದ್ರಭಿಷೇಕ ಧರಿಸುತ್ತಾರೆ. ಗೋಡೆಯ ಹತ್ತಿರದ ಗಾಯಿತ್ರಿ ಮಂತ್ರದಿಂದ ದೀಪ ಪೂಜೆ ಮಾಡ್ತಾರೆ.

ವಾಲ್ಮೀಕಿ

ಋತುಮತಿ

ಈ ಪದ್ಧತಿಯು ಸಾಮಾನ್ಯವಾಗಿ ಎಲ್ಲಾ ಸಮುದಾಯಗಳಲ್ಲಿ ನಡೆಯುವಂತೆ ಈ ಸಮುದಾಯದಲ್ಲಿ ಸಹ ನಡೆಯುತ್ತದೆ. ಹುಡುಗಿ ಹೆಣ್ಣುತನದ ಲಕ್ಷಣಗಳನ್ನು ಪಡೆದು ಸಂತಾನೋತ್ಪತ್ತಿ ಕಾರ್ಯನಿರ್ವಹಿಸಲು ಸಿದ್ಧಳಾದ ಹದಿಹರೆಯದ ಅವಧಿ ಮತ್ತು ಋತು ಚಕ್ರ ಆರಂಭವಾಗುವ ಅವಧಿಗೆ ೧೫ ವರ್ಷದ ಒಳಗಿನ ಋತುಮತಿ ಎಂದು ಕರೆಯುತ್ತಾರೆ.

ಈ ಕಾರ್ಯಕ್ರಮವು ಹೆಣ್ಣಿನ ಮನೆಯಲ್ಲಿ ಮೊಟ್ಟ ಮೊದಲ ಬಾರಿಗೆ ತಮ್ಮ ಸಂಬಂಧಿಕರನ್ನು ಕರೆಯಿಸಬೇಕು. ಆಗ ನೀರು ಬರೆಯುವ ವಿಧಾನ ಪ್ರಾರಂಭಿಸುತ್ತಾರೆ. ತಮ್ಮ ಮನೆಯ ಹತ್ತಿರದವರನ್ನು ಕರೆಸಿ ಇವರ ಕೈಯಿಂದ ಎರಚುತ್ತಾರೆ. ನಂತರ ಮುಂದಿನ ಕಾರ್ಯವನ್ನು ಪ್ರಾರಂಭಿಸುತ್ತಾರೆ. ಮನೆಯಲ್ಲಿ ಸುತ್ತ ಮುತ್ತಲಿನ ಸಂಭ್ರಮ ಆಚರಣೆಯನ್ನು ಮಾಡ್ತಾರೆ. ಕೊನೆಯ ೫/೯/೧೧ನೇ ದಿನದಲ್ಲಿ ವಿಶೇಷ ಸಂಭ್ರಮ ಆಚರಣೆ ಮಾಡುತ್ತಾರೆ. ನಂತರ ಬಂಧು ಬಳಗದವರನ್ನು ಕರೆಸಿ ವಿಶೇಷ ಊಟ ಮಾಡಿಸುತ್ತಾರೆ. ಜೊತೆಗೆ ಕೊನೆಯ ದಿನ ಮೃಷ್ಟಾನ್ನ ಭೋಜನ ಮಾಡಿಸುತ್ತಾರೆ. ಜೊತೆಗೆ ಅವರಿಗೆ ವಿವಿಧ ರೀತಿಯ ಉಡುಗೊರೆ ಕೊಡುತ್ತಾರೆ.

ಹೂ ಮುಡಿಸುವಿಕೆ

ಈ ಜನಾಂಗದಲ್ಲಿ ಹೂ ಮೂಡಿಸುವ ಕಾರ್ಯ ಅವರ ಮನೆಯಲ್ಲಿ ೫, ೭, ೯ ತಿಂಗಳ ನಂತರ ಸಂತೋಷದ ವಿಷಯ ತಿಳಿದು ಬಾವುಕಿ ಬುತ್ತಿಯನ್ನು ತಂದು ಊಟ ಮಾಡಿಸುತ್ತಾರೆ. ಅಂದರೆ ವಿವಿಧ ರೀತಿಯ ಅಡುಗೆಯನ್ನು ವಿವಿಧ ರಿತಿಯಲ್ಲಿ ಮಾಡಿ ಸಂಬಂಧಿಕರಿಗೆ ಊಟ ಮಾಡಿಸುತ್ತಾರೆ. ಜೊತೆಗೆ ವಿವಿಧ ರಿತಿಯಲ್ಲಿ ಅಡುಗೆಯನ್ನು ಮಾಡಿ ಊಟ ಬಡಿಸುತ್ತಾರೆ.

ಹೆಸರಿಡುವಿಕೆ

ವಾಲ್ಮೀಕಿ ಸಮುದಾಯದಲ್ಲಿ ನಾಮಕರಣ ಎಂಬುದು ವಿಶೇಷವಾಗಿ ನಡೆಯುತ್ತದೆ. ಹುಟ್ಟಿದ ಮಗುವಿಗೆ ಯಾವ ಹೆಸರು ಇಡಬೇಕು ಎಂಬ ನಿರ್ಧಾರವನ್ನು ಮಾಡಿ (ಸ್ವಾಮೀಜಿ) ಐನಾರು ಹತ್ತಿರ ಹೋಗಿ ಹೆಸರಿನ ಬಗ್ಗೆ ಚರ್ಚೆ ನಡೆಸುತ್ತಾರೆ. ಆಂಜನೇಯ, ರಾಘವೇಂದ್ರ, ಬಸವರಾಜ ಹೀಗೆ ನಾನಾ ಬಗೆಯ ಹೆಸರನ್ನು ಇಡ್ತಾರೆ. ಹಾಗೂ ೧೬ ದಿನದ ನಂತರ ಮನೆಯಲ್ಲಿ ಸಡಗರ ಸಂಭ್ರಮದಿಂದ ನಾಮಕರಣ ಮಾಡುವ ವಿಧಾನ ಪ್ರಾರಂಭಿಸುತ್ತಾರೆ.

ಗಂಡಿನ ಮನೆಯವರು ಸೀರೆಯನ್ನು ಮಾಡಿ ಆ ಮಗುವಿಗೆ ನಾನಾ ರೀತಿಯ ಹೆಸರನ್ನು ಇಡುತ್ತಾರೆ. ಅಂದರೆ ಆಕೆಯ ಮಗುವಿಗೆ ಬಲತ್ಕಾರ ಬರುವ ಹಾಗೆ ಹೆಸರಿಡುವ ಪ್ರಯತ್ನ ಮಾಡುತ್ತಾರೆ. ಅಂದರೆ ಸೋದರ ಮಾವ/ಚಿಕ್ಕಪ್ಪ ಹೆಸರಿಡುವ ಪದ್ಧತಿ ಈಗಲೂ ರೂಢಿಯಲ್ಲಿದೆ.

**ಸಾವು(ಶವಸಂಸ್ಕಾರ)**

ಶವಸಂಸ್ಕಾರವು ಬಹುತೇಕವಾಗಿ ಹಿಂದೂ ಸಂಪ್ರದಾಯದಲ್ಲಿ ಒಂದೇ ರೀತಿಯಾಗಿರುತ್ತದೆ. ಹುಟ್ಟಿದ ಘಳಿಗೆ/ಹೆಸರು/ತಿಳಿಸಿ ಬ್ರಾಹ್ಮಣರು, ಸ್ವಾಮೀಜಿಯ ಹತ್ತಿರ ಕೇಳಿಸಿಕೊಂಡು ಬಂದು ವಿವಿಧ ಒಂದು ವೇಳೆ ದೋಷವಿದ್ದರೆ ೩ ದಿನದೊಳಗೆ ದೋಷವಿದ್ದರೆ ಮನೆ ಬಿಡುವ ಕಾರ್ಯಕ್ರಮ ನಡೆಯುತ್ತದೆ. ನಂತರ ಸತ್ತ ದಿನ ಅಂದರೆ ೩ ದಿನ ಆದ ಮೇಲೆ ನಾನಾ ಬಗೆಯ ಅಡುಗೆ ಮಾಡಿ, ಅವರನ್ನು ಸಂಸ್ಕಾರ ಮಾಡಿದ ಜಾಗದಲ್ಲಿ ನೀರು/ಊಟ ಇಡ್ತಾರೆ. ಆಗ ಆ ಕಾಡಿನಲ್ಲಿ ಬರುವ ಪಕ್ಷಿಗಳು / ಕಾಗೆಗಳು ಬೇಗನೇ ತಿಂದು ಹೋದರೆ ಸೂಕ್ತವೆಂದು ಜನರ ನಂಬಿಕೆ. ಇಲ್ಲದಿದ್ದರೆ ಅಪಾಯಗಳು ಎಂದು ತಿಳಿದು ಮುಂದಿನ ಚರ್ಚೆ, ವಿಧಾನಗಳನ್ನು ಮಾಡ್ತಾರೆ.

**ಮದುವೆ**

ಹಿಂದೂ ಸಂಪ್ರದಾಯದಲ್ಲಿ ಮದುವೆಗೆ ವಿಶೇಷವಾದ ಸ್ಥಾನ ನೀಡಿದ್ದಾರೆ. ಮದುವೆ ಎಂಬುದು ಒಂದು ವೈಶಿಷ್ಟ್ಯ. ಯಾವ ದಿನ, ಯಾವ ಘಳಿಗೆ ಎಂಬುದನ್ನು ನಿರ್ಧಾರ ಮಾಡಿ ಲಗ್ನ ಪತ್ರಿಕೆಯನ್ನು ಹಾಕಿಸಿ ಮತ್ತು ಮದುವೆ ಮುಂಚಿತವಾಗಿ ವಿವಿಧ ರೀತಿಯ ತಾಂಬೂಲಗಳನ್ನು ಇಟ್ಟು ಹಂದರವನ್ನು ಹಾಕಲಿಕ್ಕೆ ಹೇಳಿ ಬರ್ತಾರೆ. ನಂತರ ಹಿರಿಯರು ಸೇರಿ ಲಗ್ನ ಪತ್ರಿಕೆಯನ್ನು ಪೂಜೆ ಮಾಡಿ ಊರಿನ ಜನರಿಗೆ ಹಂಚುತ್ತಾರೆ. ೩ ದಿನ ಆದ ಮೇಲೆ ಮದುಮಗ ಮಾಡಿ ಅರಿಶಿಣ ಹಚ್ಚಿ ನಂತರ ಹೆಣ್ಣಿನ ಮನೆಯವರಿಗೆ ಲಗ್ನದ ಅಕ್ಕಿಯನ್ನು ಕೊಟ್ಟು ಬರುವ ಪದ್ಧತಿ ಇದೆ. ಜೊತೆಗೆ ರಾತ್ರಿ ಬಿಗರನ್ನು ಎದುರುಗೊಳ್ಳುವ ಸಮಯದಲ್ಲಿ ಹಾಸ್ಯ ಕಾರ್ಯಕ್ರಮ ನಡೆಯುತ್ತದೆ.

**ಮುಸ್ಲಿಂರು**

**ಹೆಸರಿಡುವಿಕೆ**

ಮುಸ್ಲಿಂ ಸಮುದಾಯದಲ್ಲಿ ಸಹ ಹೆರಿಗೆಯಾದ ನಂತರ ಬಾನು ಕರೆಸುವಿಕೆ ಅಂದರೆ ಪೇಸಿ ಮಾಮನನ್ನು ಕರೆಸಿಕೊಂಡು ಬಂದು ನಂತರ ಪೇಸಿ ಮಾವನು ಹುಡಗನಿಗೆ / ಹುಡುಗಿಗೆ ಬಾನು ಕೊಡುವ ಕಾರ್ಯಕ್ರಮವನ್ನು ಕೈಗೊಳ್ಳುತ್ತಾರೆ. ನಂತರ ಪೇಸಿ ಮಾಮನು ಮಗುವಿಗೆ "ಅಜಾನ" (ನಮಾಜ್) ಹೇಳಿ ನಾಮಕರಣ ಮಾಡುವ ವಿಧಾನ ನಡೆಯುತ್ತದೆ.

**ಮದುವೆ (ನಿಖಾಃ)**

ಈ ಮುಸ್ಲಿಂ ಸಮುದಾಯದಲ್ಲಿ ಮೊದಲು ಮನೆ ದೇವರನ್ನು ಮಾಡುವ ವಿಧಾನ ಪ್ರಾರಂಭವಾಗುತ್ತದೆ. ಹಾಗೂ ನಂತರ ಅರಿಶಿಣ ಹಚ್ಚುವ ಕಾರ್ಯಕ್ರಮ ಪ್ರಾರಂಭಿಸಲಾಗುತ್ತದೆ. ಮತ್ತು ಮನೆಯ ಮಗಳು/ಮನೆಯ ಮಗನಿಗೆ ಅರಿಶಿಣ ಹಚ್ಚುವ ಕಾರ್ಯಕ್ರಮ ನಡೆಯುತ್ತದೆ. ಹಾಗೇನೇ ಬಂಧು ಬಳಗದವರೆಲ್ಲರೂ ಅರಿಶಿಣ ಹಚ್ಚುವ ಕಾರ್ಯಕ್ರಮ ನಡೆಯುತ್ತದೆ.

'ರಸೂಮಾ' ಮಾಡುವ ಕಾರ್ಯಕ್ರಮ ನಡೆಯುತ್ತದೆ. ನಂತರ 'ಪೇಸಿಮಾಮನನ್ನು / ಕರೆದುಕೊಂಡು ಬಂದು ನಿಖಾಃ ಕಾರ್ಯಕ್ರಮ ವಿಜೃಂಭಣೆಯಿಂದ ಪ್ರಾರಂಭವಾಗುತ್ತದೆ. ಜೊತೆಗೆ ಪೇಸಿ ಮಾಮನು ಇಬ್ಬರಿಗೂ ಕಲಂ ಹೇಳಿ ಕೊಟ್ಟು ನಿಖಾಃ ಪ್ರಾರಂಭಿಸುತ್ತಾರೆ. ಈ ಜನಾಂಗದಲ್ಲಿ ಪ್ರಮುಖವಾಗಿ ಮದುವೆ ಹೆಣ್ಣಿನ ಮನೆಯಲ್ಲಿ ನಡೆಯುತ್ತದೆ.

**ಋತುಮತಿ**

ಮಹಿಳೆ ಈ ಸಮುದಾಯದಲ್ಲಿ ಹೆಣ್ಣುತನದ ಲಕ್ಷಣಗಳನ್ನು ಪಡೆದು ಸಂತಾನೊತ್ಪತ್ತಿ ಕಾರ್ಯನಿರ್ವಹಿಸಲು ಸಿದ್ಧಳಾದ ಹದಿಹರೆಯದ ಅವಧಿ ಮತ್ತು ಋತು ಚಕ್ರ ಆರಂಭವಾಗುವ ಅವಧಿಗೆ ೧೫ ವರ್ಷದ ಒಳಗಿನ ಋತುಮತಿ ಎಂದು ಕರೆಯುತ್ತಾರೆ.

ಈ ಪದ್ಧತಿಯಲ್ಲಿ ಮುಸ್ಲಿಂರು ಹಿಂದೂಗಳ ಪದ್ಧತಿಯಂತೆ ಕಾರ್ಯಕ್ರಮ ನಡೆಸುತ್ತಾರೆ. ಋತುಮತಿಯಾದ ದಿನ ತಮಗೆ ಹತ್ತಿರವಾದ ಸಂಬಂಧಿಕರನ್ನು ಕರೆಸಿ ಪೇಸಿಮಾಮನ ಆಗ್ನೆಯಂತೆ ಇತರೆ ಕಾರ್ಯಕ್ರಮ ಅಂದರೆ ೧೬ ದಿನಗಳವರೆಗೆ ಮನೆಯಲ್ಲಿ ವಿಶೇಷ ಕಾರ್ಯಕ್ರಮ ನೆರವೇರಿಸುತ್ತಾರೆ. ನಂತರ ತಮ್ಮ ಮನೆಯ ಪಕ್ಕದಲ್ಲಿರುವ ಸಂಬಂಧಿಕರಿಗೆ ಹೇಳಿ ಕಳಿಸಿ ೧೬ ದಿನದ ನಂತರ ಬಂದ ಬೀಗರಿಗೆಲ್ಲಾ ವಿಶೇಷ ಅಡುಗೆ ಮಾಡಿಸಿ ಬಡಿಸುತ್ತಾರೆ.

**ಸಾವು(ಶವಸಂಸ್ಕಾರ)**

ಈ ಸಮುದಾಯದ ಮನೆಯಲ್ಲಿ ಯಾರಾದರೂ ಸತ್ತರೆ ಮೊದಲು ನೆಲ ಸವರಿಸಿ ಆತನನ್ನು ನೆಲದ ಮೇಲೆ ಮಲಗಿಸುತ್ತಾರೆ. ನಂತರ ನಮಾಜ್ ಓದಲು ಪ್ರಾರಂಭಿಸುತ್ತಾರೆ. ನಂತರ ಬಂಧು ಬಳಗದವರನ್ನು ಕರೆಸಿ ಸ್ನಾನ ಮಾಡಿಸಿ ನಂತರ 'ಜನಾಮ'(ಪೆಟ್ಟಿಗೆ)ನೊಳಗೆ ಮಲಗಿಸುತ್ತಾರೆ. ನಂತರ ಸ್ಮಶಾನದ ಹತ್ತಿರ ಹೋಗಿ ಆತನ ಶವ ಸಂಸ್ಕಾರ ಮಾಡ್ತಾರೆ. ನಂತರ ೯ ದಿನದೊಳಗೆ ಮತ್ತು ಒಳಗೆ ತೆಗೆದುಕೊಳ್ಳುವ ಕಾರ್ಯಕ್ರಮ ನಡೆಯುತ್ತದೆ.

**ಹೂ ಮುಡಿಸುವಿಕೆ**

ಈ ಸಮುದಾಯದಲ್ಲಿ ಕೂಡ ಹಿಂದೂಗಳಲ್ಲಿ ಹೂ ಮುಡಿಸುವಿಕೆ ಕಾರ್ಯಕ್ರಮ ನಡೆಯುವಂತೆ ನಡೆಯುತ್ತದೆ. ಗರ್ಭಿಣಿಯಾದ ವಿಷಯವನ್ನು ತಿಳಿದ ಎಲ್ಲರೂ ಸಂತೋಷದಿಂದ 'ಬಾವುಕಿ' ಬುತ್ತಿಯನ್ನು ತಂದು ನಾನಾ ಬಗೆಯ ಅಡುಗೆಗಳನ್ನು ಮಾಡಿಕೊಂಡು ಬಂದು ಊಟ ಮಾಡಿಸುತ್ತಾರೆ. ನಂತರ ಗಂಡನ ಮನೆಯಿಂದ ಮೊದಲ ಹೆರಿಗೆಗೆ ತಾಯಿಯ ಮನೆಗೆ ಕಳುಹಿಸುವ ಹೋಗುವ ಪದ್ಧತಿ ಎಲ್ಲ ಸಂಪ್ರದಾಯಗಳಲ್ಲಿ ಇರುವಂತೆ ಈ ಸಮುದಾಯದಲ್ಲಿ ಇರುತ್ತದೆ. ಹಾಗೇನೇ ನಾನಾ ಬಗೆಯ ಉಡುಪುಗಳನ್ನು ಸಹ ಗಂಡ–ಹೆಂಡ್ತಿ, ಮಗ, ಮಗಳಿಗೆ ಪ್ರೀತಿಯಿಂದ ಉಡುಗೊರೆ ಕೊಡುವ ಪದ್ಧತಿ ಇದೆ.

**ತಳವಾರರು**

**ಹೆಸರಿಡುವಿಕೆ**

ಈ ಸಮುದಾಯದಲ್ಲಿ ಹುಟ್ಟಿದ ಘಳಿಗೆ/ಸಮಯವನ್ನು ನಿರ್ಧರಿಸಿ ಕುಸಿನ ವಿಚಾರವಾಗಿ ಸ್ವಾಮಿಯವರ ಹತ್ತಿರ ಹೋಗಿ ಹೆಸರಿನ ಬಗ್ಗೆ / ಹುಟ್ಟಿದ ಘಳಿಗೆಯ ಬಗ್ಗೆ ಚರ್ಚೆ ಮಾಡಿ ನಂತರ ಎಂಥದು ಹೆಸರು ಇಡಬೇಕು ಹೇಗೆ ಹೆಸರಿಡಬೇಕು ಎಂಬ ಚರ್ಚೆಯನ್ನು ಮಾಡ್ತಾರೆ. ಅಂಜನೇಯ, ಬಸವರಾಜ, ನಾಗರಾಜ ಹೀಗೆ ದೇವರ ಹೆಸರಿನಂದ ಹೆಸರು ಪ್ರಾರಂಭಿಸುವ ಬಗ್ಗೆ ಚರ್ಚೆ ಮಾಡುತ್ತಾರೆ.

ನಂತರ ಹೆಸರಿನ ವಿಚಾರ ಬಂಧು ಬಳಗದವರಿಗೆ ತಿಳಿಸಿ ಹುಟ್ಟಿ ೧೬ನೇ ದಿನಕ್ಕೆ ಮಗುವಿನ ನಾಮಕರಣ ಪ್ರಾರಂಭಿಸುತ್ತಾರೆ. ಗಂಡಿನ ಮನೆಯವರು ಬಂದ ಮಹಿಳೆಯರಿಗೆ ಸೀರೆ ಉಡಿಸಿ ಬಂಧು ಬಳಗದವರಿಗೆ ವಿಶೇಷ ಊಟ ಮಾಡಿಸುತ್ತಾರೆ.

**ಋತುಮತಿ**

ಮಹಿಳೆ ಹೆಣ್ತನದ ಲಕ್ಷಣಗಳನ್ನು ಪಡೆದು ಸಂತಾನೊತ್ಪತ್ತಿ ಕಾರ್ಯನಿರ್ವಹಿಸಲು ಸಿದ್ಧಳಾದ ಹದಿಹರೆಯದ ಅವಧಿ ಮತ್ತು ಋತು ಚಕ್ರ ಆರಂಭವಾಗುವ ಅವಧಿಗೆ ೧೫ ವರ್ಷದ ಒಳಗಿನ ಋತುಮತಿ ಎಂದು ಕರೆಯುತ್ತಾರೆ. ಎಲ್ಲಾ ಸಮುದಾಯಗಳಲ್ಲಿ ಇರುವ ವಿಧಾನಗಳು ಈ ಸಮುದಾಯದಲ್ಲಿ ಸಹವಿರುತ್ತದೆ. ಋತುಮತಿಯಾದ ದಿನ ತಮ್ಮ ಮನೆಯ ಪಕ್ಕದವರನ್ನು ಕರೆಸಿ ತಮ್ಮ ಮಗಳಿಗೆ ನೀರೆರಸುತ್ತಾರೆ. ನಂತರ ದಿನ ತಮ್ಮ ಮನೆಗೆ ಹತ್ತಿರದವರನ್ನು ಕರೆಸಿ ದಿನಾಲು ಅಂದರೆ ೧೬ ದಿನದವರೆಗೆ ನೀಂರಸುತ್ತಾರೆ. ಹಾಗೆಯೇ ಕೊನೆಯ ದಿನ ಬಂಧು ಬಳಗದವರಿಗೆ ವಿಶೇಷವಾದ ಊಟ ಉಪಚಾರ ಮಾಡಿ ಕಳಿಸುತ್ತಾರೆ. ಜೊತೆಗೆ ಉಡುಗೊರೆ ಸಹ ಕೊಡ್ತಾರೆ.

**ಹೂ ಮುಡಿಸುವಿಕೆ**

ಈ ಸಮುದಾಯದವರು ಸೀಮಂತಕಾರ್ಯವನ್ನು ಮದುವೆಯಾಗಿ ೯ ತಿಂಗಳ ನಂತರ ನಡೆಯುವ ಈ ಪದ್ಧತಿಯು ಬಹಳ ವಿಶಿಷ್ಟವಾಗಿರುತ್ತದೆ. ಅಂದರೆ 'ಬವುಕಿ' ಬುತ್ತಿಯನ್ನು ತಂದು ಊಟ ಮಾಡಿಸಿ ಸಂಬಂಧಿಕರಿಗೂ ವಿಶೇಷವಾದ ಊಟ ಮಾಡಿಸುವರು. ಅಲ್ಲದೆ ಬಟ್ಟೆ, ಸೀರೆ ಇತರೆ ಉಡುಗೊರೆ ಪ್ರೀತಿಯಿಂದ ಕೊಡ್ತಾರೆ.

**ಮದುವೆ**

ಇವರು ಮೊದಲು ಹಿರಿಯರ ಹಬ್ಬ ಆಚರಿಸುವ ಮೂಲಕ ನಂತರ ಐರಾಣಿ ತರುವಿಕೆ / ಲಗ್ನ ಕಟ್ಟಿಸುವಿಕೆ ಜೊತೆಗೆ ಎಲ್ಲಾ ದೇವರುಗಳಿಗೆ ಎಣ್ಣೆಯನ್ನು ಹಾಕಿ ಹಚ್ಚಿ ಬರುತ್ತಾರೆ. ಅಲ್ಲದೆ ಅವರು ಹಾಲುಗಂಬ ಹಸಿರುಗಂಬ ತಾಳಿ ಕಟ್ಟುವಲ್ಲಿ ಪೂಜಿಸುವುದು ಪ್ರಧಾನವಾಗಿರುತ್ತದೆ. ಹಾಗೂ ಬಾಸಿಂಗ ತರುವಿಕೆ, ಗಂಗೆಗೆ ಹೋಗಿ ಬರುವ ಪದ್ಧತಿ ನಡೆಯುತ್ತದೆ.

**ಸಾವು(ಶವಸಂಸ್ಕಾರ)**

ಈ ಸಮುದಾಯದಲ್ಲಿ ಯಾರಾದರು ಸತ್ತರೆ ಯಾವ ಸಮಯ, ಯಾವ ದಿನ, ಘಳಿಗೆ ಎಂದು ತಿಳಿದು ಸ್ವಾಮಿಯ ಹತ್ತಿರ ಹೋಗಿ ವಿಚಾರಿಸುತ್ತಾರೆ. ಅಲ್ಲದೆ ಸತ್ತಿರುವ ಘಳಿಗೆ ಸರಿಯಿದ್ದರೆ ೩ ದಿನದಲ್ಲಿ ಒಂದು ಚಿಕ್ಕದಾದ ಕಾರ್ಯಕ್ರಮ ನಡೆಸುತ್ತಾರೆ ಹಾಗು ಸಂಬಂಧಿಕರು ಆ ಮನೆಗೆ ಬೇಡಿದ ಊಟ ಕೊಡ್ತಾರೆ ಹಾಗೆ ೨೧ ದಿನ ಆದ ನಂತರ ಒಳಗೆ ಕರೆದುಕೊಳ್ಳುವ ವಿಧಾನ ಪ್ರಾರಂಭವಾಗುತ್ತದೆ.

**ಬಾರಿಕರು**

**ಋತುಮತಿ**

ಮಹಿಳೆಯೂ ಹೆಣ್ತನದ ಲಕ್ಷಣಗಳನ್ನು ಪಡೆದು ಸಂತಾನೊತ್ಪತ್ತಿ ಕಾರ್ಯನಿರ್ವಹಿಸಲು ಸಿದ್ಧಳಾದ ಹದಿಹರೆಯದ ಅವಧಿ ಮತ್ತು ಋತು ಚಕ್ರ ಆರಂಭವಾಗುವ ಅವಧಿಗೆ ೧೫ ವರ್ಷದ ಒಳಗಿನ ಋತುಮತಿ ಎಂದು ಕರೆಯುತ್ತಾರೆ. ಸಾಂಪ್ರದಾಯಿಕವಾಗಿ ಈ ಪದ್ಧತಿಯು ನಡೆಯುತ್ತಿದ್ದು ೧೫ ವರ್ಷ ತುಂಬಿದ ಹೆಣ್ಣು ಋತುಸ್ರಾವದ ಪ್ರಕ್ರಿಯೆ ನಡೆಯುತ್ತದೆ. ಈ ವಿಧಾನಕ್ಕೆ ಋತುಮತಿ ಎಂದು ಕರೆಯುತ್ತಾರೆ. ಮೊದಲನೇ ದಿನ ತಮಗೆ ಹತ್ತಿರವಾದವರನ್ನು ಕರೆಸಿ ನೀರನ್ನು ಎರೆಸುತ್ತಾರೆ. ಮತ್ತೆ ಉಳಿದ ೧೫ ದಿನದೊಳಗೆ ಬಂಧು ಬಳಗದವರನ್ನು ಕರೆಸಿ ಸಂಭ್ರಮದಿಂದ ಆಚರಣೆ ಮಾಡ್ತಾರೆ. ಜೊತೆಗೆ ಉಡುಗೊರೆ ಆಭರಣಗಳನ್ನು ಸಹ ಕೊಡ್ತಾರೆ.

**ಹೂ ಮುಡಿಸುವಿಕೆ**

ಪ್ರತಿಯೊಂದು ಸಮಯದಲ್ಲಿ ಇರುವಂತೆ ಈ ಒಂದು ಸಮುದಾಯದಲ್ಲು ಸಹ ಸೀಮಂತ ಕಾರ್ಯವಿರುತ್ತದೆ. ೯ ತಿಂಗಳೊಳಗೆ ಗರ್ಭಿಣಿಯಾದ ವಿಷಯ ತಿಳಿದ ಮನೆಯವರೆಲ್ಲಾ ಸಂಭ್ರಮದಿಂದ ವಿಶೇಷವಾದ ಅಡುಗೆಯನ್ನು ಮಾಡಿ ಬಂಧು ಬಳಗದವರಿಗೆಲ್ಲಾ ಊಟ ಉಣಬಡಿಸಿ ಬಟ್ಟೆಗಳನ್ನು ಕೊಡ್ತಾರೆ.

**ಹೆಸರಿಡುವಿಕೆ(ನಾಮಕರಣ)**

ಭಾರತೀಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ನಾಮಕರಣ ಕಾರ್ಯ ಸರ್ವೇಸಾಮಾನ್ಯವಾಗಿದೆ. ಈ ಸಮುದಾಯದಲ್ಲಿ ಮಗ, ಮಗಳು ಹುಟ್ಟಿದರೆ ಯಾವ ಹೆಸರು ಇಡಬೇಕು ಎಂದು ನಿರ್ಧರಿಸಿ ೩ ದಿನಗಳೊಳಗೆ ದೇವರ ಹೆಸರನ್ನಿಟ್ಟು, ನಂತರ ೧೫ ದಿನದಲ್ಲಿ ಬೇರೊಂದು ಹೆಸರು ಇಡ್ತಾರೆ. ಅಂದರೆ ತಮಗೆ ಇಷ್ಟವಾದ ದೇವರ ಹೆಸರು ಅಂದರೆ ಅಂಜನೇಯ, ರಾಘವೇಂದ್ರ ಹೀಗೆ ಬೇರೆ ಬೇರೆ ರೀತಿಯ ಹೆಸರು ಇಡುವ ಪದ್ಧತಿ ಇದೆ.

**ಸಾವು(ಶವಸಂಸ್ಕಾರ)**

ಹುಟ್ಟು ಸಾವು ಬದುಕಿನಲ್ಲಿ ಸಾಮಾನ್ಯ. ಆದರೂ ಯಾವ ಘಳಿಗೆಯಲ್ಲಿ ಸತ್ತರು ಎಂಬುದು ನಿರ್ಧರಿಸಿ ತಿಳಿದುಕೊಂಡು ಘಳಿಗೆ ನಕ್ಷತ್ರ ತಿಳಿದು ಒಳ್ಳೆಯದು ಇದ್ದರೆ ೩ ದಿನಗಳಲ್ಲಿ ಒಳಗೆ ತೆಗೆದುಕೊಳ್ಳುತ್ತಾರೆ. ಒಂದು ವೇಳೆ ಸತ್ತ ಘಳಿಗೆ ಸರಿ ಇಲ್ಲದಿದ್ದರೆ ಮನೆಯನ್ನು ಬಿಟ್ಟು ಬೇರೊಂದು ಮನೆಯಲ್ಲಿ ಇರುವ ಪದ್ಧತಿ ಜಾರಿಯಲ್ಲಿದೆ. ಜೊತೆಗೆ ಅವರಿಗೆ ಬಂಧು ಬಳಗದವರು ವಿಶೇಷವಾಗಿ ನೋಡಿಕೊಳ್ತಾರೆ.

**ಮದುವೆ**

ಸಾಮಾನ್ಯವಾಗಿ ಮನೆಯಲ್ಲಿ ಮೊಟ್ಟ ಮೊದಲಿಗೆ ಸಂಬಂಧಿಕರು ಸೇರಿ ಮದುವೆ ದಿನಾಂಕ, ಘಳಿಗೆ ಚೆನ್ನಾಗಿ ಇದೆ ಎಂದು ನಿರ್ಧರಿಸಿ ಲಗ್ನಪತ್ರಿಕೆಯನ್ನು ಹಾಕಿಸುವ ಪದ್ಧತಿ ಸಾಂಪ್ರದಾಯಕವಾಗಿದೆ. ಮದುವೆ ಮುಂಚಿತವಾಗಿ ೩ ದಿನದಲ್ಲಿ ಅಡಿಕೆ, ಎಲೆ, ಕೊಟ್ಟು ಹಂದರ ಹಾಕಲು ಹೇಳಿಬರುತ್ತಾರೆ. ಅಂದು ಸಾಯಂಕಾಲವೇ ಎಲ್ಲರೂ ಸೀರೆ ಮಾಡುತ್ತಾರೆ. ಒಂದು ನಿರ್ಧಾರ ಮಾಡಿ ಊರಿನ ಜನರಿಗೆಲ್ಲಾ ಲಗ್ನಪತ್ರಿಕೆ ಕೊಟ್ಟು ಬರುತ್ತಾರೆ ಮತ್ತೆ ೩ನೇ ದಿನದಲ್ಲಿ ಲಗ್ನಪತ್ರಿಕೆಯನ್ನು ಬೇರೆ ಬೇರೆ ಊರಿಗೆ ಕೊಟ್ಟು ಬರುತ್ತಾರೆ. ಅಂದು ಸಂಜೆ ಹಾಸ್ಯವನ್ನು ಏರ್ಪಾಡು ಮಾಡಿ ಮುಂದಿನ ಸರಿಯಾದ ಸಮಯಕ್ಕೆ ತಾಳಿ ಕಟ್ಟುವ ವಿಧಾನ ಪ್ರಾರಂಭವಾಗುತ್ತದೆ.

## ಸುಣಗಾರರು

### ಹೆಸರು ಇಡುವುದು

ಈ ಸಮುದಾಯದಲ್ಲಿ ತಾಯಿ ಮಗುವಿಗೆ ಮುಂಚೆ ಮಗುವಿಗೆ ಹೆಸರು ಇಡುವ ಪದ್ಧತಿ ನಡೆಯುತ್ತದೆ. ಮಗು ಹುಟ್ಟಿದ ಘಳಿಗೆ ತಿಳಿದು ಯಾವ ಸಮಯ, ಯಾವ ಘಳಿಗೆ ಹುಟ್ಟಿದ್ದನೆಂದು ತಿಳಿದು ಹೆಸರು ಇಡುವ ಕಾರ್ಯಕ್ರಮ ಪ್ರಾರಂಭವಾಗುತ್ತದೆ.

ಆ ಮಗುವಿಗೆ ದೇವರ ಹೆಸರಿನಲ್ಲಿ ಹೆಸರು ಪ್ರಾರಂಭಿಸಿ ನಂತರ ತಮಗೆ ಇಷ್ಟವಾದ ಹೆಸರಿನೊಂದಿಗೆ ಹೆಸರು ಕರೆಯುವ ಪದ್ಧತಿ ಪ್ರಾರಂಭಿಸುತ್ತಾರೆ. ಹಾಗೆಯೇ ಆ ಮಗುವಿಗೆ ವಿಶೇಷವಾದ ಉಡುಗೊರೆ, ಆಭರಣ ಸಹ ಕೊಡಿಸುತ್ತಾರೆ.

### ಹೂ ಮುಡಿಸುವಿಕೆ

ಸಾಂಪ್ರದಾಯಕವಾಗಿ ಸೀಮಂತ ಕಾರ್ಯ ಎಂದು ಕರೆಯುತ್ತಾರೆ. ಮದುವೆ ಸಂಪ್ರದಾಯ ಮುಗಿದ ನಂತರ ೯ ತಿಂಗಳಲ್ಲಿ ೩ ತಿಂಗಳ ಗರ್ಭಿಣಿಯಾಗಿದ್ದಾಳೆಂದು ಪ್ರೀತಿ ವಿಶ್ವಾಸದಿಂದ ತಮ್ಮ ಮನೆಯವರೆಲ್ಲಾ ಸಂತೋಷದಿಂದ ಬಾವುಕಿ ಬುತ್ತಿಯನ್ನು ತೆಗೆದುಕೊಂಡು ಹೋಗಿ ಬಂಧು ಬಳಗದವರಿಗೆಲ್ಲಾ ಊಟ ಮಾಡಿಸುತ್ತಾರೆ. ಆ ದಿನ ಗಂಡನ ಮನೆಯಲ್ಲಿ ವಿಶಿಷ್ಟವಾದ ಕಾರ್ಯಕ್ರಮ ನಡೆಯುತ್ತದೆ. ಜೊತೆಗೆ ವಿಶೇಷವಾದ ಭೋಜನ ಕೂಡ ನಡೆಯುತ್ತದೆ.

### ಋತುಮತಿ

ಮಹಿಳೆಯೂ ಹೆಣ್ತನದ ಲಕ್ಷಣಗಳನ್ನು ಪಡೆದು ಸಂತಾನೋತ್ಪತ್ತಿ ಕಾರ್ಯನಿರ್ವಹಿಸಲು ಸಿದ್ಧಳಾದ ಹದಿಹರೆಯದ ಅವಧಿ ಮತ್ತು ಋತು ಚಕ್ರ ಆರಂಭವಾಗುವ ಅವಧಿಗೆ ೧೫ ವರ್ಷದ ಒಳಗಿನ ಋತುಮತಿ ಎಂದು ಕರೆಯುತ್ತಾರೆ. ಪ್ರತಿಯೊಂದು ಸಂಪ್ರದಾಯದಲ್ಲಿ ಇರುವಂತೆ ಈ ಸಂಪ್ರದಾಯದ ಪದ್ಧತಿ ಇದ್ದು, ಈ ಕಾರ್ಯಕ್ರಮದ ಮೊದಲನೇ ದಿನ ತಮ್ಮ ಮನೆಯ ಹತ್ತಿರವಿದ್ದರನ್ನು ಕರೆಸಿ ನೀರು ಹಾಕಿಸಿ ನಂತರ ಬಂಧು ಬಳಗದವರಿಗೆ ಹೇಳಿ ೧೬ ದಿನದಲ್ಲಿ ಅಥವಾ ೯ ದಿನದಲ್ಲಿ, ೫ ದಿನದಲ್ಲಿ ತಮ್ಮ ಬೀಗರಿಗೆ ವಿಷಯ ತಿಳಿಸಿ ನಮ್ಮ ಎಲ್ಲಾ ಸಂಬಂಧಿಕರಿಗೆ ೧೬ನೇಯ ಕೊನೆಯ ದಿನದಲ್ಲಿ ಆ ಹೆಣ್ಣು ಮಗಳಿಗೆ ಆರತಿ ಮಾಡಿ ವಿಶೇಷವಾದ ಉಡುಗೊರೆ ನೀಡಿ ಸಂಭ್ರಮದಿಂದ ಆಚರಿಸುತ್ತಾರೆ.

### ಸಾವು(ಶವಸಂಸ್ಕಾರ)

ಪ್ರತಿಯೊಂದು ಸಮುದಾಯದಲ್ಲಿ ಇರುವಂತೆ ಈ ಸಮುದಾಯದಲ್ಲಿ ಸಹ ಈ ಪದ್ಧತಿ ಇದೆ. ಹುಟ್ಟಿದ ಸಮಯ, ಘಳಿಗೆ ತಿಳಿದು ಬರುತ್ತವೆ. ಸತ್ತ ಗಳಿಗೆ, ಸಮಯ ತಿಳಿದು ವಿವಿಧ

ಕಾರ್ಯಕ್ರಮ ನಡೆಸುತ್ತಾರೆ. ೩ ದಿನದಲ್ಲಿ ಒಂದು ಕಾರ್ಯ ಮಾಡಿ ಜಾತಕ ಸರಿ ಇದ್ದರೆ ಅದೇ ಮನೆಯಲ್ಲಿದ್ದು ೧೬ನೇ ದಿನದಲ್ಲಿ ಬಂಧು ಬಳಗದವರನ್ನು ಕರೆಸಿ ಅವರಿಗೆ ಊಟ ಮಾಡಿಸಿ ಒಳಗೆ ಕರೆಸಿಕೊಳ್ಳುವ ಪದ್ಧತಿ ಇದೆ.

### ೬.೨. ವಾರ್ಷಿಕಾವರ್ತನ ಆಚರಣೆಗಳು

"ವರ್ಷಕ್ಕೊಮ್ಮೆ ಬರುವ ಹಬ್ಬಗಳ ಆಚರಣೆಗಳನ್ನು ವಾರ್ಷಿಕಾವರ್ತನದ ಆಚರಣೆಗಳೆಂದು ಕರೆಯುವರು."[೪] ಹಿಂದೂಗಳು ವರ್ಷ ತುಂಬಾ ಹಬ್ಬಗಳನ್ನಾಚರಿಸುವ, ವ್ರತ, ಉಪವಾಸ ಕೈಗೊಳ್ಳುವ, ಅನೇಕ ಪವಿತ್ರ ದಿನಗಳಿವೆ. ಎಲ್ಲಾ ಹಿಂದೂಗಳು ಸಾಮಾನ್ಯವಾಗಿರುವ ಹಬ್ಬಗಳಲ್ಲದೇ ಬೇರೆ–ಬೇರೆ ಪಂಥಗಳಿಗೆ ಪ್ರತ್ಯೇಕ ಹಬ್ಬಗಳೂ ಇವೆ.

ಹಬ್ಬ ಎಂಬ ಪದವು ಸಂಸ್ಕೃತದ 'ಪರ್ವ' ಶಬ್ದದ ತದ್ಭವ ರೂಪ. ಪರ್ವ ಎಂದರೆ ಒಂದು ಮತ್ತೊಂದರ ಜೊತೆಗೆ ಸಂಭವಿಸುವುದು ಎಂದರ್ಥ. ಸೂರ್ಯಚಂದ್ರರ ದಿಕ್ಕು ಬದಲಾಗುವುದೇ ಪರ್ವ. ಅದನ್ನೇ ನಮ್ಮ ಪೂರ್ವಜರು ಅಮಾವಾಸ್ಯೆ, ಹುಣ್ಣಿಮೆಗಳೆಂದು ಹೆಸರಿಸಿದಂತೆ ಕಾಣುತ್ತದೆ. ಮಾನವ ತನ್ನ ಬಯಕೆ ಇಲ್ಲವೇ ಸಂಕಲ್ಪ, ವ್ರತ, ಇಚ್ಛೆಯ ಈಡೇರಿಕೆಗಾಗಿ, ಒಂದು ಸೀಮಿತವಾದ ಅವಧಿಯಲ್ಲಿ ಕೈಗೊಳ್ಳುವ ಹರಕೆ, ರೂಢಿ ಸಂಪ್ರದಾಯ, ಆಚರಣೆ ಉತ್ಸವಗಳೇ ಹಬ್ಬಗಳಾಗಿ ಬಂದಿವೆ. ಮಾನವನು ಐಹಿಕ ಸುಖ, ಸಂತೋಷ ಹಾಗೂ ಮುಕ್ತಿ ಸಾಧನೆಗಾಗಿ ಹಬ್ಬ ಆಚರಣೆಗಳಲ್ಲಿ ತೊಡಗಿದಂತೆ ತೋರುತ್ತದೆ. ಸೃಷ್ಟಿಕರ್ತನಾದ ಶಿವನು ಪ್ರಪಂಚದಲ್ಲಿ ನಾನಾ ರೂಪಗಳಿಂದ ಅವತರಿಸಿ ಜಗತ್ತನ್ನು ಕಾಪಾಡುವನೆಂದು ಹೇಳುತ್ತಾರೆ. ಈ ತೆರನಾದ ಸಮಾರಂಭದ ದಿನಗಳನ್ನು ಜನಪದರು ಹಬ್ಬ ಹರಿದಿನಗಳೆಂದು ಕರೆಯುತ್ತಾ ಬಂದಿರಬೇಕು. ಮಾನವ ತನ್ನ ನಿತ್ಯ ಲೌಖಿಕ ಜೀವನದಿಂದ ಅಲೌಖಿಕ ಜೀವನದತ್ತ ಮುನ್ನಡೆಯಲು ಸನಾತನವಾಗಿ ಆಚರಿಸುತ್ತಾ ಬಂದ ಈ ಹಬ್ಬಗಳು ಸಹಾಯಕವಾಗಿವೆ. ಹೀಗಾಗಿ ಹಬ್ಬದ ದಿನವೆಂದರೆ ಪವಿತ್ರ ದಿನವಾಗಿದೆ. ಅದನ್ನು ಬಡವಬಲ್ಲಿದವರೆಲ್ಲರೂ ಹರುಷದಿಂದ ಆಚರಿಸುತ್ತಾ ಬಂದಿದ್ದಾರೆ.

ಸಾಮಾನ್ಯವಾಗಿ ಕಡಲಬಾಳುನಲ್ಲಿ ಹಿಂದೂ ಮುಸ್ಲಿಂರು ಆಚರಿಸುವ ಹಬ್ಬವೆಂದರೇ ಚಾಂಗ ದೇವರ ಉರುಸು. ಕಡಲಬಾಳು ಗ್ರಾಮದಲ್ಲಿ ಆಚರಿಸುವ ಹಬ್ಬಗಳನ್ನು ಕುರಿತು ವಿವರಿಸುವುದು ಮುಖ್ಯ ಉದ್ದೇಶವಾಗಿದೆ. ಆಚರಣೆ ರೀತಿಯಲ್ಲಿ ಅಲ್ಪಸ್ವಲ್ಪ ಬದಲಾವಣೆ ಕಂಡುಬರುವುದು. ಹಬ್ಬದ ಆಚರಣೆ ಅವರವರ ಆರ್ಥಿಕ ಸ್ಥಿತಿಯನ್ನು ಅನುಸರಿಸಿ ಇರುತ್ತದೆ. ಕಡ್ಡಾಯವಾಗಿ ತುಂಬಾ ವೈಶಿಷ್ಟ್ಯಪೂರ್ಣವಾಗಿ ಆಚರಿಸುತ್ತಾ ಬಂದಿರುವ ಹಬ್ಬಗಳೆಂದರೇ

ದೀಪಾವಳಿ, ಮಹಾನವಮಿ, ನಾಗರಪಂಚಮಿ, ಯುಗಾದಿ, ಕಾರಹುಣ್ಣಿಮೆ, ಎಳ್ಳು ಅಮಾವಾಸ್ಯೆ, ಮೊಹರಂ, ಹೋಳಿಹಬ್ಬ, ಗಣೇಶ ಚತುರ್ಥಿ.

**ಹಬ್ಬ ಹರಿದಿನಗಳು:** ಹಬ್ಬಗಳು ಪ್ರತಿ ವರ್ಷವು ವಿಶೇಷವಾದ ಸಂದರ್ಭದಲ್ಲಿ ಸಾಮಾಜಿಕ ಕ್ಷೇಮಕ್ಕಾಗಿ ಆಚರಿಸಲ್ಪಡುತ್ತವೆ. ಈ ಬಂಧು ಒಳಗವು ಸೇರುವ ರಕ್ತ ಸಂಬಂಧಗಳು ಒಂದುಗೂಡಿಸುವಂತಹ ಸಂದರ್ಭದಲ್ಲಿ ಊರುಕೇರಿಗಳನ್ನು ಹತ್ತಿರ ತರುವ ಸಂದರ್ಭ ಮತ್ತು ಸಂತೋಷದ ಸಂದರ್ಭ ಪುಣ್ಯದ ಸಂದರ್ಭ ಎಂದು ನಿರ್ದಿಷ್ಟಪಡಿಸಿದ ದಿನಗಳಲ್ಲಿ ಆಚರಿಸುವ ಶುಭ ಕಾರ್ಯದ ಸಂಕೇತವಾಗಿ ಹಬ್ಬಗಳು ನಡೆದು ಬಂದಿವೆ ಹಾಗೂ ನಡೆಯುತ್ತಲೇ ಇವೆ. ಹಬ್ಬದಲ್ಲಿ ಊಟವೇ ಮುಖ್ಯವಾಗಿವೆ. ಅದಕ್ಕಾಗಿಯೇ ಪ್ರಸಿದ್ಧವಾದಂತಹ ಊಟ ಹಬ್ಬದೂಟ ಎನ್ನುವರು. ಕೇವಲ ತಿಂದು ತೇಗಿ ನಲಿದಾಡುವುದು ಮಾತ್ರವಲ್ಲ ಹಬ್ಬಗಳಲ್ಲಿ ಪ್ರತಿ ನಿಯಮವನ್ನು ಎಲ್ಲಾ ದಿನಗಳಲ್ಲಿ ಅಲ್ಲದಿದ್ದರೂ, ಕೆಲವೊಂದು ವಿಶೇಷ ದಿನಗಳಲ್ಲಿಯಾದರೂ ಪಾಲಿಸಿ ಕಡ್ಡಾಯವಾಗಿ ದೇಹಕ್ಕೆ ಪೌಷ್ಟಿಕತೆಯನ್ನು ತೆಗೆದುಕೊಳ್ಳುವುದಾಗಿದೆ.

ಸಂಗಾತಿಯ ಬಗ್ಗೆ ಗೌರವ ಭಾವನೆಯನ್ನು ವ್ಯಕ್ತ ಪಡಿಸಿ ತನಗೆ ತಾನೇ ಆತ್ಮ ಸಂಗಾತಿಯಾಗುವ ಸಂದರ್ಭವನ್ನು ಸಹ ಕಲ್ಪಿಸಿಕೊಂಡವಂತಹ ಆಚರಣೆ ಜಪ-ತಪ-ಪೂಜೆ ಇತ್ಯಾದಿಗಳೊಂದಿಗೆ ಬಾಹ್ಯ, ಅಂತಃಕರಣ ಶುದ್ಧಿಗೊಳ್ಳುವ ಕ್ರಮಗಳನ್ನು ಹಬ್ಬಗಳು ಅರ್ಥೈಸಿ ಕೊಡುತ್ತವೆ. ಮನಸ್ಸಿಗೆ ಶಾಂತಿ ನೆಮ್ಮದಿಯನ್ನು ನೀಡುತ್ತವೆ. ಜನಪದರ ಬದುಕಿನಲ್ಲಿ ಹೊಸ ವರ್ಷದ ಹೊಸ ಹುರುಪು ತುಂಬುವ ಹಬ್ಬಗಳು, ಹೊಸ ಇತಿಹಾಸ ಸೃಷ್ಟಿಗಾಗಿ ನಾವು ಹಬ್ಬಗಳನ್ನು ನೋಡಬೇಕಾಗಿದೆ. ಜನತೆಯ ಸಾಂಸ್ಕೃತಿಕ ಇತಿಹಾಸವನ್ನು ಬರೆಯಬೇಕಾದರೆ ಈ ಜನರ ಮಧ್ಯೆಯೇ ಹೋಗಬೇಕು. ಭವಿಷ್ಯತ್ತಿನ ಏಳಿಗೆಗಾಗಿಯೇ ಅವರಲ್ಲಿ ಸ್ವೀಕರಿಸುವಂತಹದ್ದು ಏನು, ನಿರಾಕರಿಸುವಂತಹದ್ದು ಏನು ನಾವು ವಿರೋಧಿಸುವ ಯಾಜಮಾನ ಸಂಸ್ಕೃತಿಗೆ ಪ್ರತಿಯಾಗಿ ಕಟ್ಟಬೇಕೆಂದಿರುವ ಪರ್ಯಾಯ ಸಂಸ್ಕೃತಿಯ ಸ್ವರೂಪ ಹೇಗಿರಬೇಕು. ಪ್ರಗತಿಪರ ರನ್ನು ಕಾಡುತ್ತಿರುವ ಇಂದಿನ ಸಾಮಾಜಿಕ ಸಾಂಸ್ಕೃತಿಕ ಸಂದರ್ಭದಲ್ಲಿ ಹಬ್ಬಗಳು ಸ್ವಲ್ಪ ಮಟ್ಟಿಗಾದರೂ ಮಾರ್ಗದರ್ಶನವಾಗಬಹುದು. ಯಜಮಾನ ಸಂಸ್ಕೃತಿಯು ಸಾಮಾನ್ಯವಾಗಿ ಏಕಮುಖ ಬೆಳವಣಿಗೆಗೆ ಸಾಕ್ಷಿಯಾಗಿದೆ. ಈ ಹಬ್ಬಗಳು ಬಹುಮುಖ ಸಂಸ್ಕೃತಿಯ ಅಡಿಪಾಯದ ಅಡಿಗಲ್ಲು. ಸಂಸ್ಕೃತಿಯ ಅಧ್ಯಯನಕ್ಕೆ ಇಂತಹ ಹಲವು ಸಂಗತಿಗಳು ಗಟ್ಟಿ ಆಕರವಾಗುವವು. ಪರ್ಯಾಯ ಸಂಸ್ಕೃತಿಯನ್ನು ಸಹ ನಿರ್ಮಿಸಲು ಸಹಕಾರಿಯಾಗಿವೆ. ಹಬ್ಬದ ಶುಭದಿನಗಳಲ್ಲಿ ಹಾಡಿ ಕುಣಿದು ವಿವಿಧ ಆಚರಣೆಗಳಿಂದ ಹಬ್ಬಕ್ಕೆ ಕಾರಣವಾದ ಪ್ರಕೃತಿ, ದೈವ, ಇಲ್ಲವೆ ಮಾತೃ-ಪಿತೃಗಳ ಋಣವನ್ನು ತೀರಿಸುವ ಸಲುವಾಗಿಯೇ ಉತ್ಸುಕರಾಗಿರುತ್ತಾರೆ ಎಂತಲೂ ಹೇಳಬಹುದು.

ಹಬ್ಬಗಳು ಜನ್ಮತಾಳಿರುವುದೇ ದೇವರನ್ನು ನೆನೆಯುವುದಕ್ಕಾಗಿ. ಅದಕ್ಕೆಂದೇ ಜನಪದ ನಾಣ್ಣುಡಿಯ ಜೋಡಿಪದಗಳು ಇವೆ. ಅದೇನೆಂದರೆ ಹಬ್ಬ-ಹರಿದಿನಗಳಲ್ಲಿ ಎಲ್ಲರೂ ಕೂಡಿಕೊಂಡು ಸಂಭ್ರಮ ಸಂತೋಷದಿಂದ ತಮ್ಮ ಇಷ್ಟ ಕುಲದೈವದ ಕೃಪೆಯನ್ನು ಸಂಪಾದಿಸಿಕೊಳ್ಳಲು ಅದರಲ್ಲಿ ಭಾಗಿಯಾಗುವ ಸನ್ನಿವೇಶಗಳೇ ಹೆಚ್ಚು. ಜಾನಪದರು ತಮ್ಮ ಮನೆಯಲ್ಲಿ ಆ ಸಂದರ್ಭದಲ್ಲಿ ಮನೆಯ ಪ್ರತಿಯೊಬ್ಬ ಸದಸ್ಯರು ಸ್ನಾನ ಮಾಡಿಸಿ ಹೊಸಬಟ್ಟೆಯನ್ನು ಧರಿಸುತ್ತಾರೆ. ಬಂಧು-ಮಿತ್ರರೊಂದಿಗೆ ಸಂತೋಷವನ್ನು ಹಂಚಿಕೊಂಡು ದೇವಸ್ಥಾನಗಳಿಗೆ ಹೋಗಿ ಹಣ್ಣು-ಕಾಯಿಯನ್ನು ಅರ್ಪಿಸುತ್ತಾರೆ. ಭಗವಂತನ ಅನುಗ್ರಹಕ್ಕೆ ಪಾತ್ರರಾಗುತ್ತಾರೆ. ಆತ್ಮೀಯರೆಲ್ಲ ಕೂಡಿಕೊಂಡು ಸುಖ ಸಂತೋಷವನ್ನು ಹೊಂದುವುದಕ್ಕಾಗಿ ಕೆಲವು ದಿನಗಳನ್ನು ಮಾಡಿಕೊಂಡಿದೆ. ಗದ್ದೆ, ಮನೆ, ತೋಟ, ಕ್ಷೇಮ ಸಾಧನೆಗೆ ಅಡ್ಡಿ ಆತಂಕಗಳಾಗದೇ, ದೃಷ್ಟ ಶಕ್ತಿಗಳನ್ನು ನನಿವವಾರಿಸಲು ಹಾಗೂ ರಕ್ಷಿಸಲು, ದೈವವನ್ನು ಸಂಪ್ರೀತಿಗೊಳಿಸುವ ಉದ್ದೇಶಕ್ಕಾಗಿ ಪ್ರಾರ್ಥನೆ ಸಂಪ್ರದಾಯ ಆಚರಣೆಗಳಿಂದ ಫಲವತ್ತತೆಯನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಮಾನವ ಹಬ್ಬಗಳನ್ನು, ಆಚರಣೆಗಳನ್ನು ತಂದಿರಬಹುದು. ಹಬ್ಬಗಳು ಹಬ್ಬದ ದಿನಗಳಲ್ಲಿ ಬೇರೆ ರೀತಿಯಿಂದ ದಿನವನ್ನು ಕಳೆಯುತ್ತಾರೆ. ಹಬ್ಬಗಳು ಜನಪದರ ಜೀವನಕ್ಕೆ ಅವಶ್ಯಕವಾದವುಗಳು. ಕಡಲಬಾಳು ಗ್ರಾಮ ಅದರ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಆಚರಿಸುವ ಪ್ರತಿ ಪಕ್ಷ ಸಂಕ್ರಾಂತಿ, ನಾಗರಪಂಚಮಿ, ಆಯುಧಪೂಜೆ, ಯುಗಾದಿ, ಹಬ್ಬಗಳನ್ನು ಕಾಣುತ್ತೇವೆ.

**ಯುಗಾದಿ:** ಶಾಲಿವಾಹನ ಶಕರದ ಎಣಿಕೆ ಆರಂಭವಾದ ಚೈತ್ರ ತಿಂಗಳಿನ ಪ್ರಥಮ ದಿನ. ಈ ಹಬ್ಬದ ಹಿಂದಿನ ದಿನ ನೀರು ತುಂಬುವ ಪಾತ್ರೆಗಳ ಮೇಲೆ ಸಣ್ಣ ಬಣ್ಣಗಳಿಂದ ಅಲಂಕಾರ ಮಾಡಿ ತುಂಬಿದ ಕೊಡ ಇಟ್ಟಿರುತ್ತಾರೆ.

ಮನೆಯಲ್ಲಿ ಬಾಗಿಲುಗಳಿಗೆ ತಳಿರು-ತೋರಣಗಳನ್ನು ಕಟ್ಟಿ ಮುಂಭಾಗದಲ್ಲಿ ರಂಗವಲ್ಲಿಯಿಂದ ಅಲಂಕಾರ ಮಾಡುತ್ತಾರೆ. ಇಡೀ ವರ್ಷದ ಶುಭದಿಣಗಲ್ಲಿ ಈ ದಿನ ಅತ್ಯುತ್ತಮ ದಿನವೆಂದು ಭಾವಿಸಿ, ಭಕ್ತಿಪೂರ್ವಕವಾಗಿ ಮನೆಯಲ್ಲಿ ದೇವರನ್ನು ಪೂಜೆ ಮಾಡುತ್ತಾರೆ. ನಂತರ ಸಂಜೆಯ ಕಾಲ ದೇವಸ್ಥಾನಗಳಿಗೆ ಹೋಗಿ ಬರುವ ಸಂಪ್ರದಾಯವೂ ಇದೆ. ಯುಗಾದಿ ದಿವಸ ಮನೆಯಲ್ಲಿ ಬೇವು-ಬೆಲ್ಲವನ್ನು ಸ್ವೀಕರಿಸಿ ವಿಶೇಷ ಭಕ್ಷ್ಯ ಭೋಜ್ಯಗಳಿಂದ ಕೂಡಿದ ಭೋಜನ ನಡೆಯುತ್ತದೆ.

**ಬಸವ ಜಯಂತಿ :** ಈ ದಿನ ಭಕ್ತಿ ಭಂಡಾರಿ ಬಸವಣ್ಣನವರ ಜನ್ಮ ದಿನ. ಇದನ್ನು ಭಕ್ತಿ ಪೂರ್ವಕವಾಗಿ ವೈಭವದಿಂದ ಬಸವ ಜಯಂತಿ ಎಂದು ಆಚರಣೆ ಮಾಡುತ್ತಾರೆ. ಇಲ್ಲಿರುವ ವೀರಶೈವ ಸಂಘಸಂಸ್ಥೆಗಳಲ್ಲಿ ಈ ಉತ್ಸವವನ್ನು ಅತ್ಯಂತ ಅದ್ದೂರಿಯಾಗಿ ಮಾಡುತ್ತಾರೆ. ವೈಶಾಖ ಶುದ್ದ ತೃತೀಯವನ್ನು ಅಕ್ಷಯ ತೃತೀಯ ಎನ್ನುವರು. ಹಾಗೆಯೇ "ಅಕ್ಷಯ

ತೃತೀಯ" ಆಚರಣೆ ಮಾಡುತ್ತಾರೆ. ಈ ದಿನವೂ ವಿಶಿಷ್ಟವಾಗಿದೆ. ಈ ದಿನದಂದು ಬಂಗಾರವನ್ನು ಕೊಂಡರೆ ಸಂಪತ್ತು ಸಕಲ, ಸಮೃದ್ಧಿಯಾಗುತ್ತದೆ ಎಂಬ ನಂಬಿಕೆ ಇದೆ.

ರೈತರು ಬಸವ ಜಯಂತಿ ದಿನ ತಮ್ಮ ಎತ್ತುಗಳನ್ನು ಶೃಂಗರಿಸಿ, ಸಕಲ ವಾದ್ಯಗಳ ಸಮೇತ ಮೆರವಣಿಗೆಯನ್ನು ಮಾಡುತ್ತಾರೆ. ಮರಾಠರು ಛತ್ರಪತಿ ಶಿವಾಜಿಯ ಜನ್ಮ ದಿನ ಎಂತಲೂ ಆಚರಣೆ ಮಾಡುತ್ತಾರೆ.

**ಕಾರ ಹುಣ್ಣಿಮೆ :** ಕೃಷಿಕರು ಎತ್ತುಗಳ ಕೋಡುಗಳಿಗೆ ಬಣ್ಣ ಹಚ್ಚಿ ಅಲ್ಲಲ್ಲಿ ಬಳೆ ಆಕಾರದ ಹಾಗೆ ಬಣ್ಣದಿಂದ ಅಲಂಕರಿಸಿ ಎತ್ತುಗಳ ಮೆರವಣಿಗೆ ಹೊರಡಿಸಿ ಊರ ಅಗಸಿಯ ಕಡೆಗೆ ಅಲಂಕಾರದಿಂದ ಕಟ್ಟಿದ ಕರಿಯನ್ನು ಓಡಿಸುತ್ತಾರೆ. ಕೆಂದತ್ತು ಕರಿಹರಿದರೆ ಕೆಂಜೋಳ ಬೆಳೆಯುವುದೆಂದು ತಿಳಿಯುತ್ತಾರೆ. ಬಿಳಿ ಎತ್ತು ಕರಿ ಹರಿದರೆ ಬಿಳಿ ಜೋಳ ಬೆಳೆಯುವುದೆಂದು ತಿಳಿಯುತ್ತಾರೆ.

**ಮಣ್ಣೆತ್ತಿನ ಅಮವಾಸ್ಯೆ :** ಹೆಸರೇ ಹೇಳುವಂತೆ ಮಣ್ಣಿನಲ್ಲಿ ಒಂದು ಜೊತೆ ಎತ್ತುಗಳನ್ನು ಮಾಡಿ ಪೂಜಿಸುವರು. ಜೇಷ್ಠಮಾಸ ಅಮಾವಸ್ಯೆಯ ದಿನವನ್ನು ಮಣ್ಣೆತ್ತಿನ ಅಮಾವಾಸ್ಯೆ ಎಂದು ಆಚರಣೆ ಮಾಡುತ್ತಾರೆ. ಈ ದಿನ ಒಕ್ಕಲಿಗರು ಗೊಂಬೆ, ಎತ್ತುಗಳನ್ನು ಮಾಡುತ್ತಾರೆ.

ಆಷಾಢ ಮಾಸದ ಪ್ರತಿ ಶುಕ್ರವಾರ ಹೆಣ್ಣು ಮಕ್ಕಳು ನದಿತೀರ, ಕೆರೆ ಸಮೀಪ ಅಥವಾ ಹಳ್ಳಿಗೆ ನೀರೊದಗಿಸುವ ಮೂಲದ ಸಮೀಪಕ್ಕೆ ಹೋಗಿ ಮಣ್ಣಿನಿಂದ ಗೋಪುರಾಕೃತಿಯನ್ನು ಮಾಡಿ(ಮಡಿಕೆ) ಇದಕ್ಕೆ ಗುಳ್ಳವ್ವ ಎನ್ನುವರು.

ಭಾದ್ರಪದ ಮಾಸ ಶುಕ್ಲಪಕ್ಷದಂದು, ಗಣೇಶ ಚತುರ್ಥಿಯು ಜನಪ್ರಿಯ ಹಬ್ಬವಾಗಿದೆ. ಕೆಲವರ ಮನೆಯಲ್ಲಿ ಗಣೇಶನನ್ನು ಇಟ್ಟು ಅವನಿಗೆ ಪ್ರಿಯವಾದ ಮೋದಕ ಮಾಡಿ, ನೈವೇದ್ಯ ಸಹ ಗಣೇಶನಿಗೆ ಮಾಡುತ್ತಾರೆ.

ಅಶ್ವಜ ಶುದ್ಧ ಮೊದಲನೇ ದಿನ 'ನವರಾತ್ರಿ ಪಾಡ್ಯ'ವಾಗಿದ್ದು, ಈ ಹಬ್ಬದಲ್ಲಿ ೯ ದಿನ ಪೂಜೆಯನ್ನು ಮಾಡುತ್ತಾರೆ. ಇದು ಭಾರತೀಯ ಸಂಸ್ಕೃತಿಯಲ್ಲಿ ಬಹು ದೊಡ್ಡ ಹಬ್ಬವಾಗಿದೆ. ಇದನ್ನು ನವರಾತ್ರಿ, ದಸರ ಎಂದು ಕರೆಯುತ್ತಾರೆ.

ಮೈಲಾರ ದೇವರ ಭಕ್ತರು 'ಶಿಬಾರ'ಕ್ಕೆ ಹೋಗಿ ಬನ್ನಿ ಮುಡಿಯುವುದನ್ನು ಕಾಣಬಹುದು. ಅಂದು ಊರಲ್ಲಿರುವ ಎಲ್ಲರೂ ಬನ್ನಿಮರದ ಕೆಳಗೆ ಬನ್ನಿ ಮುಡಿಯುತ್ತಾರೆ. ಆಯುಧಗಳ ಪೂಜೆ ವಿಶಿಷ್ಟವಾಗಿದೆ. ಈ ದಿನ ಕೃಷಿಕರು ತಮ್ಮ ಹೊಲ ಗದ್ದೆಗಳಿಗೆ ಹೋಗಿ ಪಾಂಡವರ ಗುರುತಿಗಾಗಿ ಐದು ಕಲ್ಲುಗಳನ್ನು ಆರಿಸಿ ಅವುಗಳಿಗೆ ದೇವರಂತೆ ಪೂಜೆ ಮಾಡಿ ಪೂಜಿಸಿ ತಮ್ಮ ಹೊಲದಲ್ಲಿ ಊಟ ಮಾಡಿ ಬರುತ್ತಾರೆ.

**ಆಷಾಢ ಮಾಸ:** ಕಡಲಬಾಳುನಲ್ಲಿ ಆಷಾಢಮಾಸ ಆರಂಭವಾಗುತ್ತಿದ್ದಂತೆ ಹಬ್ಬದ ವಾತಾವರಣವು ತುಂಬಿ ತುಳುಕುತ್ತದೆ. ಏಕೆಂದರೆ ಮಣ್ಣೆತ್ತಿನ ಅಮವಾಸ್ಯೆ ನಂತರ ಬರುವ ಮೊದಲನೆ ಮಂಗಳವಾರದಿಂದ ಹಿಡಿದು ಆರು ತಿಂಗಳ ಕೊನೆಯ ಮಂಗಳವಾರದವರೆಗೂ ಪ್ರತಿ ಮಂಗಳವಾರ ಬಸವಣ್ಣ, ಗುಳ್ಳವ್ವನ ಪ್ರತಿಮೆಯನ್ನು ಮಣ್ಣಿನಿಂದ ಮಾಡುತ್ತಾರೆ.

ಆಷಾಢಮಾಸದ ಕೊನೆಯ ದಿನ, ಅಂದರೆ ಮಂಗಳವಾರ ಊರಿನಲ್ಲಿ ಮಕ್ಕಳು ಮನೆ ಮನೆಗೆ ಹೋಗಿ ಪಟ್ಟಿಯನ್ನು ಎತ್ತುತ್ತಾರೆ. ಜನರಿಂದ ಸಂಗ್ರಹಿಸಿದ ಎಲ್ಲಾ ಧಾನ್ಯ, ಧವಸ, ಹಣವನ್ನು ಸಂಗ್ರಹಿಸಿ, ಸಾಯಂಕಾಲ ಪೂಜೆ ವಿಧಿ–ವಿಧಾನಗಳನ್ನು ಮಹಿಳೆಯರು, ಮಕ್ಕಳು ಅತ್ಯಂತ ಸಂಭ್ರಮ, ಸಡಗರದಿಂದ ಮಾಡುತ್ತಾರೆ.

ಬಸವಣ್ಣನನ್ನು ಮಣ್ಣಿನ ಮೂರ್ತಿ ಮಾಡಿ ಪೂಜಿಸುವುದರ ಜೊತೆಗೆ ಕೊನೆಯ ಮಂಗಳವಾರ ಆ ಬಸವಣ್ಣ ವಿಗ್ರಹವನ್ನು ಊರ ತುಂಬಾ ಮೆರವಣಿಗೆ ಮಾಡಿ, ಕೊನೆಯ ಸಾಯಂಕಾಲದ ಸಮಯದಲ್ಲಿ ಊರ ಹೊರಗಿರುವ ದೊಡ್ಡ ಕೆರೆಗೆ ಹಾಕುತ್ತಾರೆ.

ಈ ಮೆರವಣಿಗೆಯ ಸಂದರ್ಭದಲ್ಲಿ ಮಕ್ಕಳು, ಹಿರಿಯ ನಾಗರಿಕರು, ಮಹಿಳೆಯರು ಸಹ ಭಾಗವಹಿಸಿರುವುದು ವಿಶಿಷ್ಟ. ಯಾವುದೇ ಸಮುದಾಯ–ಮತ ಎನ್ನುವ ಭೇದ ಭಾವ ಇಲ್ಲದೆ ಉತ್ಸಾಹದಲ್ಲಿ ಭಾಗವಹಿಸಿ ಯಶಸ್ವಿಗೊಳಿಸುತ್ತಾರೆ. ಈ ಹಬ್ಬವು ಬಹಳ ಕಾಲದಿಂದಲೂ ನಡೆದುಕೊಂಡು ಬಂದಿದೆ.

**ಆಷಾಢ ಏಕಾದಶಿ :** ಈ ಆಷಾಢ ಏಕಾದಶಿಯನ್ನು ಪ್ರತಿವರ್ಷ ಜೂನ್–ಜುಲೈ ತಿಂಗಳಲ್ಲಿ ವಿಶೇಷವಾಗಿ ಪಂಢರಪುರದ ಪಾಂಡುರಂಗ ವಿಠಲ ಭಕ್ತ ಸಮೂಹ ಈ ಹಬ್ಬದ ಆಚರಣೆ ಮಾಡುತ್ತಾರೆ. ಕಡಲಬಾಳ ಗ್ರಾಮದಲ್ಲಿ ವಿವಿಧ ಸಮುದಾಯದವರಿದ್ದು, ಅವರೆಲ್ಲರೂ ಆಷಾಢ ಏಕಾದಶಿಯಂದು ಬೆಳಗಿನಿಂದ ಸಾಯಂಕಾಲದವರೆಗೆ ಉಪವಾಸ. ಅಲ್ಲದೆ ಸಂತರ ಮನೆತನದ ಸದಸ್ಯರು ಪತಿ–ಪತ್ನಿಯರು ಸೇರಿ ಈ ವ್ರತ ಕೈಗೊಂಡು ಅಂದಿನ ದಿವಸ ವಿಶೇಷವಾಗಿ ವಿಠಲ ದೇವಸ್ಥಾನಕ್ಕೆ ಹೋಗಿ ತುಳಸಿ ಮಾಲೆ ಧರಿಸಿ, ಸುಳ್ಳು ಹೇಳಬಾರದು, ಮೋಸ, ವಂಚನೆ ಮಾಡಬಾರದು ಎಂದು ವಚನ ತೆಗೆದುಕೊಳ್ಳುತ್ತಾರೆ. ವಿವಿಧ ಧರ್ಮದೇವತೆಗಳಿಗೆ ನಡೆದುಕೊಳ್ಳುವ ಸಂಪ್ರದಾಯಗಳು ಇಲ್ಲಿವೆ.

**ಎಳ್ಳಾಮಾವಸೆ:** ಭಾರತೀಯರು ಭೂಮಾತೆಯನ್ನು ಆರಾಧಿಸುವ ಹಬ್ಬಗಳಲ್ಲಿ ಎಳ್ಳಾಮಾವಸ್ಯೆ ಪ್ರಮುಖವಾಗಿದೆ. ಬಿಳಿಜೋಳ ಆಗ ತಾನೆ ಹೊಡೆ ಬಿಚ್ಚಿಕೊಂಡು ಸುಂಕಗಟ್ಟಿ ಹಾಲಗಾಳ

ಹಿಡಿಯುತ್ತಿರುತ್ತದೆ. ಅಮವಾಸ್ಯೆಯ ದಿನದಂದು ಎತ್ತುಗಳನ್ನು ಮೈ ತೊಳೆದು ಜೂಲುಹಾಕಿ ಕೊರಳಿಗೆ ಗೆಜ್ಜೆಸರ ಕಟ್ಟಿ ಶೃಂಗಾರ ಮಾಡಿರುತ್ತಾರೆ.

ಎಳ್ಳಾಮಾವಾಸಿಗೆ ಎಳ್ಳಕಾಳಷ್ಟು ಬಿಸಲು ಸಹ ಪ್ರಾರಂಭವಾಗಿರುವುದರಿಂದ ಗಾಡಿಗೆ ಸವಾರಿ ಕಟ್ಟುತ್ತಾರೆ. ನಸುಕಿನಲ್ಲಿಯೇ ಎದ್ದ ಹೆಂಗಸರು ಎಳ್ಳು ಹಚ್ಚಿದ ರೊಟ್ಟಿ, ಎಣ್ಣೆಗಾಯಿ, ಚಟ್ನಿ, ಹುಲಿಬಾನ, ಹೋಳಿಗಿ, ಹುಗ್ಗಿ, ಕಡಬು, ಅನ್ನಸಾರು ಮೊದಲಾದ ತಿಂಡಿ ತಿನಿಸುಗಳನ್ನು ಸಹ ಮಾಡಿರುತ್ತಾರೆ.

ಬಿಸಿಲಿನ ಮೊದಲೇ ಗಾಡಿಯನ್ನು ಹೂಡಿ ಬುತ್ತಿ, ನೀರು ಇಟ್ಟುಗೊಂಡು ಓಣಿಯವರನ್ನು ಮತ್ತು ಸಂಬಂಧಿಕರನ್ನು ಕರೆದುಕೊಂಡು ಎಲ್ಲರೂ ಗಾಡಿಯನ್ನು ಹತ್ತಿ ತಮ್ಮ ಹೊಲಗಳಿಗೆ ಹೋಗುತ್ತಾರೆ. ಹೊಲದಲ್ಲಿನ ಬಲಭಾಗದ ಮೂಲೆಯೊಂದರಲ್ಲಿ ಗಿಡದ ನೆರಳ ನೋಡಿ ಗಾಡಿ ಕೊಳ್ಳ ಹರಿಯುತ್ತಾರೆ.

ಬಂಡಿಯಲ್ಲಿನ ಬುತ್ತಿ ನೀರನ್ನು ಇಳಿಸಿ ಬನ್ನಿ ಗಿಡದ ಕೆಳಗೆ ಹೊಲದ ಮೂಲೆಯಲ್ಲಿ ೫ ಚಪ್ಪಟೆಯಾಕಾರದ ಕಲ್ಲುಗಳನ್ನಿರಿಸಿ ನೀರು ಸುರವಿ ವಿಭೂತಿ, ಕುಂಕುಮ ಹಚ್ಚಿ, ಕಾಯಿ ಒಡೆದು, ನೀರು ಹಿಡಿದುಕೊಂಡು ಹೊಲದ ೪ ಮೂಲೆಗೂ ಮತ್ತು ಹೊಲದ ತುಂಬಾ ಒಬ್ಬ ಹುಲ್ಲುಲಿಗೊ ಸುರಂಬಳಿಗೊ ಎನ್ನುತ್ತಾರೆ.

ಆಹಾರ ಹಾಗೂ ನೀರನ್ನು ಸಿಂಪಡಿಸುತ್ತಾರೆ. ಅದನ್ನು 'ಚರಗ' ಚೆಲ್ಲುವುದು ಎನ್ನುತ್ತಾರೆ. ಹೀಗೆ ಮಾಡುವುದರಿಂದ ಭೂದೇವಿ ಸಂತೃಪ್ತಳಾಗಿ ಹೆಚ್ಚಾಗಿ ಇಳುವರಿಯನ್ನು ಕೊಡುತ್ತಾಳೆಂಬ ನಂಬಿಕೆ. ಹುಲುಸಾಗಲಿ ಎಂಬುವುದಾಗಿದೆ. ಇಷ್ಟಾದ ಮೇಲೆ ಎಲ್ಲರೂ ಗುಂಪಾಗಿ ಕುಳಿತು ಊಟ ಮಾಡುತ್ತಾರೆ. ನಂತರ ಗಿಡದ ನೆರಳಿಗೆ ವಿಶ್ರಾಂತಿ ತೆಗೆದುಕೊಳ್ಳುತ್ತಾರೆ.

**ಗೌರಿ ಹುಣ್ಣಿಮೆ:** ಗೌರಿ ಹುಣ್ಣಿಮೆ ಹೆಸರೇ ಹೇಳುವಂತೆ ಗೌರಿ ಮಗಳು. ಹೆಣ್ಣು ಮಕ್ಕಳ ಹಬ್ಬ ಎನ್ನಲಾಗಿದೆ. ೫ ದಿನದವರೆಗೆ ಆರತಿ ಮಾಡುತ್ತಾರೆ. ಐದನೇ ದಿನ ಸಕ್ಕರೆ ಆರತಿ ತಂದು ಬೆಳಗುತ್ತಾರೆ. ಗೌರಿ ಪೂಜೆ ಮಾಡಿ ಹಾಡು ಹಾಡುತ್ತಾರೆ. ಮದುವೆ ಗೊತ್ತಾದ ಹುಡುಗಿಯ ಮನೆಗೆ ಬಂದು ಸಕ್ಕರೆ ಆರತಿ ಕೊಟ್ಟು ಆರತಿ ಮಾಡಿ ಹೋಗುವ ಸಂಪ್ರದಾಯವಿದೆ.

**ದವನದ ಹುಣ್ಣಿಮೆ:** ಈ ಹುಣ್ಣಿಮೆ ಮಾರ್ಚ್, ಏಪ್ರಿಲ್, ಚೈತ್ರಮಾಸದಂದು ಆಚರಣೆ ಮಾಡುತ್ತಾರೆ. ಈ ತಿಂಗಳಲ್ಲಿ ಚಂದ್ರನೂ ಪೂರ್ಣ ಮೂಡಿರುತ್ತಾನೆ. ಇದನ್ನು ಹಿಂದೂಗಳ ತಿಂಗಳು ಎಂತಲೂ ಕರೆಯುತ್ತಾರೆ. ಈ ಸಮಯದಲ್ಲಿ ಗಿಡಗಳು ಮೊಗ್ಗು ಹೂವುಗಳನ್ನು ಬಿಡುವ ಸಮಯ ಅಂದರೆ ದವನದ ಹುಣ್ಣಿಮೆಯಾಗಿದೆ.

ಈ ಸಮಯದಲ್ಲಿ ಬಿಟ್ಟ ಹೂವುಗಳನ್ನು ದೇವರಿಗೆ ಅರ್ಪಿಸುತ್ತಾರೆ. ಇದಕ್ಕೆ 'ಪೂರ್ಣ ಮೂಡಿದ ಚಂದ್ರ' ಎನ್ನುವರು. ಕಡಲಬಾಳ ಗ್ರಾಮದಲ್ಲಿ ಹುಲಿಗೆಮ್ಮಗೆ, ಸೌದತ್ತಿ ಎಲ್ಲಮ್ಮ ದೇವಸ್ಥಾನಗಳಿಗೆ ಹೋಗಿ ಬರುವ ರೂಢಿಯನ್ನು ಇಟ್ಟುಕೊಂಡಿದ್ದಾರೆ. ದೇವರಿಗೆ ತಮ್ಮ ಕೈಲಾದ ಕಾಣಿಕೆಯನ್ನು, ಹರಕೆಗಳನ್ನು ತೀರಿಸಿ ಬರುವಂತಹ ಪದ್ಧತಿ ವಿಶೇಷವಾಗಿದೆ.

**ಭರತ ಹುಣ್ಣಿಮೆ:** ಇಡೀ ಭಾರತದಲ್ಲಿ ಈ ಹಬ್ಬವನ್ನು ಎಲ್ಲರೂ ಆಚರಿಸುವರು. ಇದನ್ನು ಚಂದ್ರನು ಸಂಪೂರ್ಣವಾಗಿ ಮೂಡಿದ ದಿನ, ಮಾಘ ಮಾಸ. ಈ ಹಬ್ಬವು ಪ್ರಾಚೀನ ಕಾಲದಿಂದ ಬಂದಿದ್ದು, ಈ ಕಾಲದವರು ಮಾಡುತ್ತಿದ್ದಾರೆ. ಭರತ ಹುಣ್ಣಿಮೆಯ ಸಮಯದಲ್ಲಿ ಜನರು ತಮ್ಮ ಶುದ್ದ ಮನಸ್ಸಿನಿಂದ ಮನೆಯಲ್ಲಿ ಸಿಹಿ ಪದಾರ್ಥವನ್ನು ಮಾಡಿ ದೇವರಿಗೆ ನೈವೇದ್ಯ ಮಾಡುತ್ತಾರೆ.

ತಮ್ಮ ಮನೆದೇವರ ದರ್ಶನಕ್ಕೆ ಹೋಗುತ್ತಾರೆ. ಈ ಹುಣ್ಣಿಮೆಯೂ ಸಂಪೂರ್ಣವಾಗಿ ಬೆಳಕಿನಿಂದ ಕೂಡಿರುತ್ತೆ. ವಿಶೇಷವಾದ ಅಡುಗೆಯನ್ನು ಮಾಡಿ ತುಂಬಿಸುವ ಪದ್ಧತಿ ಕಂಡುಬರುತ್ತದೆ. ಎಲ್ಲ ಜನರು ಗುಂಪು ಗುಂಪಾಗಿ ಊದುತ್ತಾ, ಬಾರಿಸುತ್ತಾ, ಉದೋ-ಉದೋ ಎಂದು ಹೇಳುತ್ತಾ ಈ ಪೂಜಾಕಾರ್ಯಕ್ರಮವನ್ನು ಮುಗಿಸುವರು.

**ಬೆನಕನ ಅಮವಾಸ್ಯೆ:** ಭಾರತೀಯ ಸಂಸ್ಕೃತಿಯ ಪರಂಪರೆ ಮತ್ತು ಒಗ್ಗಟ್ಟನ್ನು ಪ್ರತಿಬಿಂಬಿಸುವ ಹಬ್ಬ ಗಣೇಶ ಹಬ್ಬವಾಗಿದೆ. ಭಾರತದ ಉದ್ದಗಲಕ್ಕೂ ವಿಶೇಷವಾಗಿ ಆಚರಣೆಯನ್ನು ಮಾಡುತ್ತೇವೆ. ಈ ಹಬ್ಬಕ್ಕೆ ಸಮುದಾಯ, ಮತ, ಪಂಥದ ವ್ಯತ್ಯಾಸವಿಲ್ಲ. ಈ ಹಬ್ಬವನ್ನು ಹಿಂದೂಗಳು ತುಂಬಾ ಶ್ರದ್ಧೆ, ಭಕ್ತಿಯಿಂದ ಆಚರಣೆ ಮಾಡುತ್ತಾರೆ. ತಮ್ಮ ಸ್ಥಿತಿ-ಗತಿಗಳಿಗೆ ತಕ್ಕಂತೆ ಗಣಪತಿಯನ್ನು ಐದು ದಿನ, ಒಂಭತ್ತು ದಿನ, ೧ ತಿಂಗಳವರೆಗೆ ಪ್ರತಿಷ್ಠಾಪನೆ ಮಾಡುತ್ತಾರೆ. ಈ ಹಬ್ಬದಲ್ಲಿ ಸಿಡಿಮದ್ದುಗಳನ್ನು ಆನಂದದಿಂದ ಸಿಡಿಸುತ್ತಾರೆ.

ಗಣಪತಿಯ ವಿಸರ್ಜನಾ ಕಾರ್ಯಕ್ರಮದಲ್ಲಿ ಮೆರವಣಿಗೆ ಮಾಡಿ ಯುವಕರು ಕುಣಿಯುತ್ತಾ ಕೆರೆಯಲ್ಲಿ ಬಾವಿಯಲ್ಲಿ ಚೆಲ್ಲುವರು. ಹಬ್ಬದ ವಿಶೇಷ ತಿಂಡಿ ಕಡುಬು, ಗೋಧಿ ಹುಗ್ಗಿ, ಮೋದಕವನ್ನು ಮಾಡುವ ಪದ್ಧತಿ ಈಗಲೂ ವಿಶೇಷವಾಗಿದೆ.

ಮನುಷ್ಯ ತನ್ನ ನಿತ್ಯ ಲೌಕಿಕ ಜೀವನದಿಂದ ಅಲೌಕಿಕ ಜೀವನದತ್ತ ಮುನ್ನಡೆಯಲು ನೂತನವಾಗಿ ಆಚರಿಸುತ್ತಾ ಬಂದ ಈ ಹಬ್ಬಗಳು ಸಹಾಯಕವಾಗಿವೆ. ಹೀಗಾಗಿ ಹಬ್ಬದ ದಿನವೆಂದರೆ ಪವಿತ್ರ ದಿನವಾಗಿದೆ. ಎಲ್ಲರೂ ಹರುಷದಿಂದ ಆಚರಿಸುತ್ತ ಬಂದಿದ್ದಾರೆ.

ಸಾಮಾನ್ಯವಾಗಿ ಕಡಲಬಾಳುವಿನಲ್ಲಿ ಹಿಂದೂ ಮುಸ್ಲಿಂರು ಆಚರಿಸುವ ಹಬ್ಬವೆಂದರೆ ಉರುಸು, ಹನುಮಂತನ ಮುಳ್ಳಿನ ಪವಾಡ. ಕಡಲಬಾಳು ಗ್ರಾಮದಲ್ಲಿ ಅನೇಕ ರೀತಿಯಾದ ಆಚರಣೆಗಳಲ್ಲಿ ಅಲ್ಪಸ್ವಲ್ಪ ಬದಲಾವಣೆ ಕಂಡುಬರಬಹುದು.

ಹಬ್ಬದ ಆಚರಣೆ ಅವರವರ ಆರ್ಥಿಕ ಸ್ಥಿತಿಯನ್ನು ಅನುಸರಿಸಿ ಇರುತ್ತದೆ. ಕಡ್ಡಾಯವಾಗಿ ವಿಶಿಷ್ಟ ಅಪೂರ್ವವಾದ ಆಚರಣೆ ಮಾಡುತ್ತಾ ಬಂದ ಹಬ್ಬಗಳೆಂದರೆ ದೀಪಾವಳಿ, ಮಹನವಮಿ, ನಾಗರಪಂಚಮಿ, ಯುಗಾದಿ, ಮೋಹರಂ, ಹೋಳಿ, ಗಣೇಶ ಚತುರ್ಥಿ ಮುಂತಾದವು.

**ಸಂಕ್ರಾಂತಿ** : ಸೂರ್ಯನ ಚಲನೆಯ ಹಬ್ಬ ಎಂದೇ ಕರೆಯಲಾಗಿದೆ ಈ ಸಂಕ್ರಾಂತಿ ಹಬ್ಬವನ್ನು ದೇಶದ ವಿವಿಧ ಪ್ರದೇಶಗಳಲ್ಲಿ ಆಚರಣೆ ಮಾಡಲಾಗಿದೆ. ಕಡಲಬಾಳು ಪ್ರದೇಶದಲ್ಲಿ ಈ ಹಬ್ಬವು ಕೆಲವು ವಿಶಿಷ್ಟತೆಯಿಂದ ಕೂಡಿದೆ. ಜಗತ್ತಿಗೇ ಕಣ್ಣಾದ ಇಂತಹ ಸೂರ್ಯನ ಚಲನೆಯ ಹಬ್ಬ ಸಂಕ್ರಮಣ. ಸೂರ್ಯನು ಒಂದು ರಾಶಿಯಲ್ಲಿ ತನ್ನ ಇರುವನ್ನು ಮುಗಿಸಿ ಇನ್ನೊಂದು ರಾಶಿಗೆ ಹೆಜ್ಜೆ ಇಡುವುದಾಗಿದೆ. ಸಂಕ್ರಮಣ ವರ್ಷಕ್ಕೆ ಹನ್ನೆರಡು ಸಂಸ್ಕಾರಗಳು. ಆದರೆ ಎರೆಡು ಮಾತ್ರ, ಸೂರ್ಯನು ಮಿಥುನ ರಾಶಿಯಿಂದ ಕರ್ಕಾಟಕ ರಾಶಿಯನ್ನು ಪ್ರದರ್ಶಿಸುವುದನ್ನು ನಾವು ಕರ್ಕಾಟಕ ಸಂಕ್ರಮಣ ಎಂದು ಕರೆಯುತ್ತೇವೆ. ಧನುರಾಶಿಯನ್ನು ಬಿಟ್ಟು ಮಕರರಾಶಿಯನ್ನು ಸಂಕ್ರಮಿಸಿಕೊಳ್ಳುವುದನ್ನು ನಾವು ಸಂಕ್ರಮಣ. ಇವು ಸೂರ್ಯ ಪ್ರಮಾಣಕ್ಕೆ ಸಂಬಂಧಿಸಿವೆ. ದಕ್ಷಿಣಾಯ ಉತ್ತರಾಯಣವನ್ನು ಸೂಚಿಸುವುದಾಗಿ ಎಳ್ಳು-ಬೆಲ್ಲದ ಹಬ್ಬವೂ ಎಂತಲೂ ಕರೆಯುತ್ತಾರೆ. ಮನೆಗಳ ಬಾಗಿಲಿಗೆ ಮತ್ತು ಬಾಗಿಲಿನ ಮುಂದೆ ಮೇಲಿನ ಸೇರಿಗೆ ತಾವು ರಾಶಿ, ಭತ್ತ, ಬೆಳೆದು ಎಲ್ಲ ದನ, ಕರು, ಎತ್ತು, ಎಮ್ಮೆ, ಆಡು, ಸಾಕು ಪ್ರಾಣಿಗಳಿಗೆ ಮೈ ತೊಳೆದು ಕೊಂಬುಗಳನ್ನು ಎರೆದು ನುಣುಪುಮಾಡಿ ಎಲ್ಲಾ ಸಾಕು ಪ್ರಾಣಿಗಳಿಗೆ ಹೊಟ್ಟೆ ಬಿರಿಯುವಂತೆ ಮೇಯಿಸುತ್ತಾರೆ. ಬಣ್ಣಗಳಿಂದ ಅಲಂಕಾರ ಮಾಡುತ್ತಾರೆ. ಈ ಊರಿನ ಹೆಚ್ಚಾಗಿನ ಸ್ವಲ್ಪ ದೂರದ ದಾರಿಯಲ್ಲಿ ಬೀದಿಯಲ್ಲಿ ದೀಪ ಮಾಲೆ ಇಡುತ್ತಾರೆ. ಆ ದೀಪಕ್ಕೆ ಹೂವಿನ ಹೊನೆ ನಂತರ ಊದಿನಕಡ್ಡಿ ಬಂದ ರಾಗಿತೆನೆ ಹಸುವಿನ ಬಾಲದ್ಕೆ ಕೂದಲನ್ನು ಜೋಡಿಸಿ ಮಾಡಿಸುತ್ತಾರೆ. ಎಲ್ಲರೂ ಊರಲ್ಲಿನ ಗುಡಿ ಹತ್ತಿರ ಬಂದು ಪಾತ್ರೆಯಲ್ಲಿ ಪೊಂಗಲು ಅನ್ನ ಮಾಡುತ್ತಾರೆ. ಅನ್ನವನ್ನು ಮಾಡಿ ತಮಟೆ ನಗಾರಿಗಳೊಂದಿಗೆ ಪೂಜೆಯನ್ನು ಮಾಡುತ್ತಾರೆ. ಅಂದಿನ ವಿಶೇಷವಾದ ಅಡುಗೆ ಹಸೀ ಅವರೇಬೇಳೆ ಸಾರು. ಇದು ಸುಗ್ಗಿಯ ಕಾಲದ ಸಂಕೇತ ಎನ್ನಲಾಗಿದೆ. ಎಳ್ಳು ಯಾವಾಗಲೂ ಪಾಪಗಳನ್ನು ಪರಿಹರಿಸುವುದು. ದೇಹದ ಬಲ ಪುಷ್ಟಿಗಳನ್ನು ಬೆಳೆಸುವುದು. ಆದ್ದರಿಂದ ಅದನ್ನು ಈ ಧಾನ್ಯ ದಾನ ಮಾಡುವ ಸಂದರ್ಭದಲ್ಲಿ ಜೊತೆಗೆ ಬೆಲ್ಲವನ್ನು ಸೇರಿಸಲಾಗುವುದು. ಎಳ್ಳು ಬೆಲ್ಲ ತಿಂದು ಒಳ್ಳೆಯ ಮಾತಾಡು ಎಂಬ ಗಾದೆಯು ಈ ಹಬ್ಬದ ಸಂದರ್ಭದಲ್ಲಿನ ಹಾರೈಕೆಯಾಗಿದೆ.

ಎಳ್ಳನ್ನು ಸೇವಿಸಿ ರೋಗಗಳನ್ನು ದೂರ ಮಾಡಬಹುದು. ಮನೆ-ಮನೆಗೆ ಕೊಂಡ್ಯೋದು ಇಷ್ಟ ಮಿತ್ರರಿಗೆ ವಿತರಿಸುವರು. ಎಳ್ಳು ಬೀರುವುದು. ಜೊತೆಗೆ ಸಂಕ್ರಾಂತಿ ಹಬ್ಬದ ಶುಭಾಶಯ ತಿಳಿಸುವುದು ಈ ಹಬ್ಬದ ವಿಶೇಷವಾಗಿದೆ. ಚಳಿಗಾಲದಲ್ಲಿ ಹಗಲು ಕಡಿಮೆ ರಾತ್ರಿ ಹೆಚ್ಚು ಶೀತವೂ ಹೆಚ್ಚಾಗಿರುತ್ತೆ. ಈ ಸಂತೋಷವನ್ನು ವ್ಯಕ್ತಗೊಳಿಸುವುದೇ ಈ ಹಬ್ಬದ ಸಂಭ್ರಮಗಳ ಅರ್ಥ. ಸುಗ್ಗಿಯ ಸೂಚಕವಾಗಿ ಪೊಂಗಲು ಮಾಡುವುದು, ದಾನ ಸಂಪತ್ತಿಗೆ ಕಾರಣ.

**ನಾಗರ ಪಂಚಮಿ :** ಭಾರತೀಯರು ಅದರಲ್ಲೂ ಹಿಂದುಗಳ ಪಾಲಿಗೆ ಹಬ್ಬಗಳು ಒಂದರ್ಥದಲ್ಲಿ ಧಾರ್ಮಿಕ ಉತ್ಸವಗಳೇ. ಧಾರ್ಮಿಕ ಭಾವನೆಗಳಿಗೆ ಇಲ್ಲಿ ಪ್ರಾಚೀನತೆ ಜೊತೆಗೆ ಸಾಮಾಜಿಕ ಸಂಸ್ಕೃತಿ ಇಲ್ಲಿದೆ. ಕೆಲವು ಋತುಗಳ ಸಂವತ್ಸರ ಚಕ್ರದ ಮಾರ್ಗದ ಬದಲಾವಣೆ ಸಂಬಂಧಿಸಿವೆ. ಮಕರ ಸಂಕ್ರಾಂತಿ ಉದಾಹರಣೆ: ಮಹಾಶಿವರಾತ್ರಿ ದುರ್ಗಾಷ್ಟಮಿಯಂತೆ ಹಬ್ಬಗಳು ದೇವಾನುದೇವತೆಗಳ ಪೂಜೆಗೆ ಮೀಸಲು. ಮಹಾ ಪುರುಷರ ಅವತಾರವನ್ನು ವ್ಯಾಸಪೂರ್ಣ ಬುದ್ಧ ಜಯಂತಿ, ಹಬ್ಬಗಳು ನಮ್ಮಲಿವೆ. ಇಂತಹ ಹಬ್ಬಗಳ ಸಾಲಿನಲ್ಲಿ ನಾಡಿಗೆ ಹಬ್ಬವಾದಂತಹ ನಾಗರ ಪಂಚಮಿ ನಾಗನ ಆರಾಧನೆಗೆಯೇ ಮೀಸಲಾದ ಹಬ್ಬ ಇದಾಗಿದೆ. ಹರಪ್ಪ ಸಂಸ್ಕೃತಿಯಲ್ಲಿ 'ನಾಗರ' ಆರಾಧನೆ ತುಂಬಾನೆ ಮಹತ್ವವನ್ನು ನೀಡಲಾಗಿದೆ. ಜೈನ, ಬುದ್ಧ, ಶೈವ, ಶೂದ್ರ ವೈಷ್ಣವ, ಗೌರಮ್ಮ, ಗಣಪ ಶಕ್ತಿ ಮುಂತಾದ ಮತಗಳಲ್ಲಿ ನಾಗನಿಗೆ ಪ್ರಾಧಾನ್ಯತೆಯಿದೆ. ಬೌದ್ಧಧರ್ಮ, ಜೈನಧರ್ಮವು ಹಾಗೇ ವಿಶ್ವನಾಥ ತಲೆಯ ಮೇಲ್ಭಾಗದಲ್ಲಿ 'ನಾಗರ ಹೆಡೆ' ಎಂದು ಹೇಳಬಹುದಾಗಿದೆ.

ನಾಗನು ವಿಷ್ಣುವಿಗೆ ಹಾಸಿಗೆ. ಶಿವನಿಗೆ ಕಂಠಹಾರವಾಗಿ, ಗಣಪತಿಗೆ ಹೊಟ್ಟೆಯ ಪಟ್ಟಿ. ಈ ಹಬ್ಬದಂದು ಹೇಗೆ ಹೆಣ್ಣು ಮಕ್ಕಳು ತವರಿಗೆ ಹೋಗುವುದು ಅಂದಿನಿಂದ ಪ್ರಾರಂಭವಾಗುತ್ತದೆ. ತನ್ನ ಅಣ್ಣನ ಸಾವಿನಿಂದ ನೊಂದ ತಂಗಿ ಅಲ್ಲೇ ನಾಗಪ್ಪನನ್ನು ಬೇಡಿ ಅಣ್ಣನ ಜೀವವನ್ನು ಮರಳಿ ಎಂದು ಪೂಜೆಸುತ್ತಾರೆ. ಆದ್ದರಿಂದ ಈ ನಾಗಚೌತಿ ಎಂತಲೂ ಸಹ ನಾವು ಕರೆಯ ಬಹುದಾಗಿದೆ. ಈ ಹಬ್ಬಕ್ಕೆ ಒಂದು ವಾರ ಮುಂಚಿತವಾಗಿಯೇ ಅಣ್ಣ-ತಮ್ಮಂದಿರು ಹೋಗಿ ತಮ್ಮ ಅಕ್ಕ-ತಂಗಿಯರನ್ನು ತವರಿಗೆ ಕರೆಯುತ್ತಾರೆ.

ಅವರಿಗೆ ಹೊಸ ಹೊಸ ಬಟ್ಟೆಯನ್ನು ಕೊಡಿಸುತ್ತಾರೆ. ಕೈ ತುಂಬಾ ಬಳೆ ತೊಡಿಸಿ ಅರಿಶಿನ, ಕುಂಕುಮ ಹೂವು ಮುಡಿಸುತ್ತಾರೆ. ಈ ಹಾಡನ್ನು ಹೆಣ್ಣು ಮಗಳು ಗೌರಿ ಹಬ್ಬಕ್ಕೆ ತವರಿಗೆ ಹೋಗಲು ಕಾಯುತ್ತಿರುವುದನ್ನು ಅಣ್ಣನ ದಾರಿಯನ್ನೇ ಎದುರು ನೋಡುತ್ತಿರುವ ತಂಗಿಯ ಹಾಡು ಇದಾಗಿದೆ.

"ಪಂಚಮಿ ಹಬ್ಬ ಉಳಿದಾವ ದಿನ ನಾಕ

ಅಣ್ಣ ಬರಲಿಲ್ಲ ಯಾಕೇ ಕರಿಯಾಕ"

ಬಾಳೆದೆಲೆಯ ಮೇಲಿನ ಊಟ ಈ ಎಲ್ಲವೂ ಸಿರಿ ಸುಖ-ಸಂತೋಷದಿಂದ ನೋವುಗಳನ್ನು ಮರೆತು ನಗೆಯ ಹಾಲು ಹೊಳೆಯನ್ನು ಅವರ ತವರು ಮನೆಯಲ್ಲಿ ಹರಿಸುತ್ತಾರೆ.

**ದೀಪಾವಳಿ** : ದೀಪಾವಳಿ ಹಬ್ಬದ ದಿನಗಳಲ್ಲಿ ಎಲ್ಲೆಲ್ಲಿ ನೋಡಿದರೂ ದೀಪಗಳ ಸಾಲು ಕಾಣುತ್ತವೆ. ಏಕೆಂದರೆ ಕತ್ತಲೆಯಾ ಬೆಳಕಿಗೆ ಯುಗ-ಯುಗಗಳ ಸಂಘರ್ಷ ನಂತರದಲ್ಲಿ ಹೋರಾಟ ನಡೆದೇ ಹೊತ್ತು ಕತ್ತಲಾದರೂ ಜಗಳವಾಡಿ ಬೆಳಗು ಗೆಲ್ಲುವುದರ ಸಂಕೇತವಾಗಿದೆ ಎನ್ನಲಾಗಿದೆ. ಮಳೆಗಾಲ ರೈತರೇ ದುಡಿದು ಧಣಿವಾರಿಸಿಕೊಳ್ಳುವಂತಹ ಸಮಯವಾಗಿದೆ. ಮನೆಯಲ್ಲಿ ಕೂಡ ಮನೆ-ಮನೆಯ ಮನಸ್ಸುಗಳ ಕತ್ತಲೆಯನ್ನು ಹೋಗಲಾಡಿಸುವ ಈ ಹಬ್ಬದಲ್ಲಿ ಕುಟುಂಬದಲ್ಲಿ ಇರುವ ಚಿಕ್ಕವರು-ದೊಡ್ಡವರು ಸೇರಿ ಹೊಸ ಬಟ್ಟೆ ಧರಿಸಿ ಸಿಹಿ-ತಿನಿಸುಗಳನ್ನು ತಯಾರಿಸಿ ಬಾರಿ ಭೋಜನವನ್ನು ಮಾಡುತ್ತಾರೆ. ದೀಪಾವಳಿಯಲ್ಲಿ ನರಕಚತುರ್ಥಿ ಬಲಿಪಾಡ್ಯವನ್ನು ವಿಶೇಷವಾಗಿ ಆಚರಣೆಯನ್ನು ಮಾಡುತ್ತಾರೆ.

ಈ ದಿನ ಯಾರು ದೀಪ ಬೆಳಗುತ್ತಾರೆ ಅವರ ಮನೆಯಲ್ಲಿ ಸಹಧರ್ಮ ಸ್ಥಿರವಾಗಿ ನೆಲೆಸಲಿ ಹಾಗೇ ನನ್ನ ಮನೆಯ ಬಾಗಿಲು ಸದಾ ನಿನ್ನ ಸಾನಿಧ್ಯದಲ್ಲಿ ಎಂದು ಬೇಡಿಕೊಂಡ ಮಹಾವಿಷ್ಣುವನ್ನು ಎಂದು. ಜಾನಪದರು ಸದಾಲಕ್ಷ್ಮಿ ಸಾನಿಧ್ಯವಿರುವಂತೆ ಕೇಳಿಕೊಂಡು ಪ್ರಾಜಾಹಿತ ಬಯಸಿದ ಮಹಾ ವ್ಯಕ್ತಿತ್ವ ಬಲಿಯಾದ ಬಲಚಕ್ರವರ್ತಿ ಕೊಂಡು ಅದರಲ್ಲಿ ಕಲ್ಪನೆಯನ್ನು ತಯಾರಿಸಿದ ದಿನವೇ ಬಲಿಪಾಡ್ಯ. ರೈತರು ದೀಪಾವಳಿಯ ಲಕ್ಷ್ಮಿಯನ್ನು ಧಾನ್ಯ ಲಕ್ಷ್ಮಿಯನ್ನು ದೀಪ ಹಾಕಿ ಪೂಜೆ ಮನಸ್ಕಾರವನ್ನು ಮಾಡುತ್ತಾರೆ. ಹಬ್ಬದ ದಿನ ಎಲ್ಲರ ಮನೆಯಲ್ಲಿ ಸಂತಸ ಸಂಭ್ರಮದಿಂದಲೇ ಪಟಾಕಿ ಸಿಡಿಸಿ ಸಿಹಿ ತಿಂಡಿ ತಂದು ಸಂತೋಷ ಪಡುತ್ತಾರೆ. ದೀಪಾವಳಿಯೆಂದರೆ ಅಲ್ಲಿನ ಜನರಲ್ಲಿ ಹುಡುಕಾಟ ಮಕ್ಕಳಲ್ಲಿ ಪಟಾಕಿ ಹಬ್ಬ ಎಂದೇ ಇಲ್ಲಿನ ಯುವಕ-ಯುವತಿಯರು ಅಭಿಪ್ರಾಯವಾಗಿದೆ.

**ಯುಗಾದಿ:** ಇಲ್ಲಿನ ಜನರಿಗೆ ಬಲು ಪ್ರಿಯವಾದ ಹಬ್ಬವಾಗಿದೆ. ಸುದೀರ್ಘವಾದ ಅಂಧಕಾರ ಶೀತಕಾಲ ಕಳೆದು ಸಂತೋಷ ಪ್ರಧಾನ ಎಲ್ಲೆಲ್ಲೂ ವಸಂತ ಋತುವಿನ ಚಿಗರಿನಿಂದ ಮರಗಿಡಗಳ ಹೊಸತನ ಬೀರುವ ಕಾಲವೇ ಯುಗಾದಿ ಹಬ್ಬದ ಸಂಕೇತ ಎಂದು ಸೂಚಿಸುತ್ತದೆ.

ಭೂ ತಾಯಿಯನ್ನು ಉತ್ತಿರುವ ಹಬ್ಬವಾಗಿದೆ. ಋತುಗಳ ರಾಜ ವಸಂತನಿಗೆ ಸ್ವಾಗತವನ್ನು ಹೇಳುವ ಸುದಿನವಾಗಿದೆ. ನಮಗೆ ನೆನೆಪಾಗುವುದು ಬೇವು ಬೆಲ್ಲ. ಬೇವು ಬದುಕು ಪ್ರತಿಬಿಂಬಗಳಿವೆ.

ಬೇವಿನ ಚಿಗುರಿನ ಕಹಿ ಬೆಲ್ಲದ ಸಿಹಿ ಇವೆರಡು ಬದುಕಿನ ಪ್ರತಿಬಿಂಬವಾಗಿವೆ. ಹಿಂದೆ ನಡೆದ ದುಃಖದ ಘಟನೆಗಳನ್ನು ಅರಗಿಸಿಕೊಂಡು ಇಂದಿನ ಸುಖದ ಸವಿಯನ್ನು ಸವಿಯಲು ಯೋಗಬೇಕು. ಸಿಹಿ ಕಹಿಗಳನ್ನು ಮುಕ್ತಿ ಪ್ರಮಾಣದಲ್ಲಿ ಉಚಿತ ಕಾಲದಲ್ಲಿ ಸೇವಿಸಬೇಕು. ಆದ್ದರಿಂದ ಬೇವು ಬೆಲ್ಲ ಎರಡನ್ನು ಜೊತೆಗೆ ಸೇರಿಸುತ್ತಾರೆ. ಯುಗಾದಿ ಹಬ್ಬವನ್ನು ಇಲ್ಲಿ ಎರಡು ದಿನಗಳ ಕಾಲ ಆಚರಿಸುತ್ತಾರೆ. ಮೊದಲನೆಯ ದಿನ ಸಿಹಿ ಊಟ ಮತ್ತು ಎರಡನೆಯ ದಿನ ಮಾಂಸದ ಊಟ. ಜೊತೆಗೆ ಚಂದ್ರನ ನೋಡುವುದು ಯುಗಾದಿಯ ಮೊದಲನೆಯ ದಿನ ಮುಂಜಾನೆ ಶಿವ ಶಿವ ಅಂತ ಸ್ಮರಿಸುತ್ತಾ ಅಭ್ಯಯನ ಮಾಡಿ ಎಲ್ಲ ಹೊಸ ಬಟ್ಟೆಯನ್ನು ಧರಿಸುತ್ತಾರೆ. ಸ್ತ್ರೀಯರೆಲ್ಲರು ಮನೆಯಲ್ಲಿ ಅಡುಗೆ ಕೆಲಸದಲ್ಲಿ ಭಾಗಿಯಾದರೆ ಪುರುಷರು ಮನೆಯ ಬಾಗಿಲುಗಳಿಗೆ ಹಸಿರು ತೋರಣವನ್ನು ಕಟ್ಟುತ್ತಾರೆ. ಮಾವಿನ ಸೊಪ್ಪು ಎಲೆಗಳು ಬಿಡಿಸಿ ಪ್ರತಿ ಬಾಗಿಲುಗಳಿಗೆ ಕಟ್ಟುತ್ತಾರೆ. ಬಾಗಿಲು ಎರಡೂ ಕಡೆಗೆ ಬೇವಿನ ಸೊಪ್ಪು ಜೊತೆಗೆ ವಿಶೇಷವಾಗಿ ಹೂವನ್ನು ತರುವುದು ಈ ಹಬ್ಬದ ವಿಶಿಷ್ಟವಾಗಿದೆ. ಅರಿಶಿನ ಬಣ್ಣದ ಮರದ ತುಂಬೆಲ್ಲಾ ನೇತುಹಾಕಿರುವುದನ್ನು ಕಾಣುತ್ತವೆ. ಇಡೀ ಮರವೇ ಅರಿಶಿನ ಬಣ್ಣದಿಂದ ಕೂಡಿದೆ. ದೂರದಿಂದಲೇ ಎಲ್ಲರೂ ತನ್ನತ್ತ ಆಕ್ಷೇಪಿಸುತ್ತಾರೆ.

ಈ ಹೂವನ್ನು ತಂದು ಬಾಗಿಲ ತೋರಣಕ್ಕೆ ಇಕ್ಕಲು ಬಳಸುತ್ತಾರೆ. ಎಲ್ಲಾ ತರಹದ ಅಡುಗೆ ಮಾಡಿ ಎಡೆ ಇಕ್ಕಿ ಸುತ್ತಲೂ ಹಿರಿಯರಿಗೆ ಸೇರಿದ ಕುಡಿಯುವ ಅಭ್ಯಾಸ ಇದ್ದರೆ ಅದನ್ನು ಎಡೆಗೆ ಇಟ್ಟು ಪೂಜೆಯನ್ನು ಮಾಡುತ್ತಾರೆ. ಸುತ್ತಿರುವಂತಹ ಹಿರಿಯರು ವರ್ಷಕ್ಕೊಮ್ಮೆ ಬಂದು ತಮ್ಮ ಇಷ್ಟಾರ್ಥಗಳನ್ನು ಪೂರೈಸುತ್ತಾಲೆ. ಇಲ್ಲಿನ ಜನ ನಂಬಿಕೆ ಸಂಜೆ ಚಂದ್ರನನ್ನು ನೋಡಿದ ನಂತರ ತಮ್ಮ-ತಮ್ಮ ಹೊಲಗಳಲ್ಲಿ ರಾಗಿ ಒಕ್ಕಲು ಮಾಡಿ ಊಟ ಮಾಡಿದ ಮೇಲೆ ಪ್ರತಿಯೊಂದು ಮನೆಗಳ ಮೇಲೆ ವೈಜ್ಞಾನಿಕ ದೃಷ್ಟಿಯಲ್ಲಿಯೇ ಆಯರ್ವೇದದ ಪ್ರಕಾರ ಲಕ್ಷಾಂತರ ಕಾಲದಲ್ಲಿ ಶಾರೀರಕ ರೋಗ ರುಜಿನಿಗಳು ದೂರವಾಗುತ್ತವೆ. ಬೇವು ಬೆಲ್ಲ ತಿನ್ನುವುದು ವೈಜ್ಞಾನಿಕ ಕೃಷಿಯೇ ಬಹುಮುಖ್ಯ. ಬೇವಿನ ಚಿಗುರುಗಳು ಹಳೆಯ ಕೊಣಿಕಳೆದು ಹೊಸತನದ ಕ್ಷಣಗಳು ಮೂಡುವಾಗ ಅದು ಬಂದು ಯುಗಾದಿ. ಹಾಗಾಗಿಯೇ ಹೊಸ ವರ್ಷದ ಹೊಸ ಹುರುಪಿನ ಸಂಕೇತವಾಗಿದೆ. ಪಂಚಾಂಗದ ಹೊಸ ಪುಟವನ್ನು ತೆರೆಯುವಂತೆ ನಮ್ಮ ಬಾಳಿನಲ್ಲಿಯೇ ಹೊಸ ಪುಟ ತೆರೆದಿದೆ.

**ಗಣೇಶ ಚತುರ್ಥಿ** : ಭಾದ್ರಪದ ಶುಕ್ಲದ ಚೌತಿಯಂದು ಶುದ್ಧ ಚತುರ್ಥಿ. ಗಣಪತಿಯ ಹಬ್ಬದ ದಿನ. ಅಂದು ಈ ದೇವರಿಗೆ ವಿಶೇಷವಾದ ವಾರ್ಷಿಕ ಪೂಜೆ ಇಡೀ ದೇಶ್ಯಾದಂತ ನಡೆಯುತ್ತದೆ. ಕಡಲಬಾಳು ಗ್ರಾಮ ಕೂಡ ಇದರಿಂದ ಹೊರತಾಗಿಲ್ಲ. ಈ ಹಿರಿಯರು ಕಿರಿಯರು ಎಲ್ಲರೂ

ಬಣ್ಣವನ್ನು ಬಡಿದುಕೊಂಡು ಈ ಬಣ್ಣ-ಬಣ್ಣದ ಗಣೇಶ ಮೂರ್ತಿಯನ್ನು ಪ್ರತಿಷ್ಠಾಪಾನೆ ಮಾಡುವುದನ್ನು ಕಾಣಬಹುದಾಗಿದೆ. ಮೂರ್ತಿಯನ್ನಿಟ್ಟು ಪೂಜಿಸುತ್ತಾರೆ. ಭಾರತದಲ್ಲಿ ಎಲ್ಲಾ ಹಿಂದುಗಳೂ ಗಣಪನನ್ನು ಪೂಜಿಸುತ್ತಾರೆ.

ಗಣೇಶ ಚತುರ್ಥಿ ಭಾದ್ರಪದ ಮಾಸದ ಅಂದರೆ ಆಗಸ್ಟ್ ಸೆಪ್ಟೆಂಬರ್ ತಿಂಗಳು ಬರುತ್ತದೆ. ಈ ವೇಳೆಗೆ ಮಳೆಗಾಲ ಮಲಗಿರುತ್ತದೆ. ಆ ಪೈರು ಪಚ್ಚೆ ಸಮೃದ್ಧಿಯಾಗಿ ಬೆಳೆಯಲ್ಲಿ ಎಂಬ ಹರಕೆಯೊಂದಿಗೆ ಗಣಪತಿಗೆ ಪೂಜೆಯನ್ನು ಮಾಡುತ್ತಾರೆ. ಶ್ರಾವಣ ಕಳೆದ ನಂತರ ಬರುವಂತಹ ಬಾದ್ರಪದ ಮಾಸದಲ್ಲಿ ಚತುರ್ಥಿಯ ದಿನವೇ ಗಣೇಶನನ್ನು ಪೂಜಿಸುತ್ತಾ ಕರ್ನಾಟಕದಲ್ಲಿ ಸಾಮೂಹಿಕವಾಗಿ ಇಡೀ ಊರಿಗೆ ಒಂದೇ ಜಾಗದಲ್ಲಿ ದೊಡ್ಡ ಗಣಪತಿಯನ್ನು ಕೂರಿಸುತ್ತಾರೆ. ಗಣಪತಿ ಇಲಿಯ ಮೇಲೆ ಕುಳಿತುಕೊಂಡು ಹೋಗುತ್ತಿದ್ದ ಗಣಪತಿ ಆಯತಪ್ಪಿ ಕೆಳಗೆ ಬಿದ್ದು ಅದನ್ನು ನೋಡಿ ಚಂದ್ರ ಜೋರಾಗಿ ನಕ್ಕುಬಿಟ್ಟ. ಗಣಪನಿಗೆ ಹೊಟ್ಟೆ ಒಡೆದು ಹೋಗಿತ್ತು. ಆಗ ಪಕ್ಕದಲ್ಲಿ ಹರಿಯುತ್ತಿದ್ದವನ್ನು ಹೊಟ್ಟೆಗೆ ಕಟ್ಟಿ ಕೊಂಡನು. ತುಂಬಾ ಕೋಪಗೊಂಡ ಗಣಪತಿ ಚಂದ್ರನಿಗೆ ಶಾಪಕೊಡುತ್ತಾನೆ. ಹಾಗಾಗಿ ಗಣಪತಿಯನ್ನು ನೋಡಿದ ಮೇಲೆ ಚಂದ್ರನನ್ನು ನೋಡಬೇಕು. ಇಲ್ಲದಿದ್ದರೆ ಆರು ತಿಂಗಳ ಕಾಲ ಕೇಡು ಎಂಬ ನಂಬಿಕೆ ಇದೆ.

**ಪಿತೃಪಕ್ಷ:** ಕರ್ನಾಟಕದಾದ್ಯಂತ ಆಚರಿಸುತ್ತಾರೆ. ಹಿರಿಯರ ಹಬ್ಬ. ಈ ಭಾಗದ ಜನರು ಸಾಮಾನ್ಯವಾಗಿ ಪಕ್ಷ ಎಂದೇ ಎಲ್ಲರೂ ಕರೆಯುವ ರೂಢಿಯಾಗಿದೆ. ಇದನ್ನು ಕಡಲಬಾಳು ಗ್ರಾಮದಲ್ಲಿ ವಿಜೃಂಭಣೆಯಿಂದಲೇ ಆಚರಿಸುತ್ತಾರೆ. ತಮ್ಮ ಮನೆಯಲ್ಲಿ ಸತ್ತಿರುವಂತಹ ಹಿರಿಯರು ವ್ಯಕ್ತಿಗಳ ನೆನಪಿಗಾಗಿ ಅವರಿಗಾಗಿ ಮೀಸಲಾದ ದಿನವಾಗಿದೆ.

ಈ ಹಬ್ಬ ಮಹಾಲಯ ಅಮವಾಸ್ಯೆ ಹಿಂದೆ ಮುಂದಿನ ಶುಕ್ರವಾರ ಮತ್ತು ಮಂಗಳವಾರ ನಡೆಯುತ್ತದೆ. ಕೆಲವೆಡೆ ಆಯುಧದ ಮೂಜೆ ದಿನವೂ ಮಾಡುತ್ತಾರೆ. ಸಾಮಾನ್ಯವಾಗಿ ಸೆಪ್ಟೆಂಬರ್ ಅಕ್ಟೋಬರ್ ತಿಂಗಳಲ್ಲಿ ಇದಾಗಿದೆ. ಮನೆಯ ಹಿರಿಯರಾಗಿರುವ ತಂದೆ-ತಾಯಿ ತಾತಾ ಅಜ್ಜರಿಗೆ ಗೌರವಸಲ್ಲಿಸುವದೇ ಈ ಹಬ್ಬದ ರಾತ್ರಿಯಲ್ಲಿ ಜರುಗುತ್ತದೆ. ಎಲ್ಲಾ ಬಂಧು ಬಾಂಧವರು ನೆಂಟರಿಷ್ಟರು ಕೂಡಿ ಭರ್ಜರಿ ಭೋಜನವನ್ನು ಮಾಡುತ್ತಾರೆ. ದೇವರು ಎಡೆಯ ಪ್ರಸಾದವನ್ನು ಕೊಟ್ಟು ಕಳುಹಿಸುತ್ತಾರೆ. ತಾವು ಮಾಡಿದ ಎಲ್ಲ ತಿಂಡಿಗಳನ್ನು ಸ್ವಲ್ಪ ಹಾಕಿ ಪ್ರತಿಯೊಬ್ಬ ಬಂಧುಗಳಿಗೆ ಕೊಡಲಾಗುತ್ತೆ. ವ್ಯಕ್ತಿಯನ್ನು ಬದುಕಿದ್ದಾಗ ಹಿರಿಯರನ್ನು ಕಡೆಗಣಿಸುವ ಪದ್ಧತಿಯು ಈಗಲೂ ಸಹ ಕಾಣಬಹುದಾಗಿದೆ.

## ೬.೩. ನಂಬಿಕೆ, ವಿಧಿ ನಿಷೇಧಗಳು

ಜನಪದರ ಜೀವನದ ವಿವಿಧ ಹಂತಗಳಲ್ಲಿ ಬಳಕೆಯಾಗುತ್ತ ಸಾಗುವ ನಂಬಿಕೆಗಳು ಬದುಕಿನ ಬಹುದೊಡ್ಡ ಆಧಾರ ಸ್ತಂಭಗಳು. ಸಂಶಯ, ಸಂದೇಶಗಳನ್ನು ದೂರಸರಿಸಿ ಸಾರ್ಥಕತೆ ಯಂತೆ ಜೀವನದ ಸವಿಯನ್ನು ಸವಿಯಲು ನಂಬಿಕೆಗಳೇ ಆಧಾರವಾಗಿವೆ. ಭೂತ, ವರ್ತಮಾನ ಭವಿಷ್ಯದ ಸಂಗತಿಗಳನ್ನು ಸೃಷ್ಟಿಸಿಕೊಳ್ಳುತ್ತವೆ. ದೈನಂದಿನ ಆಲೋಚನೆ, ರೂಢಿ, ಸಂಪ್ರದಾಯ, ಆಚಾರ ವಿಚಾರ ಪ್ರತಿಯೊಂದು ಕೆಲಸಕಾರ್ಯದ ಕ್ರಮಗಳನ್ನು ಗಮನಿಸಿದರೆ ನಂಬಿಕೆಗಳ ಒಂದು ರೀತಿಯಲ್ಲಿ ದೈನಂದಿನ ಬದುಕಿನ ಸಂಖ್ಯೆಗಳನ್ನು ನಿವಾರಿಸಲು ಬಳಸುವ ವಿಧಾನ ಎನ್ನಲಾಗಿದೆ. ನಂಬಿಕೆಯು ಜನಪದರ ಜೀವನಾಧಾರ. ಹೀಗಾಗಿ ಮಾನವರ ಬದುಕಿಗೂ ಹಾಗೂ ನಂಬಿಕೆಗೂ ಬಿಡಿಸಲಾಗದ ಸಂಬಂಧವಿದೆ.

ನಂಬಿಕೆಗಳು ಜನತೆಯ ಜೀವನವನ್ನು ನೇರವಾಗಿ ಬಿಂಬಿಸುತ್ತವೆ. ನಂಬಿಕೆ ವ್ಯಕ್ತಿಯೊಂದಿಗೆ ಸಾಕ್ಷೇಪ ಸಂಬಂಧವನ್ನು ಹೊಂದಿದೆ. ಶಾಸ್ತ್ರ ಪಂಚಾಂಗವನ್ನು ಇಲ್ಲಿನ ಜನರು ನಂಬುತ್ತಾರೆ. ತಮ್ಮ-ತಮ್ಮ ಮನೆಯಲ್ಲಿ ಏನೇ ಕಾರ್ಯಗಳು ನಡೆದರೂ, ಶಾಸ್ತ್ರ ಪಂಚಾಂಗದ ಆಧಾರದ ಮೂಲಕವೇ ಜರುಗುತ್ತಿವೆ. ಶಾಸ್ತ್ರ ಪಂಚಾಂಗ ಭವಿಷ್ಯ ಹೇಳುವುದನ್ನು ಕೇಳುವುದಲ್ಲಿ ನಂಬಿಕೆ ಇಟ್ಟಿದ್ದಾರೆ. ಈ ಶಾಸ್ತ್ರದ ಪ್ರಕಾರವೇ ಪೂಜೆ, ನಾಮಕರಣ ದೇವತಾ ಕಾರ್ಯಗಳನ್ನು ಮಾಡುತ್ತಾರೆ. ಮನೆ ದೇವರ ಗದ್ದಿಗೆ ಮೇಲೆ, ಕಡಲಬಾಳು ಬೆಟ್ಟದ ಮೇಲೆ, ಹೀಗೆ ಮನೆಯಲ್ಲಿ ಶುಭ ಮತ್ತು ಅಶುಭದ ಬಗ್ಗೆ ನಿರ್ಧರಿಸಿ ಕೊಂಡಿರುತ್ತಾರೆ. ಒಲೆ ಜೋರಾಗಿ ಕೂಗಿದರೆ, ಕರೆದರೆ ನೆಂಟರು ಬರುತ್ತಾರೆ.

ನಂಬಿಕೆಗಳು ಕಡಲಬಾಳು ಗ್ರಾಮದ ಜನರ ಬದುಕಿನೊಂದಿಗೆ ಸಂಬಂಧವನ್ನು ಹೊಂದಿವೆ. ಕಡಲಬಾಳು ಪರಿಸರದ ಜನರ ಬದುಕಿನ ಲೌಕಿಕ ಕ್ರಿಯೆಗಳನ್ನು ಗಟ್ಟಿಗೊಳಿಸಲು ನಂಬಿಕೆಗಳು ಧಾರ್ಮಿಕ ಚೌಕಟ್ಟು ಒದಗಿಸಿವೆ. ಮದುವೆಯ ಸೌದೆ ತರಲು ಎಲ್ಲರೂ ಕಾಡಿಗೆ ಹೋದಾಗ ಜಗಳಗಂಟಿ ಮರ ಕಡಿದರೆ ಮನೆಯಲ್ಲಿ ಜಗಳವಾಗುತ್ತೆ. ಮದುವೆಯ ಅಕ್ಕಿ ತಿಂದರೆ ಮದುವೆಯಲ್ಲಿ ಮಳೆ ಬರುತ್ತದೆ. ಸಂಜೆಯ ಹೊತ್ತಿನಲ್ಲಿ ಕಸಗೂಡಿಸಿ ಹೊರಹಾಕಿದರೆ ಲಕ್ಷ್ಮಿ ಹೊರಗೆ ಹೊಗುತ್ತಾಳೆ. ಊಟ ಮಾಡಿದಾಗ ತಟ್ಟೆ ಇಟ್ಟು ಕೊಂಡರೆ ಮಾಂಸ ತಿನ್ನುವ ಬಯಕೆ. ಬಾಗಿಲಿನ ಮೇಲೆ ನಿಂತು ಕೊಂಡರೆ ಸಾಲಜಾಸ್ತಿ, ಊಟ ಮಾಡುವಾಗ ನೆತ್ತಿಗೆ ಏರಿದರೆ ಯಾರೋ ಬೈತಾರೆ. ಊಟ ಮಾಡುವಾಗ ಸೀನು ಬಂದರೆ ಕೈತೊಳೆದರೆ ಆಕಳಿಸಿದರೆ ಯಾರೋ ನೆನಪಿಸಿಕೊಳ್ಳುತ್ತಾರೆ.

* ಗಂಡನಿಗೆ ತಲೆಯಲ್ಲಿ ೨ ಸುಳಿ ಇದ್ದರೆ ಇಬ್ಬರು ಹೆಂಡ್ತಿರು
* ಮನೆಯಲ್ಲಿ ಸಿಳ್ಳೆ ಹೊಡೆದರೆ ತಗಣಿ ಹೆಚ್ಚಾಗುತ್ತವೆ.
* ಹೊಸಮನೆಗೆ ಹೋಗುವಾಗ ಹಾಲುಕ್ಕಿಸಿ ಹೋಗಬೇಕು.
* ಅಂಗಾಲು ಅಂಗೈ ಕಡಿದರೆ ಜಗಳವಾಗುತ್ತವೆ.

**ಕಾಲ್ಗುಣ :** ಹೆಣ್ಣಿಗೆ ಹೋಲಿಸಲಾಗಿದೆ. ಮದುವೆಯಾಗಿ ಹೊಸದಾಗಿ ಗಂಡನ ಮನೆಗೆ ಬಂದಾಗ ಶುಭಕಾರ್ಯ ನಡೆದರೆ ಸೊಸೆಯ ಕಾಲ್ಗುಣ ಚೆನ್ನಾಗಿದೆ, ಮನೆಯಲ್ಲಿ ಮೈದುನನಿಗೆ ನೌಕರಿ ಸಿಕ್ಕರೆ, ನಾದಿನಿಗೆ ಮದುವೆಯಾದರೆ, ಅತ್ತೆ-ಮಾವರಿಗೆ ಆರೊಗ್ಯ ಸರಿ ಹೋದರೆ, ಕೃಷಿಯ ಬೆಳೆ ಲಾಭದಾಯಕವಾದರೆ, ಇದೆಲ್ಲ ಬರುವಂತಹ ಸೊಸೆಯ ಕಾಲ್ಗುಣ ಎನ್ನುವರು. ತೊಂದರೆ ಆದರೆ ದುರಾದೃಷ್ಟದ ಕಾಲು ಇವರು ಸರಿ ಇಲ್ಲ ಎಂದು ಸೊಸೆಯನ್ನು ಚಿತ್ರಹಿಂಸೆ ಮಾಡುತ್ತಾರೆ.

**ವಿಧವೆಯರಿಗೆ ನಿಷೇಧ:** ಗಂಡ ಸತ್ತ ಮೇಲೆ ಹೆಂಡ್ತಿ ವಿಧವೆಯಾಗುತ್ತಾಳೆ. ಯಾವುದೇ ಶುಭಕಾರ್ಯಗಳಲ್ಲಿ ಮುತ್ತೈದೆಯರು ಎದುರು ಪೂಜೆಯನ್ನು ಮಾಡುವುದು, ಮದುವೆ ಗಂಡಿಗೆ ನೀರು ಹಾಕುವಾಗ, ಹೆಣ್ಣಿಗೆ ಸೋಬಾನಿ ಪದ ಹಾಡುವಾಗ, ಮದುವೆಯ ಯಾವುದೇ ಶುಭಕಾರ್ಯಗಳು ನಡೆಯುವಾಗ ವಿಧವೆಯರಿಗೆ ಪ್ರವೇಶ ಅವಕಾಶವನ್ನು ನೀಡುವುದಿಲ್ಲ.

**ಬೆಕ್ಕು :** ಬೆಕ್ಕು ಸಾಮಾನ್ಯವಾಗಿ ಅಶುಭದ ಸಂಕೇತವಾಗಿದೆ. ಎಲ್ಲಿಗಾದರೂ ಹೊರಟಾಗ ಬೆಕ್ಕು ಅಡ್ಡ ಬಂದರೆ, ಹೋದ ಕೆಲಸ ಸಹ ಆಗಲ್ಲ. ಬೆಳಿಗ್ಗೆ ಎದ್ದ ತಕ್ಷಣ ಬೆಕ್ಕಿನ ಮುಖ ನೋಡಬಾರದು. ಮತ್ತೆ ಸ್ವಲ್ಪ ಎಳಬೇಕು. ಬೆಕ್ಕು ವಿಚಿತ್ರವಾಗಿ ಕೂಗಿದರೆ ಅಳುವಂತಹ ಧ್ವನಿ ಶಬ್ದಮಾಡಿದರೆ ಅಪಶಕುನದ ಸಂಕೇತವಾಗುತ್ತದೆ.

**ಹಲ್ಲಿ ಶಕುನ :** ಇಲ್ಲಿನ ಜನರು ಹಲ್ಲಿ ಲೊಚಗುಟ್ಟಿದರೆ ಒಳ್ಳೆಯದು ಯಾವುದಾದರು ಒಳ್ಳೆಯ ವಿಷಯ ಮಾತನಾಡುವಾಗ ಹಲ್ಲಿ ಲೊಚಗುಟ್ಟಿದರೆ ಒಳ್ಳೆಯದು ಕೆಟ್ಟ ಸುದ್ಧಿ ಮಾತನಾಡುತ್ತಿದ್ದಾಗ ಲೊಚಗುಟ್ಟಿದರೆ ಕೆಟ್ಟದು ಎಂಬ ನಂಬಿಕೆ. ಯಾವ ಯಾವ ದಿಕ್ಕಿನಲ್ಲಿ ಲೊಚಗುಟ್ಟಿದರೆ ಒಳ್ಳೆಯದು. ಅವರ ದೇವರ ಮೇಲೆ ಹಲ್ಲಿ ನುಡಿದರೆ ಅದು ಬಳ್ಳೆಯದಾಗುತ್ತೆ.

**ವಿಧಿ-ನಿಷೇಧ:** ಭಯ ಮತ್ತು ನಂಬಿಕೆಗಳು ಕಟ್ಟು ನಿಟ್ಟಾಗಿ ಜಾರಿಗೊಳಿಸಿದ, ಬಲವಂತ ಗೊಳಿಸುವಂತಹವುಗಳನ್ನು ನಿಷೇಧ. ಇದನ್ನು ಮಾಡಬಾರದು. ಇದು ಕೆಡುಕು ಎನ್ನಲಾಗಿದೆ. ಸಾಮಾಜಿಕ ಧಾರ್ಮಿಕ ಪ್ರತಿ ಬಿಂಬವಾಗಿದೆ. ಹಾಗಾಗಿ ಲಿಖಿತ ಕಾನೂನು ವಿವರಿಸುವಂತಹ ಶಕ್ತಿಯನ್ನು ನಿಬಂಧನೆಗಾಗಿ ನಿಷೇದ ಕಾರ್ಯ ನಿರ್ವಹಿಸುತ್ತವೆ. ಕಡಲಬಾಳು ಗ್ರಾಮದಲ್ಲಿ ಪರಿಸರದಲ್ಲಿ ವಿಧಿ-ನಿಷೇಧಿಗಳು ಇವೆ.

**ನಿಷೇಧಗಳ ಸಕರಾತ್ಮಕ ಕ್ರಮಗಳು:** ಸಾಮಾಜಿಕ ಸಂರಕ್ಷಣೆಗಾಗಿಯೇ ಮಾಡಿಕೊಂಡಿರುವ ನಿಷೇಧಗಳು. ಈ ನಿಷೇಧಗಳು ಸಹ ಹಲವು ರೀತಿ ಸಕರಾತ್ಮಕವಾದ ಕ್ರಮವನ್ನು ನಿರ್ವಹಿಸಿವೆ.

* ಗಂಡಸರು ಕೋಳಿ ತಲೆ ತಿಂದರೆ ತಲೆ ತಿರುಗುತ್ತೆ.
* ಊಟ ಮಾಡಿದ ನಂತರ ಕೈ ಒಣಗಿದ್ರೆ, ಗಂಡನಿಗೆ ಎದೆಯು ಒಣಗುತ್ತದೆ.
* ಊಟ ಮುಗಿದ ಮೇಲೆ ತಟ್ಟೆಯನ್ನು ನೆಕ್ಕಬಾರದು
* ಕುಕ್ಕರಗಾಲಲ್ಲಿ ಕೂತು ಉಣಬಾರದು
* ಊಟ ಮಾಡುವಾಗ ನೆಲಕ್ಕೆ ಕೈಯನ್ನು ಊರಬಾರದು
* ಊಟ ಮಾಡುವಾಗ ಕಾಲು ಕುಣಿಸಬಾರದು
* ರಾತ್ರಿ ವೇಳೆ ಊಟ ಮಾಡದೆ ಮಲಗಬಾರದು
* ಊಟದ ತಟ್ಟೆಯನ್ನು ದಾಟಬಾರದು
* ಊಟ ಮಾಡುವಾಗ ಮತ್ತು ಕರೆಂಟ್ ಹೋದರೆ ಊಟ ನಿಲ್ಲಿಸಬೇಕು.
* ಮಾಂಸದ ಊಟ ಉಂಡ ಮೇಲೆ ಮಜ್ಜಿಗೆ ಕುಡಿಯಬಾರದು
* ಊಟ ಮಾಡುವಾಗ ಮಾತನಾಡಬಾರದು/ನಗಬಾರದು
* ಮಲಗಿ ನೀರು ಕುಡಿಯ ಬಾರದು

ಹೀಗೆ ಹಲವು ನಾನಾ ರೀತಿಯ ನಿಷೇಧಗಳು ಕಡಲಬಾಳು ಗ್ರಾಮದಲ್ಲಿ ಕಂಡುಬರುತ್ತಿತ್ತು, ನಿಗೂಢವಾದ ಶಕ್ತಿಯನ್ನು ಹೊಂದಿವೆ. ಮಾನವನ ರಕ್ಷಣೆಗೆ ನಿಷೇಧಗಳಿವೆ ಮತ್ತು ಹಾನಿಗೆ ಇರುವ ಅಂಶಗಳನ್ನು, ಅಪಾಯವನ್ನು ನಿವಾರಿಸುವಂತಹ, ದಾರಿಯಲ್ಲಿ ಭಾವುಕತೆಯಿಂದ ನಿಷೇಧ ನಕಾರತ್ಮಕ ಅರ್ಥವನ್ನು ಒಳಗೊಂಡಿವೆ.

**ನಂಬಿಕೆ, ವಿಧಿ–ನಿಷೇಧಗಳು**

೧. ದೀಪವನ್ನು ಆರಿಸಲು ಆರಿಸು ಎನ್ನಬಾರದು

೨. ಸತ್ತಿರುವ ವ್ಯಕ್ತಿಗೆ ಉಡುದಾರ ತೆಗೆಯಬೇಕು

೩. ಶುಕ್ರವಾರ ಸೊಸೆ, ಮಂಗಳವಾರ ಮಗಳು ಊರಿಗೆ ಕಳುಹಿಸಬಾರದು

೪. ಗರ್ಭಿಣಿಯಾಗಿದ್ದಾಗ ಬಾಳೆಹಣ್ಣು, ಪರಂಗಿಹಣ್ಣು ತಿನ್ನುವಂತಿಲ್ಲ

೫. ರಾತ್ರಿ ಹೊತ್ತು ತಲೆಬಾಚಿಕೊಳ್ಳಬಾರದು

೬. ದೀಪವನ್ನು ಆರಿಸುವಾಗ ಬಾಯಿಯಿಂದ ಆರಿಸಬಾರದು

೭. ಹೊಸ್ತಿಲ ಮೇಲೆ ಕುಳಿತುಕೊಳ್ಳಬಾರದು

೮. ಬಂಜೆಯರು ಮಕ್ಕಳನ್ನು ಮುಟ್ಟಬಾರದು

೯. ಮಲಗಿರುವ ಮಕ್ಕಳಿಗೆ ಅಲಂಕಾರ ಮಾಡಬಾರದು

೧೦. ಮಕ್ಕಳ ಮೊದಲ ಕೂದಲು ಮನೆ ದೇವರಿಗೆ ಕೊಡಬೇಕು

೧೧. ರಾಗಿ ಬೀಸುವಕಲ್ಲನ್ನು ಕಾಲಲ್ಲಿ ಒದೆಯಬಾರದು

೧೨. ಮುಟ್ಟಾದಾಗ ಮೂರು ದಿನ ಹೊರಗೆ ಇರಬೇಕು

೧೩. ಅಣಬೆ ಕಾಣಬಾರದು ಕಂಡರೆ ಹಣ ಕಾಣುತ್ತದೆ.

೧೪. ಬೆಳಗಿನ ಜಾವ ಬಿದ್ದ ಕನಸು ನಿಜವಾಗುತ್ತದೆ.

೧೫. ಮಕ್ಕಳಿಗೆ ಅರೆನಿದ್ರೆ ಮಾಡಿಸಬಾರದು

೧೬. ಮಲಗುವಾಗ ಕಾಲನ್ನು ಚಕ್ಕಲು ಬಕ್ಕಲು ಹಾಕಿ ಮಲಗಬಾದರು

೧೭. ಮಲಗಿದ್ದವರ ಮುಖಕ್ಕೆ ನಾಮ ಬೊಟ್ಟು ಇಡಬಾರದು

೧೮. ಹೆಣ್ಣಿಗೆ ಎಡಗಡೆ ಕಣ್ಣು, ಗಂಡಿಗೆ ಬಲಗಡೆ ಕಣ್ಣು ಹಾರಿದರೆ ಒಳ್ಳೆಯದು

೧೯. ಕಾಲನ್ನು ತೊಳೆಯುವಾಗ ಹಿಮ್ಮಡಿ ಪೂರ್ಣ ತೊಳೆಯಲೇ ಬೇಕು

೨೦. ಯಾವುದೇ ಶುಭ ಅಶುಭಕ್ಕಾಗಿ ಪಂಚಾಂಗ ನೋಡಬೇಕು.

೨೧. ಬೆಳಗ್ಗೆ ಏಳುವಾಗ ಬಲಗಡೆಯಿಂದ ಏಳಬೇಕು.

೨೨. ಮನೆಯಲ್ಲಿ ಯಾರಾದರೂ ಸತ್ತರೆ ಸತ್ತ ವರ್ಷದಲ್ಲಿ ಮದುವೆ ಮಾಡಬೇಕು. ಇಲ್ಲದಿದ್ದರೆ ೩ ವರ್ಷ ಮದುವೆಯಾಗಲು ಬರುವುದಿಲ್ಲ

೨೩. ಮಗುವಿಗೆ ಕನ್ನಡಿಯನ್ನು ತೋರಿಸಬಾರದು

೨೪. ಕೈಯಲ್ಲಿ ಗರುಡ ರೇಖೆ ಇರುವವರನ್ನು ಕಂಡರೆ ನಾಗರ ಹಾವು ಹೆದರುತ್ತೆ

೨೫. ಮಕ್ಕಳಿಗೆ ಬೇಗ ಹಲ್ಲು ಬಂದರೆ

೨೬. ಮಕ್ಕಳಿಗೆ ಜೊಲ್ಲು ಸುರಿದರೆ ಬೇಗ ಮಾತು ಬರುತ್ತೆ

೨೭. ಮನೆಯ ಒಳಗೆ ಕಾಗೆ ಬರಬಾರದು

೨೮. ಯಾವುದೇ ಕೃಷಿ ಚಟುವಟಿಕೆಯನ್ನು ಮೊದಲ ಕಾಯಿ ದೇವರ ಪೂಜೆ

೨೯. ಯಾರನ್ನಾದರೂ ಕುರಿತು ಮಾತನಾಡುವಾಗ ಅವರು ಅಲ್ಲಿಗೆ ಬಂದರೆ ನೂರು ವರ್ಷ ಆಯಸ್ಸು

೩೦. ಅಂಗೈ ಕಡಿದರೆ ಜಗಳವಾಗುತ್ತೆ.

೩೧. ನಕ್ಷತ್ರ ಬಿದ್ದರೆ ಯಾರಾದರೂ ದೊಡ್ಡವರು ಸಾಯುತ್ತಾರೆ.

೩೨. ಮನೆಯ ಮುಂದೆ ತುಳಿಸಿಗಿಡ ಇದ್ದರೆ ಕಾಯಿಲೆ ಬರುವುದಿಲ್ಲ

೩೩. ಗಂಡು ಮಕ್ಕಳ ತಲೆಯಲ್ಲಿ ೨ ಸುಳಿ ಇದ್ದರೆ ೨ ಮದುವೆ ಆಗುತ್ತಾನೆ.

೩೪. ಹಾವರಾಣಿಯನ್ನು ಮುಟ್ಟಿದರೆ ಹಣ ಸಿಗುತ್ತದೆ.

೩೫. ರಾತ್ರಿ ಹೊತ್ತು ಉಪ್ಪು-ಹೆಪ್ಪು ಹೊರಗಡೆ ಕೊಡಬಾರದು

೩೬. ಮದುವೆಯಾದ ವರ್ಷ ದಂಪತಿಗಳ ಸಮೇತ ಜಾತ್ರೆ ನೋಡಬೇಕು.

೩೭. ಮನೆಯಲ್ಲಿ ಹಸುಗಳನ್ನು ಕಸ ಬರಿಗೆಯಿಂದ ಹೊಡೆಯಬಾರದು

೩೮. ಮನೆಯಲ್ಲಿ ಸಿಳ್ಳೆ ಹೊಡಯ ಬಾರದು.

೩೯. ಗೂಬೆ ಮನೆ ಮುಂದೆ ಕೂಗಿದರೆ ಸಾವಿನ ಸೂಚನೆ

೪೦. ಮನೆಯಲ್ಲಿ ಊಟ ಮಾಡುವಾಗ ಮೈ ಮುರಿಯಬಾರದು.

೪೧. ಹೆಂಗಸರು ಅವಳಿ-ಜವಳಿ ಬಾಳೆ ಹಣ್ಣು ತಿನ್ನಬಾರದು.

೪೨. ಒಂಟಿಗಾಲಲ್ಲಿ ನಿಲ್ಲುವುದು ಅಶುಭ

೪೩. ಮುಟ್ಟಾದಾಗ ಎಳೆಯ ಮಕ್ಕಳನ್ನು ಮುಟ್ಟಬಾರದು.

೪೪. ಗಂಡನ ಊಟವಾದ ಮೇಲೆ ಹೆಂಡ್ತಿ ಊಟ ಮಾಡಬೇಕು.

೪೫. ಹೊಸ ಮನೆಗೆ ಹೋಗುವಾಗ ಹಾಲು ಉಕ್ಕಿಸಿ ಹೋಗಬೇಕು.

೪೬. ನಾಯಿ ಮಲಗಿದಾಗ ಮುಖನೋಡಿ ಕೂಗಿದರೆ ಮಳೆ ಬರುವ ಸೂಚನೆ.

೪೭. ಹೊರಗೆ ಹೋಗುವಾಗ ಎಲ್ಲಿಗೆ ಅಂತ ಕೇಳಬಾರದು.

೪೮. ಶವಸಂಸ್ಕಾರ ಮಾಡಿಬರುವಾಗ ಹಿಂದೆ ತಿರುಗಿ ನೋಡಬಾರದು.

೪೯. ಒಲೆ ಉರಿಯುವಾಗ ಜೋರಾಗಿ ಕರೆದರೆ ನೆಂಟರು ಬರುತ್ತಾರೆ.

೫೦. ಬಿಕ್ಕಳಿಕೆ ಬಂದರೆ ಯಾರಾದರೂ ನೆನಪಿಸಿಕೊಳ್ಳುತ್ತಾರೆ ಎಂದರ್ಥ.

೫೧. ಆಣೆಕಲ್ಲು ಆಡಿದರೆ ಮಳೆ ಬರುವುದಿಲ್ಲ.

೫೨. ಎರಡು ಕೈಗಳನ್ನು ಜೋಡಿಸಿ ಹಿಡಿದಾಗ ಬೆರಳ ತೂತುಗಳು ಕಾಣಿಸಿಕೊಂಡರೆ ಹಣ ಅವರ ಕೈಯಲ್ಲಿ ಉಳಿಯುವುದಿಲ್ಲ.

೫೩. ಮೈಮೇಲಿನ ಬಟ್ಟೆಯನ್ನು ಹೊಲಿಯಬಾರದು.

೫೪. ಯಾರಿಗಾದರೂ ನೀರು ಚಿಮುಕಿಸಿದರೆ ಉಗುರುಸುತ್ತು ಆಗುವುದು.

೫೫. ಸಂಜೆ ಹೊತ್ತು ಮಲಗಬಾರದು.

೫೬. ಗಂಡನ ತಟ್ಟೆಯಲ್ಲಿ ಹೆಂಡ್ತಿ ಊಟ ಮಾಡಿದರೆ ಗಂಡನ ಮೇಲೆ ಪ್ರೀತಿಜಾಸ್ತಿ.

೫೭. ಬೆಳಿಗ್ಗೆ ಎದ್ದು ಹಸುವಿನ ಮುಖ ತೆಂಗಿನ ಮರ ನೋಡಿದರೆ ಒಳ್ಳೆಯದು

**ಅಡಿಟಿಪ್ಪಣಿಗಳು**

೧. ನಿಂಗಪ್ಪ ಎಸ್. ಮಾದಣ್ಣನವರು, **ಸೊರಟೂರು ಗ್ರಾಮದ ಜಾನಪದ ಅಧ್ಯಯನ** ೨೦೧೩, ಪು.೧೬೯

೨. ವಿದ್ವಾನ್ ವಿ.ಎನ್. ಭಟ್ಟ, **ಭಾರತೀಯ ಹಬ್ಬಗಳ ವೈಶಿಷ್ಟ್ಯ** ವಿಶ್ವನಾಥ ಪ್ರಕಾಶನ ಜ್ಞಾನದೀಪ, ಸಹ್ಯಾದ್ರಿ ನಗರ ಶಿವಮೊಗ್ಗ ೨೦೦೨

೩. ಶಾಂತವ್ವ ನಾಗಪ್ಪ ಲಕ್ಷ್ಮೇಶ್ವರ, **ಯಮನೂರು ಗ್ರಾಮ ಸಂಸ್ಕೃತಿಕ ಸಂಕಥನ,** ಪು.೮೮

೪. ಶಾಂತವ್ವ ನಾಗಪ್ಪ ಲಕ್ಷ್ಮೇಶ್ವರ, **ಯಮನೂರು ಗ್ರಾಮ ಸಂಸ್ಕೃತಿಕ ಸಂಕಥನ,** ಪು.೧೦೨

# ಅಧ್ಯಾಯ ಏಳು

## ಕಡಲಬಾಳು ಗ್ರಾಮ ಮತ್ತು ಸಮಕಾಲೀನತೆ

೭.೧. ಭೌತಿಕ ಬದಲಾವಣೆ

೭.೨. ಸಾಮಾಜಿಕ ಬದಲಾವಣೆ

೭.೩. ಸಾಂಸ್ಕೃತಿಕ ಬದಲಾವಣೆ

೭.೪. ಶೈಕ್ಷಣಿಕ ಬದಲಾವಣೆ

೭.೫. ಆರ್ಥಿಕ ಬದಲಾವಣೆ

೭.೬. ಸಾಹಿತ್ಯ ಮತ್ತು ಕಲೆ

## ಅಧ್ಯಾಯ ಏಳು

# ಕಡಲಬಾಳು ಗ್ರಾಮ ಮತ್ತು ಸಮಕಾಲೀನತೆ

**ಪೀಠಿಕೆ**

ನಾವು ಬದಲಾದಂತೆ ನಮ್ಮಲ್ಲಿರುವ ಯಾವುದೇ ಪದ್ಧತಿ ಜನರ ಜೀವನದಲ್ಲಿ ಬದಲಾವಣೆಯನ್ನು ತರುತ್ತದೆ. ಈ ಬದಲಾವಣೆ ಜನರ ಜೀವನ ಆಧಾರ. ಚಿಂತನೆಯಿಂದ ಆಚರಣೆಗಳು, ಸಂಪ್ರದಾಯ, ಆಚಾರ-ವಿಚಾರ, ಸಾಮಾಜಿಕ ಸಂದರ್ಭಗಳಲ್ಲೂ ಪರಿವರ್ತನೆ ಕಂಡುಬರುತ್ತವೆ. ಪ್ರಸ್ತುತ ಕಡಲಬಾಳು ಪರಿಸರದಲ್ಲಿ ಈ ಎಲ್ಲಾ ವಿಧವಾದ ಬದಲಾವಣೆಗಳನ್ನು ಕಾಣಬಹುದು. ಜೊತೆಗೆ ಹೊಂದಾಣಿಕೆ ಭಾವನೆಯನ್ನು ಕಾಣಬಹುದು. ಜನಸಂಖ್ಯೆ ಹೆಚ್ಚಾದಂತೆಲ್ಲಾ ಕೈಗಾರಿಕಾ ಉತ್ಪಾದನೆ ಪ್ರಮುಖವಾಗಿ, ಮಾನವ ಸಂಪನ್ಮೂಲ ಬಳಕೆಯ ಶ್ರಮಸಲಕರಣೆಗಳು ಹೆಚ್ಚಾಗಿವೆ. ನಮ್ಮಲ್ಲಿ ನೆಲ, ಜಲ ಗೌರವಿಸಿ ವಿಸ್ತರಿಸಿ, ಉಳಿಸುವ, ಬೆಳೆಸುವ ಅರಿವು ನಿಸರ್ಗಧರ್ಮಕ್ಕೆ ಕಡೆಯಾಗದಂತೆ ಇದೆ. ಈ ಬದುಕನ್ನು ಅರಿಯುವ, ಬದುಕನ್ನು ಬಾಳುವ, ಜೀವನ ಮಾರ್ಗವನ್ನು ತೋರುವ ಬದುಕು ಜೀವ ಜಗತ್ತನ್ನು ಬದುಕಿಸುವಂತೆ, ತನ್ನ ನಡೆಯನ್ನು ನಿರ್ಮಿಸಿಕೊಳ್ಳಲು ಜೀವನ ಸಾಂಪ್ರದಾಯಿಕ ಕೃಷಿ ಪ್ರಕೃತಿಯನ್ನು ವಿವರಿಸುವುದು ಉತ್ತಮ ಮಾರ್ಗವಾಗಿದೆ. ಕಡಲಬಾಳು ಗ್ರಾಮದ ಪೂಜೆ ಮಾಡಿಸಲು ಪೂಜಾರಿಗಳೇ ಇರುತ್ತಿರಲಿಲ್ಲ. ಏಕೆಂದರೆ ಪೂಜಾರಿಗಳು ಹೊಲದ ಕೆಲಸಗಳಲ್ಲಿ ತೊಡಗುತ್ತಿದ್ದರು. ಪೂಜೆ ಮಾಡಿಸಲು ಹೊಲಕ್ಕೆ ಹೋಗಿ ಕರೆದು ತರಬೇಕಾಗಿತ್ತು. ಇಂದು ಇವರ ಉದ್ಯೋಗವೇ ಪೂಜೆ ಮಾಡುವುದಾಗಿದೆ. ಹೊಲದ ಕೆಲಸ ಮಾಡುವುದು ಕಡಿಮೆಯಾಗಿದೆ. ಹೊಲದಲ್ಲಿ ಉಳುಮೆಗೆ ಎತ್ತುಗಳನ್ನು ಬಳಸುತ್ತಿದ್ದರು. ಟ್ರ್ಯಾಕ್ಟರ್ ಬಂದ ಮೇಲೆ ಎತ್ತಿನ ಗಾಡಿಗಳು ಮೂಲೆಗೆ ಸೇರಿಕೊಂಡಿವೆ.

ಗೊಬ್ಬರ ಗೂಡು ಹೊಡೆಯಲು ಗಾಡಿಗಳು ಬಂದಿವೆ. ಟ್ರ್ಯಾಕ್ಟರ್‌ಗಳ ಬಳಕೆಯು ಬಹಳ ಇದೆ. ಎತ್ತಿನ ಗಾಡಿಗಳಲ್ಲಿ ಗೊಬ್ಬರಗೂಡು ಹೊಡೆಯಲು ದಿನಗಳೇ ಬೇಕಾಗುತ್ತವೆ. ಟ್ರ್ಯಾಕ್ಟರ್‌ಗಳು

ಹೆಚ್ಚಾಗಿ ಹೊಲ ಜಮೀನುಗಳನ್ನು ಹೊಂದಿರುವರಿಗೆ ಅನುಕೂಲವಾಗುತ್ತವೆ. ಹೊರತು ಸಣ್ಣ ಸಣ್ಣ ತುಂಡು ಭೂಮಿ ಹೊಂದಿರುವವರಿಗೆ ಅಲ್ಲ. ಇದು ಸಣ್ಣ ಜಮೀನುದಾರನಿಗೆ ಹೆಚ್ಚು ಖರ್ಚು ದುಬಾರಿಯಾಗುತ್ತೆ. ಗೊಬ್ಬರಗಳ ಬಳಕೆಯಲ್ಲಿ ಕೊಟ್ಟಿಗೆ ಗೊಬ್ಬರ, ರಾಸಾಯನಿಕ ಗೊಬ್ಬರ ಎರಡನ್ನು ಬಳಸುತ್ತಾರೆ. ಕೊಟ್ಟಿಗೆ ಗೊಬ್ಬರ ಹೆಚ್ಚಾಗಿ ದೊರಕಿದರೆ ಅದನ್ನು ಉಪಯೋಗಿಸುತ್ತಾರೆ. ಇಲ್ಲವಾದರೆ ರಾಸಾಯನಿಕ ಗೊಬ್ಬರವನ್ನು ಉಪಯೋಗಿಸುವರು. ಏಕೆಂದರೆ ದನ, ಎತ್ತು, ಎಮ್ಮೆಗಳ ಸಾಕಣೆ ಕಡಿಮೆಯಾಗುತ್ತಿದೆ. ಜಾನುವಾರುಗಳ ಸಂಖ್ಯೆ ಕಡಿಮೆ. ಶಾಲಾ–ಕಾಲೇಜು ವಿದ್ಯಾವಂತ ಯುವಕರೆಲ್ಲ ನಗರ ಪ್ರದೇಶಗಳತ್ತ ಮುಖ ಮಾಡಿದ್ದಾರೆ. ಅವರಿಗೆ ಕೃಷಿಯ ಆಸಕ್ತಿ ಇಲ್ಲ, ಸರ್ಕಾರಿ ಕೆಲಸವನ್ನು ಅರಸಿಕೊಂಡು ಊರನ್ನು ಬಿಟ್ಟು ಹೋಗುತ್ತಾರೆ. ನಂತರ ಅಲ್ಲಿಯೇ ಅವರ ವ್ಯಾಪಾರ, ವ್ಯವಹಾರದಿಂದ, ಉದ್ಯೋಗದಿಂದ ಉತ್ತಮವಾಗಿದ್ದಾರೆ. ಅಲ್ಲಿಯೇ ಜೀವನವನ್ನು ನಡೆಸುತ್ತಾರೆ. ಗ್ರಾಮ ಪ್ರದೇಶದ ಕಡೆಗೆ ತಲೆಯೂ ಹಾಕುವುದಿಲ್ಲ. ಕಡಲಬಾಳು ಗ್ರಾಮದ ಪ್ರದೇಶ ಹೆಚ್ಚಾಗಿ ಮಳೆ ಆಶ್ರಿತ ಪ್ರದೇಶವಾಗಿರುವುದರಿಂದ ಸರಿಯಾದ ಸಮಯಕ್ಕೆ ಮಳೆ ಬೀಳದಿದ್ದರೆ ಬೆಳೆಯಾಗುವುದಿಲ್ಲ. ಬೆಳೆಯಾಗದಿದ್ದರೆ ಜಾನುವಾರುಗಳಿಗೆ ಮೇವು ದೊರಕುವುದಿಲ್ಲ. ಜಾನುವಾರುಗಳಿಗೆ ಮೇವು ಇಲ್ಲದಿದ್ದರೆ ಅವುಗಳ ಜೀವನ ಬದುಕು ಕಷ್ಟಕರವಾಗಿದೆ. ಕೆಲವೊಂದು ಸಂದರ್ಭದಲ್ಲಿ ಜಾನುವಾರುಗಳನ್ನು ಬಸವನ ಬೆಟ್ಟಕ್ಕೆ ಹೊಡೆಯುತ್ತಾರೆ.

ಕೃಷಿಗೆ ನಾನಾ ತೊಂದರೆಗಳು ಕಾಡುತ್ತವೆ. ಆದರೆ ನಮ್ಮಲ್ಲಿ ಕೃಷಿ ಇಲ್ಲದ ಜೀವನ ಅದು ಜೀವನವೇ ಅಲ್ಲ. ಕಡಲಬಾಳು ಗ್ರಾಮದಲ್ಲಿ ವಾಣಿಜ್ಯ ಬೆಳೆಯು ಒಂದಾಗಿದೆ. ಹೆಚ್ಚು ಆದಾಯವನ್ನು ತರುವ ಬೆಳೆಯಾಗಿದೆ. ನೀರಾವರಿ ಇದ್ದರೆ ಈ ಬೆಳೆಗೆ ಯಾವುದೇ ತೊಂದರೆ ಕಾಡುವುದಿಲ್ಲ. ಇದರಲ್ಲಿ ಎತ್ತು ಕರುಗಳ ಬಳಕೆ ಕಡಿಮೆ. ಇದಕ್ಕೆ ಮುಖ್ಯವಾಗಿ ರೈತನು ಹೆಚ್ಚಾಗಿಯೇ ರಾಸಾಯನಿಕ ಗೊಬ್ಬರವನ್ನು ಬಳಸುತ್ತಾನೆ. ಸುಲಭವಾಗಿ ಕೆಲಸಗಾರರ ಅವಶ್ಯಕತೆ ಕಡಿಮೆಯಾಗಿ ಬೆಳೆಯನ್ನು ಬೆಳೆಯುತ್ತಾರೆ. ಮಾರುಕಟ್ಟೆಯಲ್ಲಿ ಬೆಳೆದ ಬೆಳೆಗೆ ಬೆಲೆಯು ಸಿಗುತ್ತದೆ. ಮತ್ತೆ ಇಲ್ಲಿನ ಆದಾಯ ಮುಖ್ಯವಾಗಿದೆ. ಅನೇಕರು ಕೃಷಿ ಜಮೀನನ್ನು ಅಂಗಡಿ ಮುಂಗಟ್ಟುಗಳಾಗಿ ಪರಿವರ್ತಿಸಿದ್ದಾರೆ. ಈ ಗ್ರಾಮದಲ್ಲಿ ರಾಜಕೀಯ ಪ್ರಬಲವಾಗಿದ್ದು, ದೇವಸ್ಥಾನದಲ್ಲಿಯೂ ರಾಜಕೀಯ ಪ್ರವೇಶವಾಗಿರುವುದು ವಿಷಾದನೀಯವಾಗಿದೆ. ಬೇರೆ ಬೇರೆ ಸಮುದಾಯಗಳ ನಡುವೆ ಇದ್ದಂತ ಸಾಮಾಜಿಕ ಸಂಬಂಧಗಳು ಬದಲಾವಣೆಯಾಗಿ ಸ್ವರೂಪ ಬೇರೆಯಾಗಿವೆ. ಅದರ ನಂತರ ಇಂದಿಗೂ ಹಾಗೆಯೇ ಇದೆ. ಮಾತನಾಡುವ ಜೊತೆಯಲ್ಲಿ ಓಡಾಡುವ ಜೊತೆಗೆ ಕುಳಿತುಕೊಂಡು ಮಾತನಾಡುವ ವಿಧಾನಗಳು ಬದಲಾವಣೆಯಾಗಿವೆ. ಸಾಂಪ್ರದಾಯಿಕ ಕೃಷಿ ವಿಧಾನ, ಕೃಷಿ ಪದ್ಧತಿಗಳು ಒಬ್ಬರೊಬ್ಬರು ಸಹಾಯ ಮಾಡುವುದಾಗಿತ್ತು.

ಈ ಗ್ರಾಮದ ಜನ ಜೀವನವನ್ನು, ಸಂಸ್ಕೃತಿಯನ್ನು ರೂಪಿಸುವುದರ ಜೊತೆ-ಜೊತೆಗೆ ಸಂಸ್ಕೃತಿಗೆ ಆಧಾರ ಸ್ತಂಭವಾಗಿತ್ತು. ಧರ್ಮ, ಜನಾಂಗ, ಸಂಘ-ಸಂಸ್ಥೆಗಳು ಕಾಲಘಟ್ಟದಲ್ಲಿ ವಿವಿಧ ರೀತಿಯಾಗಿ ಈ ದೇಶಗಳ ಜನಜೀವನ ಅವರು ಮಾಡುವಂತಹ ಕೆಲವು ಕೆಲಸಗಳು, ಅವರ ಆಚರಣೆ ಮಾಡುವಂತಹ ಸಾಂಪ್ರದಾಯಕವಾದ ಕೃಷಿಯ ಬಗ್ಗೆ, ಅದರಿಂದ ಈ ದೇಶದಲ್ಲಿ ಅವರು ಜೀವನ ನಡೆಸಲು ಅನೇಕ ರೀತಿಯ ಸಹಾಯ ಆಧಾರವೂ ಬೇಕೇ ಬೇಕು. ರಾಜಕೀಯ ರಂಗದಲ್ಲಿ ಈ ಪ್ರದೇಶವು ಹೊಸ ಹೊಸ ರೀತಿಯಾದಂತಹ ಹೊಸ ಹೊಸ ಸಾಮಾಜಿಕ ಸಂಸ್ಥೆಗಳಲ್ಲಿ ಜೀವನ ಪದ್ಧತಿಯನ್ನು ತನ್ನದಾಗಿಸಲು ಹಲವು ವಿರೋಧಿಗಳನ್ನು ಪರಸ್ಪರ ಹೊಂದಾಣಿಕೆಯನ್ನೂ ಏಕಕಾಲದಲ್ಲಿ ಪರಿವರ್ತನೆ ಹೊಂದಿರುವುದನ್ನು ಕಾಣುತ್ತೇವೆ.

ಭೌಗೋಳಿಕ, ಸಾಮಾಜಿಕ ಹಿನ್ನೆಲೆಯಲ್ಲಿ ಗ್ರಾಮದ ಪರಿಕಲ್ಪನೆಯನ್ನು ನೋಡಿದಾಗ ಹಲವಾರು ಬದಲಾವಣೆಯನ್ನು ಹೊಂದಿದೆ ಎಂದು ತಿಳಿಯುತ್ತದೆ. ಪ್ರತಿಯೊಂದು ಗ್ರಾಮ ಸಮಾಜವು ಹಲವಾರು ಸ್ಥಿತ್ಯಂತರಗಳನ್ನು ಒಳಗೊಂಡಿರುತ್ತದೆ. ಪ್ರತಿಯೊಂದು ಗ್ರಾಮವು ಆಧುನಿಕತೆಯ ಪ್ರಭಾವದಿಂದ ಹೆಚ್ಚು ಬದಲಾವಣೆಯನ್ನು ಹೊಂದಿರುತ್ತವೆ. ಅಂದರೆ ಇಂದಿನ ಹಳ್ಳಿಗಳು ಇಲ್ಲಿನ ಸಾಮಾಜಿಕ ಸ್ಥಿತಿಯು ಆಧುನಿಕತೆಯ ಜೀವನ ವಿಧಾನವನ್ನು ಸ್ವೀಕರಿಸುವ ಮೂಲಕ ನವ್ಯತೆಯನ್ನು ಪಡೆಯುತ್ತದೆ. ನಗರೀಕರಣದಿಂದಲೂ ಸಹ ಗ್ರಾಮಗಳು ಬೆಳೆಯುತ್ತಿರುತ್ತವೆ.

ಗ್ರಾಮದ ಅಧ್ಯಯನವು ಪ್ರತಿಯೊಂದು ಗ್ರಾಮದ ಎಲ್ಲಾ ವಿಷಯ ವಸ್ತುವನ್ನು ಒಳಗೊಂಡಿರುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಕಡಲಬಾಳು ಗ್ರಾಮದಲ್ಲಿ ಕೆಲವೊಂದು ಅಂಶಗಳನ್ನು ಗಮನಿಸಿದಾಗ ಮತ್ತು ಕ್ಷೇತ್ರಕಾರ್ಯದ ಮೂಲಕ ಕೆಲವೊಂದು ಅಂಶಗಳನ್ನು ತಿಳಿಯಬಹುದಾಗಿದೆ. ಅಂದರೆ ಗಾಂಧೀಜಿಯವರು ಹೇಳಿದಂತೆ ಗ್ರಾಮಗಳ ಉದ್ಧಾರವೇ ದೇಶಗಳ ಉದ್ಧಾರವೆಂಬ ಆಶಯದಂತೆ ಅಂದರೆ ಕೃಷಿ/ಕೃಷಿಪೂರಕ ಉದ್ಯೋಗಗಳಿಂದ ಗ್ರಾಮಗಳು ಅಭಿವೃದ್ಧಿಯನ್ನು ಕಾಣಬಹುದಾಗಿದೆ.

ಜನಪದ ಕಥೆ, ಗಾದೆ ಮತ್ತು ಒಗಟುಗಳ ಸ್ಥಾನಗಳಲ್ಲಿ ಟಿ.ವಿ., ರೇಡಿಯೋ, ಮೊಬೈಲ್‌ಗಳ ಪ್ರಭಾವ ಹೆಚ್ಚಾಗಿದೆ. ಜನಪದ ಸಾಹಿತ್ಯದ ಪ್ರಭಾವ ತುಂಬಾ ಕಡಿಮೆಯಾಗಿದೆ. ಅಂದರೆ ಇದಕ್ಕೆ ಜನರ ಆಸಕ್ತಿ ಕಡಿಮೆಯಾಗುತ್ತಿದೆ.

ಇಲ್ಲಿ ನಗರೀಕರಣದ ಪ್ರಭಾವದಿಂದ ಯಾಂತ್ರಿಕ ಅವಲಂಬನೆ ಔದ್ಯೋಗೀಕರಣ ಅಧಿಕವಾಗಿರುವ ಕಾರಣ ಪರಿವರ್ತನೆಯಲ್ಲಿ, ನೇಗಿಲು, ಕುಂಟೆ, ಕೂರಿಗೆ ಮುಂತಾದ ವ್ಯವಸಾಯ ಸಾಮಗ್ರಿಗಳು ಅಧಿಕ ಬದಲಾವಣೆ ಹೊಂದಿವೆ.

## ೭.೧. ಭೌತಿಕ ಬದಲಾವಣೆ

ಬದಲಾವಣೆ ನಿಸರ್ಗ ನಿಯಮ. ಪ್ರತಿಯೊಂದು ವ್ಯಕ್ತಿಗಳಲ್ಲಿ ಇದು ಸಹಜವಾಗಿರುತ್ತದೆ. ಹಾಗೆಯೇ ಗ್ರಾಮವು ಒಂದೇ ಸ್ವರೂಪದಲ್ಲಿ ಇರಲಾರದು. ಅದು ತನ್ನ ಭೌತಿಕ ಸ್ವರೂಪದಲ್ಲಿ ಕಾಲಕ್ಕನುಗುಣವಾಗಿ ಬದಲಾವಣೆಯಾಗುತ್ತದೆ. ಆದರೆ ಇಂದು ಗ್ರಾಮದಲ್ಲಿ ಭೌತಿಕ ಬೆಳವಣಿಗೆ ಬಹು ವಿಸ್ತಾರವಾಗಿ ಬೆಳೆದಿರುವುದನ್ನು ಕಾಣುತ್ತೇವೆ. ಪ್ರಸ್ತುತ ಅಂಕಿ–ಅಂಶಗಳ ಪ್ರಕಾರ ೭೧೪ ಮನೆಗಳನ್ನು ಹೊಂದಿದೆ. ಕಡಲಬಾಳು ಗ್ರಾಮವು ೨೦೦೧ರ ಜನಗಣತಿಯಂತೆ ೩೨೬೦ ಜನಸಂಖ್ಯೆ ಹೊಂದಿದ್ದು, ಗ್ರಾಮದ ಭೌತಿಕ ಬೆಳವಣಿಗೆಯ ವೇಗವನ್ನು ತಿಳಿಸುತ್ತದೆ. ಗ್ರಾಮವು ಕಪ್ಪತ್ತಗುಡ್ಡದ ಸರಹದ್ದಿನಲ್ಲಿರುವುದರಿಂದ ಇಲ್ಲಿ ಅರಣ್ಯ ಪ್ರದೇಶವು ಹೇರಳವಾಗಿದೆ. ಗುಡ್ಡಗಳಲ್ಲಿ ಗಿಡಮರಗಳ ಪೊಟರೆಗಳಲ್ಲಿ ಕಾಡು ಪ್ರಾಣಿಗಳು ವಾಸಿಸುತ್ತವೆ. ಆದರೆ ಇಂದು ಜನಸಂಖ್ಯೆಯ ಹೆಚ್ಚಳ ಮತ್ತು ಆಧುನಿಕತೆಯ ಪ್ರಭಾವದಿಂದಾಗಿ ಜನರು ತಮ್ಮ ಸ್ವಾರ್ಥಕ್ಕಾಗಿ ಅರಣ್ಯ ಪ್ರದೇಶವನ್ನು ಕಡಿಯುತ್ತಿದ್ದಾರೆ. ಕಡಲಬಾಳು ಗ್ರಾಮಕ್ಕೆ ಪ್ರಾಚೀನ ಕಾಲದಲ್ಲಿ ಹುಲಿಯ ಕಾಟವಿತ್ತು. ಅದನ್ನು ಗ್ರಾಮದ ದೇವತಾಶಕ್ತಿಯ ಮಹಿಳೆ ಮಾರಮ್ಮ ಸಂಹರಿಸಿದಳು ಎಂಬ ನಂಬಿಕೆ ಇದೆ. ಆದರೆ ಗ್ರಾಮದ ಸರಹದ್ದಿನಲ್ಲಿ ಹುಲಿ, ಜಿಂಕೆ, ಚಿಗರೆ ಮೊಲಗಳಂತಹ ಚಿಕ್ಕಪುಟ್ಟ ಪ್ರಾಣಿ–ಪಕ್ಷಿಗಳು ಕಾಣದಂತಹ ಸ್ಥಿತಿ ಸಮಕಾಲೀನ ಸಂದರ್ಭದಲ್ಲಿ ಕಡಲಬಾಳಿನಲ್ಲಿದೆ.

ಗ್ರಾಮದಲ್ಲಿರುವ ಹಳೆಯ ಊರಾದಂತಹ ಕೋಟೆ ಭಾಗದಲ್ಲಿ ಮನೆಗಳು ಇಂದಿಗೂ ಕಲ್ಲು, ಮಣ್ಣು, ಕಟ್ಟಿಗೆಗಳಿಂದ ಕಟ್ಟಿದ ಮನೆಗಳಾಗಿದ್ದು, ಅವುಗಳ ಬಾಳಿಕೆಯ ಕಾಲವು ಸುದೀರ್ಘವಾಗಿದೆ. ಆದರೆ ಇಂದು ಆಧುನಿಕತೆಯ ಪ್ರಭಾವದಿಂದಾಗಿ ಗ್ರಾಮದಲ್ಲಿ ಮರಗಳು, ಸಿಮೆಂಟ್ ಕಬ್ಬಿಣಗಳಿಂದ ಕೂಡಿದ ನವನವೀನ ಮನೆಗಳನ್ನು ಕಟ್ಟಿದ್ದಾರೆ. ಗುಡಿಸಲುಗಳಲ್ಲಿರುವ ಬಡವರು ಹಂಚು, ತಗಡುಗಳ ಮೇಲ್ಛಾವಣಿಗಳಿಂದ ಕೂಡಿದ ಮನೆಗಳನ್ನು ನಿರ್ಮಿಸಿಕೊಳ್ಳುತ್ತಿದ್ದಾರೆ. ಗ್ರಾಮದ ಒಳ–ಹೊರಗೆ ಇರುವ ರಸ್ತೆಗಳು ಕಚ್ಚಾ ರಸ್ತೆಗಳಾಗಿದ್ದವು. ಆದರೆ ಇಂದು ಬಹುತೇಕ ರಸ್ತೆಗಳು ಡಾಂಬರೀಕರಣವಾಗಿದ್ದು, ಗ್ರಾಮದಲ್ಲಿರುವ ಪ್ರತಿಯೊಂದು ಕಿರುದಾರಿಗಳಿಗೆ ಕಲ್ಲಿನ ಪರಸಿ ಹೊಂದಿಸಿದ್ದಾರೆ. ಗ್ರಾಮದ ಪಶ್ಚಿಮ ದಿಕ್ಕಿಗಿರುವ ಕಡಲಬಾಳು ಅತ್ತಿಕಟ್ಟಿ ದಾರಿಯು ಮುಂಡರಗಿ ತಾಲೂಕನ್ನು ಸಂಪರ್ಕಿಸುವ ಮಾರ್ಗವಾಗಿದ್ದರೂ ಅದು ಈವರೆಗೆ ಡಾಂಬರೀಕರಣದ ರಸ್ತೆಯಾಗಿಲ್ಲ. ಹೀಗೆ ಗ್ರಾಮವು ಭೌತಿಕವಾಗಿ ಹಲವಾರು ಬದಲಾವಣೆಗಳನ್ನು ಕಂಡಿದ್ದು, ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿರುವುದನ್ನು ಕಾಣಬಹುದು.

## ೭.೨. ಸಾಮಾಜಿಕ ಬದಲಾವಣೆ

ವರ್ಣ ವ್ಯವಸ್ಥೆ ಪ್ರಾಚೀನ ಕಾಲದಿಂದಲೂ ನಡೆದು ಬಂದ ಪರಂಪರೆ. ಕಡಲಬಾಳು ಗ್ರಾಮದಲ್ಲಿ ಇದು ಕಟ್ಟುನಿಟ್ಟಾಗಿ ಆಚರಣೆಯಲ್ಲಿರುವುದು ಇಲ್ಲಿನ ಹಿರಿಯ ತಲೆಮಾರಿನ ಜೀವಗಳಿಂದ ತಿಳಿದುಬರುತ್ತದೆ. ಆದರೆ ವರ್ಣ ವ್ಯವಸ್ಥೆಯ ಆಚರಣೆ ಇಂದು ಗ್ರಾಮದಲ್ಲಿ ಕಟ್ಟುನಿಟ್ಟಾಗಿ ಸಾಮೂಹಿಕವಾಗಿ ಕಂಡುಬರುವುದಿಲ್ಲ. ಕಟ್ಟುನಿಟ್ಟಿನ ಆಚರಣೆ ಎಂದಾಕ್ಷಣ ಸಂಪೂರ್ಣ ಆಚರಣೆಯಲ್ಲಿ ಇಲ್ಲ ಎಂದು ಹೇಳಲು ಸಾಧ್ಯವಿಲ್ಲ. ಗ್ರಾಮದಲ್ಲಿ ಮುಸ್ಲಿಂ, ಜೈನಧರ್ಮಗಳಿದ್ದರೂ ಇಲ್ಲದಂತೆ ಇವೆ. ಸಾಮಾಜಿಕ ವ್ಯವಸ್ಥೆಯು ಹಲವಾರು ಉಪ ಸಮುದಾಯಗಳನ್ನು ಹೊಂದಿದ್ದು ತಮ್ಮ ಪರಂಪರಾಗತವಾದ ಕೆಲವು ಆಚರಣೆಗಳ ಮೂಲಕ ಅವುಗಳನ್ನು ಜೀವಂತ ಉಳಿಸಿಕೊಂಡು ಬಂದಿದ್ದಾರೆ. ಆದರೆ ಆಧುನಿಕತೆಯ ಪರ್ವದಿಂದ ಇಂದು ಸಮುದಾಯತೆಯ ವ್ಯವಸ್ಥೆ ಗಟ್ಟಿಯಾಗಿ ಉಳಿದಿಲ್ಲ. ಸಾಮಾಜಿಕ ಕಾರ್ಯಚಟುವಟಿಕೆಗಳು ಸಮುದಾಯದ ಸಾಮೂಹಿಕ ಸಂಸ್ಥೆಗಳು ಇಂದು ಮುಕ್ತವಾಗಿವೆ. ಆ ಮೂಲಕ ಗ್ರಾಮದಲ್ಲಿರುವ ಕೆಲವು ಅಂದಾಭಿಮಾನಗಳು ಆಧುನಿಕತೆಯ ಪ್ರಭಾವಕ್ಕೆ ಸಿಲುಕಿ ಹೋಗಿವೆ ಹಾಗೂ ನಳನಳಿಸುತ್ತಿವೆ. ಗ್ರಾಮದ ಅಭಿಮಾನ ಮೂಡಿಸುವ ಧಾರ್ಮಿಕ ಕಾರ್ಯಗಳು ಇಂದು ಜನಪ್ರಿಯಗೊಳ್ಳುತ್ತಿವೆ. ಅದರಲ್ಲೂ ಕಡಲಬಾಳು ಗ್ರಾಮಸ್ಥರಲ್ಲಿ ನಾವು ಒಂದೇ ಎಂಬ ಭಾವನೆ ಮೂಡಿಸುವಲ್ಲಿ ಯಶಸ್ವಿಯಾಗಿವೆ. ಹಾಗೆಯೇ ಮೊಹರಂ ಆಚರಣೆಯಲ್ಲಿನ ವಿಧಿ-ವಿಧಾನಗಳಲ್ಲಿ ಗ್ರಾಮದ ಎಲ್ಲಾ ಸಮುದಾಯಗಳು ಧರ್ಮಾತೀತ ವಾಗಿ ಪಾಲ್ಗೊಳ್ಳುತ್ತಿದ್ದಾರೆ. ಹಾಗೆಯೇ ಗ್ರಾಮದೇವತೆಗಳಾದ ಶ್ರೀ ಆಂಜನೇಯ, ಊರಮ್ಮ, ಕಾಳಮ್ಮ, ಗವಿಸಿದ್ದೇಶ್ವರ, ದುರುಗಮ್ಮ, ಗುಂಡಭರ್ಮಪ್ಪ, ಹುಲಿಗೆಮ್ಮ, ರಾಘವೇಂದ್ರ ಮುಂತಾದ ದೈವಗಳ ಜಾತ್ರೆಗಳು, ಆಚರಣೆಗಳು, ಉತ್ಸವಗಳು, ಉರುಸುಗಳಲ್ಲಿ ಗ್ರಾಮದ ಜನತೆ ಸಾಮಾಜಿಕ ಸಾಮರಸ್ಯ ಕಾಯ್ದುಕೊಂಡು ಬರುತ್ತಿದ್ದಾರೆ. ಹಬ್ಬ-ಹರಿದಿನಗಳ ಆಚರಣೆಯಲ್ಲಿಯೂ ಜನರಲ್ಲಿ ಸಾಮಾಜಿಕ ಸಾಮರಸ್ಯ ಗಟ್ಟಿಗೊಳ್ಳುತ್ತಿದೆ. ಇತ್ತೀಚಿನ ದಿನಗಳಲ್ಲಿ ಕಡಲಬಾಳು ಗ್ರಾಮದಲ್ಲಿ ಎಲ್ಲ ಧರ್ಮಗಳ ಮಹಾಪುರುಷರ ಜಯಂತಿಗಳ ಆಚರಣೆ ಯಥೇಚ್ಚವಾಗಿ ನಡೆಯುತ್ತಿದೆ. ಮಹಮ್ಮದ ಪೈಗಂಬರ ಜಯಂತಿ, ಅಂಬೇಡ್ಕರ ಜಯಂತಿ, ಮಹಾವೀರ ಜಯಂತಿ, ವಾಲ್ಮೀಕಿ ಜಯಂತಿ, ಕನಕದಾಸರ ಜಯಂತಿ ಮುಂತಾದ ಜಯಂತಿಗಳು ವ್ಯಾಪಕವಾಗಿ ನಡೆಯುತ್ತಿರುವುದನ್ನು ಹಳದಿ ಕಣ್ಣಿನಿಂದ ನೋಡಿದರೆ ಸಮಾಜ ವಿಘಟನೆಯಾಗುತ್ತಿದೆ ಎಂಬ ಭಾವನೆ ಬರಬಹುದು. ಆದರೆ ಗ್ರಾಮದಲ್ಲಿ ಎಲ್ಲಾ ಜಯಂತಿ ಆಚರಣೆ, ಜಾತ್ರೆ-ಉತ್ಸವಗಳಲ್ಲಿ ಎಲ್ಲ ಸಮುದಾಯದ ಜನರು ಪಾಲ್ಗೊಂಡು ಆಚರಣೆ ಮಾಡುತ್ತಿರುವುದು ಗ್ರಾಮದ ಸಾಮರಸ್ಯ ಜೀವನಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಒಟ್ಟಾರೆ ಕಡಲಬಾಳು ಗ್ರಾಮ ಸಾಮಾಜಿಕ ಸಾಮರಸ್ಯಕ್ಕೆ ಮಾದರಿ ಗ್ರಾಮ ಎಂದು ಹೇಳಬಹುದಾಗಿದೆ.

**ಕುಲ ಕಸಬುಗಳು:** ತಲತಲಾಂತರದಿಂದ ಬಂದ ಸಮುದಾಯದ ಕುಲಕಸುಬುಗಳು ಆಧುನಿಕತೆಯ ಪ್ರಭಾವಕ್ಕೆ ಮಣಿದಿರುವುದನ್ನು ಗ್ರಾಮದಲ್ಲಿ ಕಂಡುಬರುತ್ತದೆ. ಬಡಿಗತನ, ಕಮ್ಮಾರಿಕೆ ಕೆಲಸಗಳು ಇಂದು ಯಂತ್ರೋಪಕರಣಗಳಿಂದ ಪ್ರಾವೀಣ್ಯತೆ ಪಡೆಯುತ್ತಿವೆ. ಕಟ್ಟಿಗೆ ಕೊರೆಯುವ ಮತ್ತು ಪಾಲಿಸ್ ಮಿಶಿನ್‌ಗಳು ಬಂದ ಮೇಲೆ ರೈತ ಮತ್ತು ಬಡಗಿ, ಕಮ್ಮಾರರ ಪರಸ್ಪರ ಅವಲಂಬನೆಯ ಸಂಬಂಧಕ್ಕೆ ಸಂಚಕಾರ ಬಂದಿದೆ. ಆಯ ಪದ್ಧತಿ ಇಲ್ಲವಾಗುತ್ತಿದೆ. ಆರೋಗ್ಯಕ್ಕೆ ಪೂರಕವಾಗಿದ್ದ ಚರ್ಮದ ಚಪ್ಪಲಿ ತಯಾರಿಸುವ ಚಮ್ಮಾರಿಕೆ ಕೆಲಸ ಇಂದು ಕಾಣದಾಗಿದೆ. ಕಂಬಳಿ ನೇಯುವ ಕುರುಬನ ಮಗ್ಗಗಳ ಪಳಿಯುಳಿಕೆಗಳು ಇಲ್ಲವಾಗಿವೆ. ಹೀಗೆ ತಲೆತಲಾಂತರದಿಂದ ನಡೆದುಕೊಂಡು ಬಂದ ಕುಲಕಸುಬುಗಳು ಯಂತ್ರ ರಾಜನ ಮಾಯದ ಬಲೆಗೆ ಸಿಕ್ಕು ನುಚ್ಚು–ನೂರಾಗಿವೆ. ಕುಲಕಸಬನ್ನೇ ಅವಲಂಬಿಸಿದ್ದ ಜನ ದಿಕ್ಕು ತೋಚದೆ ಕಂಗಲಾಗಿದ್ದಾರೆ. ಈ ಕುಲಕಸಬುಗಳ ಮೂಲ ವ್ಯವಸ್ಥೆಯನ್ನು ಕೃಷಿಯಲ್ಲಿ ಇಂದು ನಿರೀಕ್ಷಿಸಲು ಸಾಧ್ಯವಿಲ್ಲದಷ್ಟು ಸ್ಥಿತ್ಯಂತರಗಳಾಗಿವೆ. ಗ್ರಾಮದ ಸಾರ್ವತ್ರಿಕ ಉದ್ಯೋಗವೇ ಕೃಷಿ ಮತ್ತು ಕೃಷಿ ಪೂರಕ ಕೆಲಸಗಳಾಗಿದ್ದವು. ಆದರೆ ಅನ್ನದಾತನಾದ ರೈತ ಇಂದು ಸಕಾಲಿಕ ಮಳೆ–ಬೆಳೆ ಇಲ್ಲದೇ ಬೆಳೆದ ಬೆಳೆಗೆ ನ್ಯಾಯಯುತ ಬೆಲೆ ಸಿಗದ ಹಿನ್ನೆಲೆಯಲ್ಲಿ ಅನಿವಾರ್ಯವಾಗಿ ಆಧುನಿಕತೆಯ ಸೋಗಿಗೆ ಮರುಳಾಗಿ ಪಟ್ಟಣದತ್ತ ಅಥವಾ ದೂರದ ಗೋವಾದಂತಹ ರಾಜ್ಯಗಳಿಗೆ ವಲಸೆ ಹೋಗುತ್ತಿದ್ದಾನೆ. ಅದರ ಪರಿಣಾಮವಾಗಿ ಪ್ರಸ್ತುತ ಕಾಲಘಟ್ಟದಲ್ಲಿ ಕೃಷಿ ಮಾಡುವವರೇ ಇಲ್ಲವಾಗುತ್ತಿದ್ದಾರೆ. ಕಡಲಬಾಳು ಗ್ರಾಮದ ಸುತ್ತಮುತ್ತಲ ಗ್ರಾಮಗಳಾದ ಬ್ಯಾಲಾಳು, ಆನಂದದೇವನಹಳ್ಳಿ, ಓಬಳಾಪುರ ಗ್ರಾಮಗಳ ಭೂಮಿ ಹೆಚ್ಚು ಇಳುವರಿ ಕೊಡುತ್ತವೆ. ಅಲ್ಲಿಯ ರೈತರು, ಕೂಲಿಕಾರರಿಗೆ ಸುಗ್ಗಿಯ ದಿನಗಳಲ್ಲಿ ೫೦ ರೂ ಕೂಲಿ ಕೊಡುತ್ತಾರೆ. ಕಡಲಬಾಳು ಗ್ರಾಮ ರೈತರು ತಮ್ಮ ಇಳುವರಿಗನುಗುಣವಾಗಿ ೨೦ ರಿಂದ ೩೦ ರೂ ಕೊಡಲು ಸಾಧ್ಯವಾಗದಿರುವುದರಿಂದ ಕೂಲಿಕಾರರು ಪ್ರತಿದಿನ ಕೂಲಿಗಾಗಿ ಬೇರೆ ಗ್ರಾಮಗಳಿಗೆ ಹೋಗುತ್ತಾರೆ. ಸುಗ್ಗಿಯ ದಿನಗಳಲ್ಲಿ ಟ್ರಾಕ್ಟರ್, ಟ್ರಕ್ ಇತರೆ ಮಿನಿ ವಾಹನಗಳಲ್ಲಿ ಜನರನ್ನು ತುಂಬಿಕೊಂಡು ಹೋಗುತ್ತಾರೆ. ಇದು ಕೂಲಿಕಾರರಿಗೆ ಕೆಲವೇ ದಿನಗಳು ಮಾತ್ರ ಇರುತ್ತದೆ. ಇತ್ತಕಡೆ ಅದೇ ಸುಗ್ಗಿಯ ದಿನಗಳಲ್ಲಿ ಕಡಲಬಾಳು ರೈತರಿಗೆ ಕೃಷಿ ಕೆಲಸಕ್ಕೆ ಕೂಲಿಕಾರರು ಸಿಗುವುದಿಲ್ಲ. ಹೀಗೆ ಪ್ರಸ್ತುತ ಕಾಲದಲ್ಲಿ ಗ್ರಾಮದ ರೈತರು ಮತ್ತು ರೈತ ಕಾರ್ಮಿಕರು ಅತಂತ್ರ ಸ್ಥಿತಿಯನ್ನು ಅನುಭವಿಸುತ್ತಿದ್ದಾರೆ.

**ಆಹಾರ ಪದ್ಧತಿಯಲ್ಲಿಯ ಬದಲಾವಣೆ:** ಗ್ರಾಮದ ರೈತರು ಜೋಳ, ನವಣೆ, ರಾಗಿ, ತೊಗರಿ, ಮಡಿಕೆ ಮುಂತಾದ ಆಹಾರ ಪದಾರ್ಥಗಳನ್ನು ಬೆಳೆಯುತ್ತಿದ್ದರು. ವಾಣಿಜ್ಯ ಬೆಳೆಯಾಗಿ ಶೇಂಗಾ ಬೆಳೆಯುತ್ತಿದ್ದರು. ಇದು ರೈತನ ಮಿತ್ರನಾದ ಎತ್ತು ಮತ್ತು ಪಶುಗಳಿಗೂ ಆಹಾರವಾಗುತ್ತಿತ್ತು.

ಆದರೆ ಇವುಗಳಿಗೆ ಮಾರುಕಟ್ಟೆಯಲ್ಲಿ ಸೂಕ್ತ ಬೆಲೆ ಇರದೇ ಇರುವುದರಿಂದ ಹಾಗೂ ಸರ್ಕಾರ ಪಡಿತರ ವ್ಯವಸ್ಥೆಯ ಮೂಲಕ ಅಕ್ಕಿ, ಗೋಧಿಗಳನ್ನು ಕೊಡಲು ಪ್ರಾರಂಭಿಸಿದ ಮೇಲೆ ಜೋಳದ ಬೆಳೆ ಇಲ್ಲವಾಗುತ್ತಿದೆ. ಬದಲಾಗಿ ವಾಣಿಜ್ಯ ಬೆಳೆಗಳಾಗಿ ಹೆಸರು, ಸೂರ್ಯಕಾಂತಿಗಳನ್ನು ಬೆಳೆಯುತ್ತಿದ್ದಾರೆ. ಇದರಿಂದ ಗ್ರಾಮದ ಪಾರಂಪರಿಕ ಪೌಷ್ಟಿಕ ಆಹಾರದ ಬೆಳೆಗಳಾದ ಜೋಳ, ನವಣೆ, ರಾಗಿ, ಹುರುಳಿಗಳಂತಹ ಬೆಳೆಗಳ ಬೀಜಗಳು ಸಹ ಇಲ್ಲವಾಗುತ್ತಿವೆ. ಪ್ರತಿ ಮನೆಯಲ್ಲಿ ಒಂದು ಎಮ್ಮೆ ಅಥವಾ ಆಕಳು ಇರುತ್ತಿದ್ದವು. ಇದರಿಂದ ಹಾಲು, ಮೊಸರು, ಬೆಣ್ಣೆಯನ್ನು ಊಟಕ್ಕೆ ಉಪಯೋಗಿಸುತ್ತಿದ್ದರು. ಪಚನ ಕ್ರಿಯೆಗೆ ಎಲೆ ಅಡಿಕೆ ಜಗಿಯುವ ಅಜ್ಜನ ಅಮ್ಮನ ಕಾಲವನ್ನು ಇಂದು ಕಾಣಲು ಸಿಗುತ್ತಿಲ್ಲ. ಅದಕ್ಕೆ ಬದಲಾಗಿ ಹಸಿವೆಯಾಗದಂತೆ ತಡೆಯುವ ಬೆಳಗಿನ ಕಾಫಿ, ಹೊಟ್ಟೆ ತುಂಬಿದಂತೆ ಕಂಡರೂ ಶಕ್ತಿ ಬರದ ರೇಶನ್ ಅಕ್ಕಿ ಅನ್ನ, ಅದಕ್ಕೂ ಮಿಗಿಲಾಗಿ ಆಲ್ಕೋಹಾಲ್‌ಗಳತ್ತ ಇಂದಿನ ಜನ ಹೆಚ್ಚು ಒಲವು ತೋರುತ್ತಿರುವುದು ಕಂಡುಬರುತ್ತಿದೆ. 'ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂ' ಎಂಬಂತೆ ವಾಸ್ತವ ಜಗತ್ತಿನ ಮೋಹಕತೆಗೆ ಜನ ಮರುಳಾಗುತ್ತಿದ್ದಾರೆ. ಆದರೂ ಇದು ಗ್ರಾಮವನ್ನು ಇನ್ನೂ ಸಂಪೂರ್ಣವಾಗಿ ಅವರಿಸಿಲ್ಲ. ಇದಕ್ಕೆ ಕಾರಣಗಳು ಹಲವಾರು, ಆದರೆ ಪರಿಹಾರ ಮಾತ್ರ ಸಿಗುತ್ತಿಲ್ಲ. ಈ ಹಿನ್ನೆಲೆಯಲ್ಲಿ ಕಡಲಬಾಳು ಗ್ರಾಮವು ಸಂಪೂರ್ಣವಾಗಿ ಬದಲಾವಣೆಯಾಗಿಲ್ಲ. ಕೆಲವು ಮೂಲ ರೈತಾಪಿ ವರ್ಗದ ಕುಟುಂಬಗಳಲ್ಲಿ ಪಾರಂಪರಿಕ ಆಹಾರ ಪದ್ಧತಿಯೇ ಮುಂದುವರಿದಿದೆ.

## ೭.೩. ಸಾಂಸ್ಕೃತಿಕ ಬದಲಾವಣೆಗಳು

ಸಂಸ್ಕತಿ ಮಾನವ ಜೀವನವನ್ನು ಆವರಿಸಿರುವ ಒಂದು ಪರಂಪರೆ. ಇಂತಹ ಸಾಂಸ್ಕೃತಿಕ ಆಯಾಮಗಳಲ್ಲಿಯೂ ಕಡಲಬಾಳು ಗ್ರಾಮ ಅನೇಕ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಕಂಡುಕೊಂಡಿದೆ.

ಮನುಷ್ಯನ ಹುಟ್ಟಿನಿಂದ ಸಾವಿನವರೆಗೆ ಆಚರಣೆಯಲ್ಲಿದ್ದ ಹಲವಾರು ಆಚರಣೆಗಳು ಕಾಣದಾಗುತ್ತಿವೆ. ಹಿಂದೆ ಹೆರಿಗೆಯನ್ನು ಗ್ರಾಮದ ಸೂಲಗಿತ್ತಿಯು ಮನೆಯಲ್ಲಿ ಮುಗಿಸಿ ಮಗುವಿಗೆ ಆಯಾಧರ್ಮಕ್ಕನುಗುಣವಾಗಿ ವಿವಿಧ ಆಚರಣೆ ಮಾಡಲಾಗುತ್ತಿತ್ತು. ಮಗುವಿನ ಜನನ ಸಮಯದಲ್ಲಿ ಬರುವ ಮಾಂಸವನ್ನು ಮನೆಯ ಮುಂಬಾಗಿಲಿನ ಬಲಭಾಗದಲ್ಲಿ ಹುಗಿಯುತ್ತಿದ್ದರು. ಆದರೆ ಈಗ ಬಹುತೇಕ ಹೆರಿಗೆಗಳು ಆಸ್ಪತ್ರೆಯಲ್ಲಿ ನಡೆಯುವುದರಿಂದ ಅಂತಹ ಆಚರಣೆ ಇಂದು ನಶಿಸಿ ಹೋಗುತ್ತಿದೆ. ಅಷ್ಟೇ ಅಲ್ಲ ಋತುಮತಿಯಾದ ಸಮಯದಲ್ಲಿ ೨೧ ದಿನಗಳವರೆಗೆ ಆರತಿ ಮಾಡುವ ಮೂಲಕ ಪ್ರತಿದಿನ ಸೋಬಾನ ಪದ ಹಾಡುವ ಆಚರಣೆಯೂ ರೂಢಿಯಲ್ಲಿತ್ತು. ಆದರೆ ಆಧುನಿಕತೆಯ ಪ್ರಭಾವದಿಂದಾಗಿ ಇಂದು ೫ ದಿನ

ಕೂರಿಸಿ ಆರತಿ ಮಾಡುವ ಪರಿಪಾಟವಿದೆ. ಅಷ್ಟೇ ಅಲ್ಲ ಮುಂದುವರಿದ ಸಮುದಾಯಗಳಲ್ಲಿ ಇದು ಸಂಪೂರ್ಣವಾಗಿ ನಶಿಸಿ ಹೋಗುತ್ತಿದೆ. ಹಾಗೆಯೇ ಬಾಳ ಸಂಗಾತಿಯ ಆಯ್ಕೆಯಲ್ಲಿ ವರ ಮತ್ತು ಕನ್ನೆಯರನ್ನು ಗುರುತಿಸಿ ನಿಶ್ಚಯಿಸುವುದು ಹಿರಿಯರ ಕೆಲಸವಾಗಿತ್ತು. ಅದಕ್ಕೆ ವಧುವರರು ಒಪ್ಪಿಗೆ ಸೂಚಿಸಲೇ ಬೇಕಾಗಿತ್ತು. ಆದರೆ ಇಂದು ಹಿರಿಯರ ಸಲಹೆ ಸೂಚನೆಗೆ ಯಾವ ಬೆಲೆ ಮತ್ತು ಗೌರವಗಳಿಲ್ಲ. ವಧು-ವರರು ಒಬ್ಬರನೊಬ್ಬರು ಒಪ್ಪಿಕೊಂಡರೆ ಅದಕ್ಕೆ ಹಿರಿಯರು ಅನಿವಾರ್ಯವಾಗಿ ಒಪ್ಪಲೇಬೇಕು. ಇಲ್ಲವಾದರೆ ಅದು ಪ್ರೀತಿಯ ಮದುವೆ ಆಗಿ ಪರಿವರ್ತನೆಯಾಗುವ ಸಂಭವವೇ ಹೆಚ್ಚಾಗಿದೆ. ಇದು ಸಾಂಸ್ಕೃತಿಕ ಸ್ಥಿತ್ಯಂತರಕ್ಕೆ ಉತ್ತಮ ಉದಾಹರಣೆಯಾಗಿದೆ. ಒಂದು ವಾರದವರೆಗೆ ನಡೆಯುವ ಮದುವೆಯ ಕಾರ್ಯಗಳು ಒಂದೇ ದಿನಕ್ಕೆ ಮುಗಿಯುವ ಹಂತಕ್ಕೆ ಬರುತ್ತಿವೆ.

ಈ ಹಿನ್ನೆಲೆಯಲ್ಲಿ ಅಲ್ಲಲ್ಲಿ ಅಂತರ್ ಸಮುದಾಯದ ವಿವಾಹಗಳು ನಡೆಯುತ್ತಿವೆ. ಇದು ಆಧುನಿಕ ಜಗತ್ತಿಗೆ ಒಪ್ಪಿಗೆಯಾದರೂ ಅವರ ಭವಿಷ್ಯದ ಜೀವನ ಸಂಕಷ್ಟಕ್ಕೆ ಸಿಲುಕುವುದು ಹೆಚ್ಚು. ಆದರೂ ಗ್ರಾಮದಲ್ಲಿ ಈ ವಿಚಾರದಲ್ಲಿ ಇನ್ನು ಸಂದಿಗ್ಧತೆ ಕಂಡುಬರುತ್ತಿದೆ. ಮದುವೆಯ ನಂತರದ ಸೀಮಂತ ಮಾಡುವಲ್ಲೂ ನಾಜೂಕತನ ಬಂದಿದೆ. ಅದು ಗೆಳೆಯರ ಬಳಗದ ಸ್ನೇಹಕೂಟದಂತೆಯು ಬದಲಾವಣೆಯಾಗುತ್ತಿದೆ. ಈ ಹಿಂದೆ ಮಗುವಿಗೆ ನಾಮಕರಣ ಮಾಡುವಾಗ ಮನೆಯ ಹಿರಿಯರ ಅಥವಾ ದೇವರ ಹೆಸರು ಇಡುವುದು ಪರಂಪರಗತವಾಗಿತ್ತು. ಉದಾಹರಣೆಗೆ ಕಲ್ಲಪ್ಪ, ಬೀರಪ್ಪ, ಬಸಪ್ಪ, ಪಾರ್ವತೆವ್ವ, ದ್ಯಾಮವ್ವ ಮುಂತಾದವುಗಳು. ಆದರೆ ಇಂದು ಮಾಲಾಶ್ರೀ, ಮಾಧುರಿ, ನವೀನಕುಮಾರ ಮುಂತಾದ ಹೆಸರುಗಳನ್ನು ನಾಮಕರಣ ಮಾಡುತ್ತಿದ್ದಾರೆ.

ಶವಸಂಸ್ಕಾರ ಸಂದರ್ಭದಲ್ಲಿ ನಡೆಯುವ ಪೂಜೆ, ಹಲಗೆ, ವಾದ್ಯ, ಭಜನೆ ಸರ್ವೇಸಾಮಾನ್ಯವಾಗಿದ್ದವು. ಭಜನೆಯನ್ನು ಸ್ವತಃ ೨೦-೩೦ ಜನರ ತಂಡ ಮಾಡುತ್ತಿತ್ತು. ಆದರೆ ಇಂದು ಕೆಲವು ಸಂದರ್ಭದಲ್ಲಿ ಧ್ವನಿಸುರುಳಿಯನ್ನು ಮತ್ತು ಧ್ವನಿವರ್ಧಕಗಳನ್ನು ಬಳಸಲಾಗುತ್ತಿದೆ. ಇದು ಒಂದು ಬಗೆಯ ಶ್ರಮದ ಉಳಿತಾಯದಂತೆ ಕಂಡರೂ ಸಹ ಆಚರಣೆ ಮತ್ತು ಕಲೆಗಳು ನಶಿಸುತ್ತಿವೆ. ಹಬ್ಬ-ಹರಿದಿನಗಳ ಆಚರಣೆಗಳು ಗ್ರಾಮದಲ್ಲಿ ಮುಂದುವರೆದುಕೊಂಡು ಬಂದಿವೆ. ಆದರೆ ಅವುಗಳಲ್ಲಿ ಹಲವಾರು ಮಾರ್ಪಡು ಹಾಗೂ ನಾಜೂಕುತನಗಳನ್ನು ಗುರುತಿಸಬಹುದಾಗಿದೆ. ಉದಾಹರಣೆಗೆ ಗ್ರಾಮಸ್ಥರು ಹತ್ತಿರದ ಸಣ್ಣ ಗುಡ್ಡಕ್ಕೆ ಪ್ರತಿವರ್ಷ ಶ್ರಾವಣ ಮಾಸದ ಕೊನೆಯ ಸೋಮವಾರದ ಪೂರ್ವದಲ್ಲಿ ಬರುವ ಗುರುವಾರ ಹೀಗೆ ಬಿತ್ತನೆ ಮಾಡುವ ಪೂರ್ವದಲ್ಲಿ ಹೋಗಿ ದೇವರಿಗೆ ಪೂಜೆ ಮಾಡಿ ಬರುವುದು ಇದೆ. ಆದರೆ ಆಧುನಿಕ ಜಗತ್ತಿನ ಸಮಯದ ಅಭಾವ ಮತ್ತು ತಾಳ್ಮೆ ಇಲ್ಲದ್ದರಿಂದ ಅದು ಒಂದೇ ದಿನದ ಆಚರಣೆ ಮತ್ತು ಕೆಲವೇ ಜನರ

ಆಚರಣೆಯಾಗಿ ಉಳಿದಿದೆ. ಪ್ರತಿದಿನ ಹಬ್ಬ ಹರಿದಿನಗಳಲ್ಲಿ ವಿಶೇಷ ಪೂಜೆ ಹಬ್ಬದ ಅಡುಗೆಗಳು ನಡೆದುಕೊಂಡು ಬಂದಿವೆಯಾದರೂ ಅವುಗಳು ಸರಳೀಕರಣಗೊಂಡಿರುವುದನ್ನು ಕಾಣುತ್ತೇವೆ.

ಗ್ರಾಮದಲ್ಲಿ ನಡೆಯುವ ಉತ್ಸವಗಳಾದ ಆಂಜನೇಯನ ಜಾತ್ರೆ, ದುರ್ಗಾದೇವಿ ಜಾತ್ರೆ, ಬಸವೇಶ್ವರರ ಜಾತ್ರೆ, ಉತ್ಸವ, ಪುರಾಣ ಮಂಗಲೋತ್ಸವ, ಕಾಳಮ್ಮ ದೈವದ ಆಚರಣೆ ಮುಂತಾದವುಗಳಲ್ಲಿ ಭಜನೆ, ಮೋಹರಂ ಈ ಎಲ್ಲಾ ಆಚರಣೆಗಳಲ್ಲಿ ಗ್ರಾಮದ ಭಕ್ತರು ತನುಮನ ಧನದಿಂದ ಪಾಲ್ಗೊಂಡು ಎಲ್ಲ ಕೆಲಸಕಾರ್ಯಗಳನ್ನು ಜವಾಬ್ದಾರಿಯಿಂದ ನಿರ್ವಹಿಸುತ್ತಿದ್ದರು. ಆದರೆ ಬದಲಾದ ಕಾಲಮಾನದಲ್ಲಿ ಈ ಎಲ್ಲ ಧಾರ್ಮಿಕ ಕಾರ್ಯಗಳಲ್ಲಿ ಜನ ಸಕ್ರಿಯವಾಗಿ ಪಾಲ್ಗೊಳ್ಳದೆ, ತನುಮನ ಧನಗಳಿಂದ ಸಹಕರಿಸದೇ ಕೇವಲ ಪರೋಕ್ಷ ಸಹಕಾರ ಕೊಡುತ್ತಿದ್ದು, ಅವುಗಳ ನಿರ್ವಹಣೆ ಕೇವಲ ಅರ್ಚಕರ ಮತ್ತು ಆಸಕ್ತಿವಹಿಸಿದ ಕೆಲವೇ ಜನರ ಹೆಗಲ ಮೇಲೆ ಬೀಳುತ್ತಿವೆ. ಗ್ರಾಮದಲ್ಲಿ ನಡೆಯುವ ಶ್ರೀ ಗವಿಸಿದ್ದೇಶ್ವರ ಪುರಾಣ, ಬಸವೇಶ್ವರ ದೇವಸ್ಥಾನದಲ್ಲಿ ಶಿವಾನುಭವ ಗೋಷ್ಠಿ, ದೇವಸ್ಥಾನದ ಆಧ್ಯಾತ್ಮಿಕ ಚಿಂತನಾ ಗೋಷ್ಠಿ ಹೀಗೆ ಹಲವಾರು ಸಾಂಸ್ಕೃತಿಕ ಕಾರ್ಯಚಟುವಟಿಕೆಗಳು ಗ್ರಾಮದಲ್ಲಿವೆ. ಗ್ರಾಮದ ವಿವಿಧ ಕಾರ್ಯಕ್ರಮಗಳಲ್ಲಿ ಧಾರ್ಮಿಕ ಆಧ್ಯಾತ್ಮಿಕ ಜಾಗೃತಿಯನ್ನು ಮೂಡಿಸುತ್ತಿದ್ದಾರೆ. ಗ್ರಾಮದಲ್ಲಿರುವ ಯುವಕ ಮಂಡಳಿಗಳು ಸ್ವ-ಸಹಾಯ ಸಂಘಗಳು ಇತ್ತೀಚೆಗೆ ರಚಿತವಾದ ಸ್ವಾಮಿ ವಿವೇಕಾನಂದ ಕಲಾತಂಡ ಶ್ರೀ ಮಾರುತಿ ಕಲಾತಂಡ ಶ್ರೀ ಗವಿಸಿದ್ದೇಶ್ವರ ಪ್ರೌಢಶಾಲೆ ಸಂಸ್ಥೆಯ ವಿದ್ಯಾರ್ಥಿ ಒಕ್ಕೂಟ ಮುಂತಾದ ಸಂಸ್ಥೆಗಳು ವಿವಿಧ ಹಂತಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳ ಮೂಲಕ ಗ್ರಾಮದಲ್ಲಿ ಅನ್ಯೋನ್ಯತೆಯ ವಾತಾವರಣ ನಿರ್ಮಾಣಗೊಳ್ಳುತ್ತಿದೆ. ಇಂತಹ ಕಾರ್ಯಕ್ರಮಗಳಿಗೆ ಗ್ರಾಮದ ಹಿರಿಯರು ರಾಜಕೀಯ ನಾಯಕರುಗಳು ಸಹಕರಿಸುತ್ತಿದ್ದಾರೆ. ಇದರಿಂದ ಕಾರ್ಯಕ್ರಮಗಳು ಸುಸೂತ್ರ ಹಾಗೂ ಆಕರ್ಷಣೀಯ ನಿರ್ವಾಹಕರಾಗಿ ಗ್ರಾಮದ ಬ್ಯಾಟಿ ಹನುಮಂತಪ್ಪ ಶಿಕ್ಷಕರು ಹಾಗೂ ರಾಮಣ್ಣ ಕಲಾಲ ಅವನ್ನೊಳಗೊಂಡ ಗೆಳೆಯರ ಗುಂಪು ಸದಾ ತಯಾರಿಯಲ್ಲಿರುತ್ತದೆ. ಹೀಗೆ ಕಡಲಬಾಳು ಗ್ರಾಮವು ಪರಂಪರೆ ವಿವಿಧ ಹಬ್ಬ-ಹರಿದಿನಗಳ ಆಚರಣೆ ಸಂಪ್ರದಾಯಗಳಲ್ಲಿ ಹಲವಾರು ಬದಲಾವಣೆಗಳನ್ನು ಕಂಡಿದ್ದರೂ ಸಹ ಸಂಸ್ಕೃತಿಯ ಮೂಲಬೇರುಗಳು ಇನ್ನೂ ಗಟ್ಟಿಯಾಗಿ ಉಳಿದುಕೊಂಡಿವೆ. ಆದರೆ ಅವುಗಳು ವಿವಿಧ ರೂಪಗಳನ್ನು ಪಡೆದುಕೊಂಡು ಕವಲುಗಳಾಗಿ ಬೆಳೆಯುತ್ತಿವೆ. ಇದು ನಮ್ಮ ಜನಪದರ ಪುನರ್‌ಸೃಷ್ಟಿಯ ನಿಯಮಕ್ಕೆ ಅನುಗುಣವಾಗಿಯೇ ನಡೆದಿದೆ ಎಂದು ಹೇಳಬಹುದು.

### ೭.೪. ಶೈಕ್ಷಣಿಕ ಬದಲಾವಣೆಗಳು

ಶಿಕ್ಷಣ ಕೇವಲ ಮೇಲ್ವರ್ಗದವರ ಸ್ವತ್ತು ಎಂಬ ಭಾವನೆಯನ್ನು ನಮ್ಮ ಪ್ರಾಚೀನ ಸಮಾಜದಿಂದಲೂ ಬೆಳೆದು ಬಂದಿರುವ ಒಂದು ನಂಬಿಕೆ. ಅದನ್ನು ಯಾರು ತೇಲಿ ಬಿಟ್ಟರು

ಎಂಬುದಕ್ಕಿಂತ ಅದನ್ನು ತಲೆತಲಾಂತರದಿಂದ ಹಾಗೆಯೇ ಉಳಿಸಿಕೊಂಡು ಬಂದಿರುವುದನ್ನು ಗಮನಿಸಿದರೆ ನಮ್ಮ ಸಮಾಜದ ಪಾರಂಪರಿಕ ಬದ್ಧತೆಯ ಅರಿವು ನಮಗಾಗುತ್ತದೆ. ಆ ಹಿನ್ನೆಲೆಯಲ್ಲಿ ಕಡಲಬಾಳು ಗ್ರಾಮವು ಅದನ್ನು ಪರಿಪಾಲಿಸಿಕೊಂಡು ಬಂದಿತ್ತು. ಆದರೆ ಆಧುನಿಕತೆಯ ಪ್ರಭಾವ ಹಾಗೂ ಸರ್ಕಾರದ ಸಾರ್ವತ್ರಿಕ ಶಿಕ್ಷಣ ಕ್ರಾಂತಿಯ ಫಲವಾಗಿ ಇಂದು ಗ್ರಾಮದ ಶಿಕ್ಷಣದ ಸ್ಥಿತಿಗತಿಯು ಸಾರ್ವತ್ರಿಕವಾಗಿ ಸುಧಾರಣೆಯಾಗಿದೆ. ಈಗ ಒಂದು ನೂರು ವರ್ಷಗಳ ಹಿಂದೆ ಗ್ರಾಮದ ಶ್ರೀ ಗವಿಸಿದ್ದೇಶ್ವರ ದೇವಸ್ಥಾನದಲ್ಲಿ ಒಂದು ಪ್ರೌಢಶಾಲೆ ಮಾತ್ರ ಇತ್ತು ಎಂದು ನಮಗೆ ಹಿರಿಯರಿಂದ ತಿಳಿದುಬರುತ್ತದೆ. ಆದರೆ ಶಾಲೆಗೆ ಹೋಗುವವರ ಸಂಖ್ಯೆ ವಿರಳವಾಗಿತ್ತು. ಅಷ್ಟೊಂದು ಶೈಕ್ಷಣಿಕವಾಗಿ ಕೆಳಹಂತದಲ್ಲಿದ್ದ ಗ್ರಾಮದಲ್ಲಿ ಈಗ ೧. ಸರ್ಕಾರಿ ಶಿಕ್ಷಣ ಸಂಸ್ಥೆಗಳು, ೨. ವಯಸ್ಕರ ಶಿಕ್ಷಣ ಕೇಂದ್ರಗಳು, ೩. ರಾತ್ರಿ ಶಾಲೆ(ಮನೆ ಪಾಠ) ಸೇರಿದಂತೆ ೧೧೦೦ ವಿದ್ಯಾರ್ಥಿಗಳು ೮ ಗ್ರಾಮದ ಶಿಕ್ಷಣ ಸಂಸ್ಥೆಗಳಲ್ಲಿ ಅಭ್ಯಾಸ ಮಾಡುತ್ತಿರುವುದನ್ನು ಗಮನಿಸಿದರೆ ಗ್ರಾಮವು ಶೈಕ್ಷಣಿಕವಾಗಿ ಮುಂದುವರೆದಿರುವುದು ಸ್ಪಷ್ಟವಾಗುತ್ತದೆ. ಗ್ರಾಮದಲ್ಲಿ ೫೦ ಜನ ಪದವೀಧರರಿದ್ದು, ೨ ಜನ ವೈದ್ಯಕೀಯ ಪದವಿ, ೧೦ ಜನ ಸ್ನಾತಕೋತ್ತರ ಪದವೀಧರರನ್ನು ಗ್ರಾಮವು ಪಡೆದಿದೆ. ಗ್ರಾಮದ ಶೈಕ್ಷಣಿಕ ಪ್ರಗತಿ ಬಹು ವೇಗದಲ್ಲಿರುವುದನ್ನು ಸೂಚಿಸುತ್ತದೆ. ಅದರಲ್ಲೂ ಹಿಂದುಳಿದ ವರ್ಗಗಳ ಮಕ್ಕಳು ಉನ್ನತ ಶಿಕ್ಷಣ ಪಡೆದಿರುವುದು ವಿಶೇಷವಾಗಿದೆ. ಕೃಷಿ ಮಾಡುತ್ತಿದ್ದರೂ ಈಗ ಕೆಲವು ಕೃಷಿಯೇತರ ಕಾರ್ಯಗಳಲ್ಲಿ ತೊಡಗಿದ್ದು, ಸ್ವಲ್ಪಮಟ್ಟಿಗೆ ಆರ್ಥಿಕ ಸ್ವಾವಲಂಬನೆ ಸಾಧಿಸುತ್ತಿದ್ದಾರೆ. ಗ್ರಾಮದಲ್ಲಿ ಇತ್ತೀಚಿನ ಕಾಲಘಟ್ಟದಲ್ಲಿ ಸರ್ಕಾರಿ ನೌಕರರಿಗೆ ಸೇರುವವರ ಸಂಖ್ಯೆ ಏರಿಕೆ ಕ್ರಮದಲ್ಲಿದೆ. ಸುಮಾರು ೭೦ ಜನ ಸರ್ಕಾರಿ ನೌಕರಿಯಲ್ಲಿದ್ದಾರೆಯಾದರೂ ಇತರ ಗ್ರಾಮಗಳಿಗೆ ಹೋಲಿಸಿದರೆ ಇದು ಬಹಳ ಕಡಿಮೆ ಎಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ಗ್ರಾಮದಲ್ಲಿ ಶೈಕ್ಷಣಿಕ ಪ್ರಗತಿಯ ವೇಗಕ್ಕೆ ಹೋಲಿಸಿದರೆ ಆರ್ಥಿಕ ಪ್ರಗತಿ ಕುಂಟಿತಗೊಂಡಿದೆ ಎಂದು ಹೇಳಬಹುದು. ಗ್ರಾಮದ ಜನರ ಜೀವನಮಟ್ಟ ಸುಧಾರಣೆಗೆ ಪೂರಕ ಆಕರಗಳ ಕೊರತೆ ಇದೆ. ಅದು ವಲಸೆಯ ಪ್ರಮಾಣವನ್ನು ಹೆಚ್ಚಿಸಿದೆ. ಸರ್ಕಾರ ಆರ್ಥಿಕ ಭದ್ರತೆಗಾಗಿ ವಿವಿಧ ಯೋಜನೆಗಳ ಮೂಲಕ ನೆರವು ನೀಡುತ್ತಿದೆ. ಆದರೂ ಈ ಯೋಜನೆಯನ್ನು ಬಹುತೇಕ ಫಲಾನುಭವಿಗಳು ಜೀವನದ ಸಾರ್ವಕಾಲಿಕ ಅಭಿವೃದ್ಧಿಗಾಗಿ ಬಳಸಿಕೊಳ್ಳದೆ ಸರ್ಕಾರಿ ಯೋಜನೆಗಳ ಲಾಭವು ಒಂದು ರೀತಿಯ ಪರಿಹಾರದಂತೆ ಬಳಕೆಯಾಗುತ್ತಿದೆ, ಗ್ರಾಮದ ಹಳೆಯ ತಲೆಮಾರಿನ ಜನ ತಮ್ಮ ಹಣ ಸಂಪತ್ತನ್ನು ಗಡಿಗೆಯಲ್ಲಿ ಹಾಕಿ ನೆಲದಲ್ಲಿ ಹೂಳುತ್ತಿದ್ದರು ಅಥವಾ ಗ್ರಾಮದ ಶ್ರೀಮಂತರ ಮನೆಯಲ್ಲಿ ಇಡುತ್ತಿದ್ದರು. ಗ್ರಾಮದಲ್ಲಿರುವ ಶಿಕ್ಷಣ ಸಂಸ್ಥೆಗಳಿಗೆ ಸರ್ಕಾರ, ಶಾಲಾ ಆಡಳಿತ ಮಂಡಳಿ ರಚಿಸಲು ಅವಕಾಶ ಕೊಟ್ಟಿದ್ದು, ಶೈಕ್ಷಣಿಕ ಪ್ರಗತಿಯ ಬದಲಾಗಿ ಗ್ರಾಮದಲ್ಲಿ

ಶಾಲಾ ಆಡಳಿತದ ಅಧಿಕಾರದ ಕಚ್ಚಾಟಕ್ಕೆ ಎಡೆ ಮಾಡಿಕೊಟ್ಟಿದೆ. ಅಂತಹ ಸಮಸ್ಯೆಗಳ ನಡುವೆಯು ಗ್ರಾಮದ ಸರ್ಕಾರಿ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿ ಗ್ರಾಮದ ಮಕ್ಕಳಲ್ಲಿರುವ ಪ್ರತಿಭೆಗಳನ್ನು ಗುರುತಿಸಿ ಬೆಳೆಸಿದ್ದಾರೆ. ಅದರ ಪರಿಣಾಮವಾಗಿ ಇಂದು ಗ್ರಾಮದಲ್ಲಿ ಉನ್ನತ ಶಿಕ್ಷಣದ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗಿದೆ. ಒಟ್ಟಾರೆ ಸರ್ಕಾರದ ಶಿಕ್ಷಣ ಪರ ಯೋಜನೆಗಳು ಹಾಗೂ ಶಿಕ್ಷಣದ ಸಾರ್ವತ್ರಿಕ ಕ್ರಾಂತಿಯ ಫಲವಾಗಿ ಗ್ರಾಮದಲ್ಲಿ ಶೈಕ್ಷಣಿಕ ಪ್ರಗತಿಯನ್ನು ಸ್ಥಿತ್ಯಂತರ ಎಂದು ಹೇಳುವುದಕ್ಕಿಂತ ಶೈಕ್ಷಣಿಕ ಪ್ರಗತಿಯ ನೋಟ ಎಂದು ಹೇಳಬಹುದಾಗಿದೆ.

**೭.೫. ಆರ್ಥಿಕ ಬದಲಾವಣೆ**

"ಕಾಂಚಾಣಂ ಕಾರ್ಯಸಿದ್ಧಿ" ಎನ್ನುವಂತೆ ಪ್ರಸಕ್ತ ಕಾಲಘಟ್ಟದಲ್ಲಿ ಪ್ರಗತಿ ಎಂಬುದು ಪ್ರಧಾನವಾಗಿ ಆರ್ಥಿಕತೆಯ ಪ್ರಗತಿಯನ್ನು ಪ್ರತಿಬಿಂಬಿಸುತ್ತದೆ. ಈ ದೆಸೆಯಲ್ಲಿ ಗ್ರಾಮದ ಜನರ ಸಾರ್ವತ್ರಿಕ ಬದಲಾವಣೆಯ ಕೆಲ ಅಂಶಗಳನ್ನು ಗುರಿತಿಸಬಹುದಾಗಿದೆ. ಗ್ರಾಮದಲ್ಲಿರುವ ಬಹುಪಾಲು ಜನರ ಪ್ರಧಾನ ಉದ್ಯೋಗ ಕೃಷಿ ಆಧಾರಿತವಾಗಿದ್ದು, ಅದು ಕೇವಲ ಜೀವನ ನಿರ್ವಹಣೆಗಾಗಿ ಎಂಬಂತಿತ್ತು. ಇತ್ತೀಚಿನ ಕಾಲಘಟ್ಟದಲ್ಲಿ ಕೃಷಿಯಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಆದರೂ ಅದು ಮಳೆರಾಯನೊಂದಿಗೆ ಆಡುವ ಚೆಲ್ಲಾಟವಾಗಿದೆ. ಇಂದು ಗ್ರಾಮದಲ್ಲಿ ಕರ್ನಾಟಕ ವಿಕಾಸ ಗ್ರಾಮೀಣ ಬ್ಯಾಂಕ್ ಇದ್ದು, ಗ್ರಾಮದ ಹಾಗೂ ಸುತ್ತಲ ಗ್ರಾಮಗಳ ಜನರಿಗೆ ವ್ಯವಹಾರ ಸೇವೆಯನ್ನು ಒದಗಿಸಿದೆ. ಜೊತೆಗೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ ಸಹ ರೈತರ ಅಭಿವೃದ್ಧಿಗಾಗಿ ಶ್ರಮಿಸುತ್ತಿದೆ. ಗ್ರಾಮದ ಹಾಲು ಉತ್ಪಾದಕರ ಸಹಕಾರ ಸಂಘವು ಹೈನುಗಾರಿಕೆಯನ್ನು ಉತ್ತೇಜಿಸಿದೆ."[೧]

**೭.೬. ಸಾಹಿತ್ಯ ಮತ್ತು ಕಲೆ**

ಜನಪದ ಸಾಹಿತ್ಯ ಮತ್ತು ಜನಪದ ಕಲೆಯಲ್ಲಿ ಗ್ರಾಮವು ಸಂಪದ್ಭರಿತವಾಗಿದೆ. ಆದರೆ ಶಿಷ್ಟ ಸಾಹಿತ್ಯವನ್ನು ಅವಲೋಕಿಸಿದಾಗ ಗ್ರಾಮದಲ್ಲಿ ಗುರುತರವಾದ ಸಾಧನೆಗಳು ಕಂಡುಬರುವುದಿಲ್ಲ. ಗ್ರಾಮದಲ್ಲಿ ದೊಡ್ಡಾಟ, ಸಣ್ಣಾಟ, ಭಜನೆ, ಡೊಳ್ಳು, ಕೈಪಟ್ಟು, ಡೊಳ್ಳಿನ ಹಾಡು, ವೀರಗಾಸೆ, ಮೊಹರಂ ಹಾಡು, ಹೋಳಿಹಾಡು, ನಂದಿಕೋಲು ಕುಣಿತ, ಸೋಬಾನೆ ಪದ ಮುಂತಾದ ಕಲಾವಿದರು, ಪುರಾಣ ಪ್ರವಚನಕಾರರು ಪಾರಂಪರಿಕವಾಗಿ ಅವುಗಳನ್ನು ಬೆಳೆಸಿಕೊಂಡು ಬಂದಿದ್ದಾರೆ. ಗ್ರಾಮದಲ್ಲಿ ಅವರ ಪ್ರದರ್ಶನಗಳು ಸಾಂಪ್ರದಾಯಿಕ ಆಚರಣೆಗಳಂತೆ ಮುಂದು ವರೆದಿವೆ. ಅದರಲ್ಲೂ ಗ್ರಾಮದ ವೀರಭದ್ರೇಶ್ವರ ಯುವಕ ಮಂಡಳಿ ಮತ್ತು ಕಲ್ಲೇಶ್ವರ ಯುವಕ ಮಂಡಳಿಗಳು ದೊಡ್ಡಾಟ ಮತ್ತು ಸಣ್ಣಾಟ ಪ್ರದರ್ಶನದಲ್ಲಿ ರಾಜ್ಯಮಟ್ಟದ ಯುವಜನ ಮೇಳದಲ್ಲಿ

ಪ್ರದರ್ಶನ ಮಾಡಿ ಪ್ರಶಸ್ತಿ ಪಡೆದುಕೊಂಡಿವೆ. ಆದರೆ ಜಾಗತೀಕರಣ ಮತ್ತು ಆಧುನೀಕರಣದ ಪ್ರಭಾವದ ನಡುವೆಯು ಕಡಲಬಾಳು ಗ್ರಾಮದಲ್ಲಿ ಜನಪದ ಸಾಹಿತ್ಯ ಮತ್ತು ಕಲೆಗಳು ಉಳಿದುಕೊಂಡು ಬಂದಿರುವುದು ಗ್ರಾಮದ ಹಿರಿಮೆಯನ್ನು ಎತ್ತಿ ಹಿಡಿಯುತ್ತಿವೆ. ಅವುಗಳನ್ನು ಉಳಿಸಿ ಬೆಳೆಸಲು ಸಾಹಿತಿಗಳನ್ನು ಕಲಾವಿದರನ್ನು ಗುರುತಿಸಿ ಅವರಿಗೆ ಜೀವನದ ನಿರ್ವಹಣೆಗೆ ಅಗತ್ಯ ಗೌರವಧನ ನೀಡುವ ಮೂಲಕ ಅವರನ್ನು ಗೌರವಿಸುವುದು ಸರಕಾರ ಮತ್ತು ಸಂಘ ಸಂಸ್ಥೆಗಳ ಕಾರ್ಯವಾಗಿದೆ.

ಒಟ್ಟಾರೆ ಗ್ರಾಮೀಣ ಪರಿಸರದ ಸಂಸ್ಕೃತಿಯು 'ಕೆಟ್ಟು ಪಟ್ಟಣ ಸೇರು' ಎಂಬ ನಾಣ್ಣುಡಿಯಂತೆ ಪಾಶ್ಚಾತ್ಯ ಸಂಸ್ಕೃತಿ ಪ್ರಭಾವ ಹಾಗೂ ಸಮೂಹ ಸಂವಹನ ಮಾಧ್ಯಮಗಳಿಂದ ಹಳ್ಳಿಗಳು ಮೊದಲಿನ ಭವ್ಯ ಪರಂಪರೆಯಿಂದ ದೂರಸರಿಯುತ್ತವೆ. ಆದರೆ ಜಾಗತೀಕರಣ, ಆಧುನೀಕರಣವನ್ನು ಸಂಪೂರ್ಣವಾಗಿ ವಿರೋಧಿಸಲು ಬರುವುದಿಲ್ಲ.

ಎಣ್ಣೆ ಬೇರೆ ಬತ್ತಿ ಬೇರೆ
ಎರಡೂ ಕೂಡಿ ಸುಟ್ಟರಾಯಿತು
ಪುಣ್ಯ ಬೇರೆ ಪಾಪ ಬೇರೆ
ಎರಡು ಕೂಡಿ ಒಡಲಾಯಿತು

ಎಂಬ ಅಲ್ಲಮಪ್ರಭುಗಳ ವಾಣಿಯಂತೆ ಜಾಗತೀಕರಣದಿಂದ ಒಳ್ಳೆಯ ಪರಿಣಾಮವು ಆಗುತ್ತದೆ ಮತ್ತು ಕೆಟ್ಟ ಪರಿಣಾಮವು ಉಂಟಾಗುತ್ತದೆ. ಆದ್ದರಿಂದ ಇವೆರಡನ್ನು ಅಗತ್ಯಕ್ಕನುಗುಣವಾಗಿ ಸದ್ವಿನಿಯೋಗವಾದ ರೀತಿಯಲ್ಲಿ ಬಳಕೆ ಮಾಡಿಕೊಂಡು ಸಮತೋಲನ ಕಾಪಾಡಿಕೊಂಡಲ್ಲಿ ಗ್ರಾಮಗಳು ಆರೋಗ್ಯಯುತ ಅಭಿವೃದ್ಧಿ ಹೊಂದಲು ಸಾಧ್ಯವಿದೆ.

ಅಧ್ಯಾಯ ಎಂಟು

# ಉಪಸಂಹಾರ

ಭಾರತ ಸಂಸ್ಕೃತಿಯು ವೈವಿಧ್ಯಮವಾಗಿದ್ದು, ನಮ್ಮ ಪ್ರಾಚೀನ ಸಂಸ್ಕೃತಿಯನ್ನು, ಹಿರಿಮೆಯನ್ನು ತಿಳಿಸುವ ಜೊತೆಗೆ ಸಮಾನತೆಯ ಸಂಸ್ಕೃತಿಯನ್ನು ಬೆಳೆಸುತ್ತದೆ. ಪ್ರಾಚೀನ ಸಂಸ್ಕೃತಿಯನ್ನು ಉಳಿಸುತ್ತ ಆಧುನಿಕತೆಯ ಜೊತೆಗೆ ಅವರ ಸಾಹಿತ್ಯ ಕಲೆ ಸಂಸ್ಕೃತಿ ಬೆಳೆಸುತ್ತ ಹೊಸ ಜೀವನದ ಮೌಲ್ಯಗಳನ್ನು ತಿಳಿಸುತ್ತದೆ. ಬದುಕನ್ನು ಬೆಳೆಸಲು ವಿಕಾಸಗೊಳಿಸಲು ಬದುಕಿಗೆ ಅನೇಕ ರೀತಿಯಲ್ಲಿ ಮಹತ್ವವಾಗುತ್ತವೆ. ಜನಪದ ಬದುಕಿನ ಭಾಗವಾಗಿರುವ ಆಚಾರ, ವಿಚಾರ ಅನೇಕ ರೀತಿಗಳು ಮಹತ್ವವಾಗುತ್ತವೆ. ಜನಪದ ಬದುಕಿನ ಅಂಶವನ್ನು ತಿಳಿಸುತ್ತವೆ. ಹೊಸ ಜೀವನದ ಹುಚ್ಚು ಬರುವಿಕೆಗೆ ದಾರಿಯಾಗಿದೆ.

ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವ–ಸಮೂಹ ಮಾಧ್ಯಮಗಳಾದ ಚಲನಚಿತ್ರ, ದೂರದರ್ಶನದ ಪ್ರಭಾವದಿಂದ ಗ್ರಾಮಗಳು ಮೂಲ ಪರಂಪರೆಯಲ್ಲಿ ಬದಲಾವಣೆಯಾಗುತ್ತಿವೆ. ಆದ್ದರಿಂದ ಜಾಗತಿಕ ಮಟ್ಟದಲ್ಲಿ ಭಾರತೀಯ ಗ್ರಾಮಗಳು ವೈಶಿಷ್ಟಪೂರ್ಣವಾದ ಸಂಸ್ಕೃತಿಯನ್ನು ಹೊಂದಿವೆ.

'ಹಳ್ಳಿಯಿಂದಲೇ ದಿಲ್ಲಿ' ಎಂಬಂತೆ ಯಾವುದೇ ಒಂದು ಪ್ರದೇಶದ ಹಾಗೂ ಆ ಪ್ರದೇಶದ ಜನಸಮುದಾಯಗಳ ಸಾಂಸ್ಕೃತಿಕ ಸ್ಥಿತಿಯನ್ನು ನೋಡಬೇಕಾದರೆ ಭೂಮಿಯ ಮೇಲೆ ಮನುಷ್ಯನ ನೆಲೆಗಳು ಹಾಗೂ ಆತನ ಜೀವನದ ವಿಧಾನಗಳು ಮತ್ತು ನಿಸರ್ಗದೊಡನೆ ಆತನ ಸಂಬಂಧ, ಅಲ್ಲಿನ ಪರಿಸರ, ವಾಯುಗುಣ, ಸಂಪತ್ತು, ಪ್ರಾಣಿ ಸಂಪತ್ತನ್ನು ಗಮನಿಸಿದಾಗ ಹಾಗೂ ಕೆರೆ, ತೋಟ, ಹಳ್ಳ, ಹೊಲ, ಗದ್ದೆಗಳು ತನ್ನ ಸುತ್ತಮುತ್ತಲಿರಿಸಿಕೊಂಡಿರುತ್ತವೆ. ಚಾರಿತ್ರಿಕವಾಗಿ ನೋಡಿದಾಗ ವೈಭವಯುತವಾಗಿ ಇದೆ ಎಂಬುದು ತಿಳಿಯುತ್ತದೆ. ಕಡಲಬಾಳು ಗ್ರಾಮದ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ, ಧಾರ್ಮಿಕ ಸ್ಥಿತಿಗಳು ಬಹಳ ಉತ್ತಮವಾಗಿವೆ ಎಂಬುದು ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ಕಡಲಬಾಳು ಗ್ರಾಮವನ್ನು

ಅಧ್ಯಯನ ಮಾಡಲಾಗಿದೆ. ಇದೊಂದು ಪರಿಚಯಾತ್ಮಕ ಹಾಗೂ ಮಾಹಿತಿ ಪ್ರಧಾನ ಅಧ್ಯಯನವಾಗಿದ್ದು, ಅಲ್ಲಲ್ಲಿ ವಿಶೇಷ ಅಂಶಗಳನ್ನು ಹಾಗೂ ಅಗತ್ಯ ವಿಶ್ಲೇಷಣೆಗಳನ್ನು ಮಾಡುವ ಪ್ರಯತ್ನ ಮಾಡಲಾಗಿದೆ. ಕಡಲಬಾಳು ಗ್ರಾಮದ ಕುರಿತು ಬಹುತೇಕ ವಿಷಯಾಂಶವನ್ನು ಕ್ಷೇತ್ರಕಾರ್ಯದಿಂದಲೇ ಸಂಗ್ರಹಿಸಲಾಗಿದೆ. ಆದ್ದರಿಂದ ಇದೊಂದು ಕ್ಷೇತ್ರಕಾರ್ಯ ಆಧಾರಿತವಾದ ಅಧ್ಯಯನವಾಗಿದೆ.

ಅಧ್ಯಯನದ ಬಹುಪಾಲು ಅಂಶಗಳನ್ನು ಸ್ವತಃ ಅವಲೋಕನ, ಸಂದರ್ಶನ ಹಾಗೂ ಧ್ವನಿ ಸುರುಳಿ, ಛಾಯಾಚಿತ್ರಗಳ ಮೂಲಕ ದಾಖಲಿಸಲಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗ್ರಾಮಸ್ಥರು ಹೆಚ್ಚು ಸ್ಪಂದಿಸಿದ್ದು ವಿಶೇಷವಾಗಿದೆ. ಹಿರಿಯರಾದ ಹನುಮಂತಪ್ಪ ಪೂಜಾರಿ ಅವರು ಗ್ರಾಮದ ಹಲವಾರು ಮಾಹಿತಿಗಳನ್ನು ಹಾಗೂ ವಿಶೇಷತೆಗಳನ್ನು ತಿಳಿಸುವ ಮೂಲಕ ಆ ಕೊರತೆಯನ್ನು ನೀಗಿಸಿದ್ದಾರೆ. ಇವರ ಪರಂಪರೆಯಲ್ಲಿ ಬೆಳೆದ ಗ್ರಾಮದ ಹಿರಿಯರು ಸಾಂದರ್ಭಿಕವಾಗಿ ಅಧ್ಯಯನಕ್ಕೆ ಸ್ಪಂದಿಸಿದ್ದಾರೆ. ಅವರ ಮಾಹಿತಿ ವಕ್ತೃಗಳ ಪಟ್ಟಿಯಲ್ಲಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಶಾಸನಗಳು, ದೇವಾಲಯಗಳ ಛಾಯಾಚಿತ್ರಗಳನ್ನು ತೆಗೆಯುವಾಗ ಅವುಗಳ ಕುರಿತು ಮಾಹಿತಿಗಳನ್ನು ಸಂಗ್ರಹಿಸಲಾಗಿದೆ.

ಗ್ರಾಮದ ಜನರಲ್ಲಿರುವ ಸಾಂಸ್ಕೃತಿಕ ಶ್ರೀಮಂತಿಕೆಯ ಅರಿವು ಅವರಿಗಿಲ್ಲ. ಜಾನಪದೀಯ ಕ್ಷೇತ್ರಕಾರ್ಯಗಳು ಸಹಜತೆ ಹೊಂದಿರಬೇಕು ಹಾಗೂ ವಕ್ತೃಗಳಿಗೆ ಗೊತ್ತಾಗದಂತೆ ಅವಲೋಕನ ಹಾಗೂ ದಾಖಲೆ ಮಾಡಿಕೊಳ್ಳಬೇಕೆಂದು ತಿಳಿಯಲಾಗಿದೆ. ಅಧ್ಯಯನ ಮಾಡುವಾಗ ಕ್ಷೇತ್ರಕಾರ್ಯದ ವಿಧಾನಗಳಿಗೆ ಹೀಗೆಯೇ ಮಾಡಬೇಕು ಎಂದು ಕಟ್ಟು ಬೀಳದೆ ಸಮಯ ಸನ್ನಿವೇಶಗಳಿಗೆ ತಕ್ಕಂತೆ ವಕ್ತೃಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ. ಏಕೆಂದರೆ ಜನಪದರನ್ನು ನಿರ್ದಿಷ್ಟ ಸಮಯದಲ್ಲಿ ಹಿಡಿದಿಡುವುದು ಕಷ್ಟ ಸಾಧ್ಯ. ಆದ್ದರಿಂದ ಗುಡಿಗಳಲ್ಲಿ, ಕಟ್ಟೆಯ ಮೇಲೆ, ಬಸ್ಸಿನಲ್ಲಿ ಸಿಕ್ಕಾಗ ಅಥವಾ ಹೊಲಕ್ಕೆ ಹೋದಾಗ ಆಕಸ್ಮಿಕವಾಗಿ ಸಿಕ್ಕ ವ್ಯಕ್ತಿಗಳನ್ನು ಇದಕ್ಕೆ ಬಳಸಿಕೊಳ್ಳಲಾಗಿದೆ. ಇಂತಹ ಘಟನೆಗಳು ಕ್ಷೇತ್ರಕಾರ್ಯದಲ್ಲಿ ಆಕಸ್ಮಿಕ ಭೇಟಿಯಾದಾಗ ಮಾತ್ರ ನಡೆದಿದೆ.

ಗ್ರಾಮದ ಭೌಗೋಳಿಕ ಪರಿಸರ ಹಾಗೂ ಭೌತಿಕ ಮಾಹಿತಿಗಳು ಇತರೆ ಗ್ರಾಮಗಳಂತೆ ಇವೆಯಾದರೂ, ಗ್ರಾಮದ ನಿರ್ದಿಷ್ಟ ಅಂಶಗಳನ್ನು ಪರಿಚಯಿಸಲಾಗಿದೆ. ಗ್ರಾಮದ ಕೆಲವು ದೇವಾಲಯಗಳು ಚಾರಿತ್ರಿಕ ಹಿನ್ನೆಲೆಯಿಂದ ಬಂದಿರುವುದನ್ನು ಹಾಗೂ ಕೆಲವು ದೇವಾಲಯ ಮತ್ತು ದೈವಗಳು ಜನಪದೀಯ ಹಿನ್ನೆಲೆಯಿಂದ ಹೊಂದಿರುವುದರಿಂದ ಅವುಗಳನ್ನು ಗ್ರಾಮಸ್ಥರಲ್ಲಿರುವ ಮೌಖಿಕ ಪರಂಪರೆಯ ಮೂಲಕ ದಂತಕತೆ, ಪವಾಡ, ನಂಬಿಕೆಗಳನ್ನು ಆಧರಿಸಿಯೇ ನೋಡಲಾಗಿದೆ. ಆದರೆ ಇದೇ ಅಧಿಕೃತವಲ್ಲ ಎಂಬುದನ್ನು ತಿಳಿಯಲಾಗಿದೆ.

ಗ್ರಾಮದ ಜನಪದರ ಬದುಕು ಇತರೆ ಗ್ರಾಮಗಳಂತೆಯೇ ಹಲವಾರು ಅಂಶಗಳಲ್ಲಿ ಸಾಮ್ಯತೆಯನ್ನು ಹೊಂದಿದೆ. ಅಧ್ಯಯನದಲ್ಲಿ ಮೂಡಿಬಂದ ಬಹುತೇಕ ವಿಷಯ ಅಂಶಗಳನ್ನು ನೋಡಿದಾಗ 'ಹೇಳಿದ್ದೇಳೋ ಕಿಸಬಾಯಿದಾಸ' ಎಂಬ ಜನಪದರ ಮಾತು ಅನ್ವಯವಾಗಬಹುದು. ಆದರೆ ಕಡಲಬಾಳು ಗ್ರಾಮದಲ್ಲಿರುವ ಜನಪದರ ಸಾಮಾಜಿಕ ವ್ಯವಸ್ಥೆಯಲ್ಲಿ ಹಲವಾರು ವಿಭಿನ್ನತೆ ಹಾಗೂ ವಿಶೇಷತೆ ಗಳನ್ನು ಕಾಣಬಹುದು. ಏಕೆಂದರೆ ಅವರ ಸಾಮಾಜಿಕ ವ್ಯವಸ್ಥೆಯಲ್ಲಿರುವ ಸಾಮರಸ್ಯದ ಬದುಕು ಆಧುನಿಕ ಸಮಾಜಕ್ಕೆ ಮಾದರಿಯಾಗಿದೆ. ಹಾಗಾಗಿ ಸಾಮಾಜಿಕ ವ್ಯವಸ್ಥೆಯಲ್ಲಿ ಯಾವ ಕೊರತೆಗಳು ಇಲ್ಲವೇ ಇಲ್ಲ ಎಂದು ಹೇಳಲು ಬರುವುದಿಲ್ಲ. ಗ್ರಾಮದಲ್ಲಿ ಕೆಲವೊಮ್ಮೆ ಅಹಿತಕರ ಘಟನೆಗಳು ನಡೆದಿವೆ. ಅದಕ್ಕೆ ಕೆಲವೇ ಜನರ ಸ್ವಹಿತಾಸಕ್ತಿ, ಸ್ವಾರ್ಥತೆ ಹೀಗೆ ಅದಕ್ಕೆ ಹಲವಾರು ಕಾರಣಗಳಿರುತ್ತವೆ. ಅಂತಹ ಕಾರಣಗಳ ವಿವರಣೆ ಹಾಗೂ ವಿಶ್ಲೇಷಣೆ ಮಾಡುವುದಕ್ಕೆ ಪ್ರಯತ್ನಿಸಿಲ್ಲ. ಏಕೆಂದರೆ 'ಗೋಡೆ ತೊಳೆದಂತೆಲ್ಲ ರಾಡಿ ಬರುತ್ತಾ ಹೋಗುತ್ತದೆ' ವಿನಹಂ ಅದನ್ನು ಪೂರ್ಣ ಸ್ವಚ್ಛಗೊಳಿಸಲು ಸಾಧ್ಯವಿಲ್ಲ. ಆದ್ದರಿಂದ ಅಧ್ಯಯನ ಸಾಮಾಜಿಕ ಸ್ವಾಸ್ಥಕ್ಕೆ ಪೂರಕವಾಗಿರಬೇಕೆಂಬುದು ನನ್ನ ಗ್ರಹಿಕೆಯಾಗಿದೆ. ಗ್ರಾಮದ ಆರ್ಥಿಕತೆಯು ನಾಡಿನ ಇತರ ಗ್ರಾಮಗಳಿಂದ ಹೊರತಾಗಿಲ್ಲ. ಅದರಲ್ಲೂ ಬಡತನ ರೇಖೆಗಿಂತ ಕೆಳಗಿನ ಜನರೇ ಅಧಿಕವಾಗಿದ್ದರೂ ಅವರ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ.

ಗ್ರಾಮದಲ್ಲಿರುವ ಎಲ್ಲ ಧರ್ಮ, ಸಮುದಾಯಗಳ ಸಂಪೂರ್ಣ ವಿವರಣೆ ಕೊಡಲು ಸಾಧ್ಯವಾಗಿಲ್ಲ. ಗ್ರಾಮದ ಶೈಕ್ಷಣಿಕ ಸ್ಥಿತಿಗತಿಯ ಕುರಿತು ಔಪಚಾರಿಕ ವ್ಯವಸ್ಥೆಯ ಶಿಕ್ಷಣದ ಸಾಧನೆಯ ಅಂಕಿ-ಅಂಶಗಳನ್ನು ಕಂಡುಕೊಳ್ಳಲಾಗಿದೆ. ಇದು 'ಅತ್ತಗೊಂದು ಕಾಲ ಸೊಸೆಗೊಂದು ಕಾಲ' ಎನ್ನುವ ಮಾತಿನಂತೆ ಒಂದು ಕಾಲದಲ್ಲಿ ಕೇವಲ ಉಳ್ಳವರ ವರ್ಗದ ಹಾಗೂ ಉಳ್ಳವರ ಸ್ವತ್ತಾಗಿದ್ದ ಶಿಕ್ಷಣ ಇಂದು ಹಿಂದುಳಿದವರ ಬಗೆಗೆ ವಾಲಿರುವುದು ಕಾಣುತ್ತದೆ. ಇದಕ್ಕೆ ಸರಕಾರದ ಸಾರ್ವತ್ರಿಕ ಶಿಕ್ಷಣವೇ ಕಾರಣವಾಗಿದೆ. ಅದು ಸಹ ಮೂಲ ಶಿಕ್ಷಣಕ್ಕೆ ಮಾತ್ರ ಸೀಮಿತವಾದಂತಿದೆ. ಅದನ್ನು ಅಧ್ಯಯನದಲ್ಲಿ ವಿವಿಧ ಅಂಶಗಳಿಂದ ಗುರುತಿಸಲಾಗಿದೆ. ಗ್ರಾಮದ ರಾಜಕೀಯ ವ್ಯವಸ್ಥೆಯ ಕುರಿತು ಸ್ವಾತಂತ್ರ್ಯನಂತರ ಕಾಲಘಟ್ಟದಲ್ಲಿ ಆಡಳಿತ ಹಾಗೂ ರಾಜಕೀಯ ಸ್ಥಿತ್ಯಂತರಗಳನ್ನು ಗುರುತಿಸಲಾಗಿದೆ. ಆದರೆ ಸ್ವಾತಂತ್ರ್ಯಪೂರ್ವದ ಗ್ರಾಮದ ರಾಜಕೀಯ ಚಿತ್ರಣವನ್ನು ಖಚಿತವಾಗಿ ಹಾಗೂ ಸವಿಸ್ತಾರವಾಗಿ ಗುರುತಿಸಲು ಸಾಧ್ಯವಾಗಿಲ್ಲ. ಇದು ಅಧ್ಯಯನದ ಮಿತಿಯೂ ಆಗಿದೆ. ಗ್ರಾಮದಲ್ಲಿರುವ ಜನರ ಆಚರಣೆಗಳು ಬಹುತೇಕ ಉತ್ತರ ಕರ್ನಾಟಕದ ಎಲ್ಲಾ ಗ್ರಾಮಗಳಂತೆ ಸಾಮಾನ್ಯವಾಗಿವೆ. ಇದನ್ನು ಗ್ರಾಮದಲ್ಲಿ ಕಂಡಂತೆ ವಿವರಿಸಲಾಗಿದೆ. ಒಂದೊಮ್ಮೆ ಇದು ಅಗತ್ಯವಿಲ್ಲವೆನಿಸಿತು. ಆದರೆ ಸಾಂಪ್ರದಾಯಿಕ ಆಚರಣೆಗಳು

ಕಾಲದಿಂದ ಕಾಲಕ್ಕೆ ಸ್ಥಿತ್ಯಂತರ ಹೊಂದುವುದರಿಂದ ಅದನ್ನು ಗುರುತಿಸಬೇಕೆನಿಸಿತು. ಗ್ರಾಮದ ದೈವಗಳ ಹಾಗೂ ವಿಶೇಷ ಹಬ್ಬಗಳನ್ನು ಪರಿಚಯಿಸುವುದರಿಂದ ವಾರ್ಷಿಕಾವರ್ತನದ ಆಚರಣೆಗಳನ್ನು ಗುರುತಿಸಲಾಯಿತು. ಗ್ರಾಮದಲ್ಲಿನ ಬಹುಪಾಲು ಜನರು ಸೇರಿ ಆಚರಿಸುವ ಸಾಮೂಹಿಕ ಜಾತ್ರೆ, ಹಬ್ಬ-ಹರಿದಿನಗಳನ್ನು ಮಾತ್ರ ಗುರುತಿಸಲಾಗಿದೆ. ಆದರೆ ಕೆಲವು ಜಾನಪದೀಯ ಆಚರಣೆಗಳನ್ನು ಹಾಗೂ ಕೃಷಿ ಸಂಬಂಧಿ ಆಚರಣೆಗಳನ್ನು ಅಧ್ಯಯನಕ್ಕೊಳಪಡಿಸಲು ಸಾಧ್ಯವಾಗಿಲ್ಲ. ಇದೊಂದು ಕೊರತೆಯೂ ಆಗಿದೆ. ಗ್ರಾಮದಲ್ಲಿ ಜನಪದ ಸಾಹಿತ್ಯ ಬಹು ಹೆಮ್ಮಾರವಾಗಿ ಬೆಳೆದಿದೆ. ಕಡಲಬಾಳು ಗ್ರಾಮದ ಪ್ರಾಚೀನತೆಯ ಪರಂಪರೆ ಹಾಗೂ ಸಮಕಾಲೀನ ಸಂದರ್ಭದಲ್ಲಿ ಗ್ರಾಮದಲ್ಲಾದ ಸ್ಥಿತ್ಯಂತರಗಳನ್ನು ಹಾಗೂ ಅವುಗಳಿಗೆ ಕಾರಣವಾದ ಜಾಗತೀಕರಣದ ಪ್ರಭಾವವನ್ನು ಅವುಗಳ ನಡುವೆಯು ಗ್ರಾಮದಲ್ಲಿ ಇನ್ನೂ ಜೀವಂತವಾಗಿರುವ ಗ್ರಾಮ ಪರಂಪರೆಯನ್ನು ಅಗತ್ಯ ವಿಶ್ಲೇಷಣೆಯೊಂದಿಗೆ ನೋಡಲಾಗಿದೆ. ಹೀಗೆ ನಾನು ಮಾಡಿದ ಕಡಲಬಾಳು ಗ್ರಾಮ ಅಧ್ಯಯನವು ನೀರಿನ ಮೂಲಕ ಹೋಲಿಸಿದರೆ, ಅದು ಒಂದು ಹಳ್ಳದ ಕೆಲಸವಿದ್ದಂತೆ ಎಂದು ಹೇಳಬಹುದು. ಏಕೆಂದರೆ ಹಲವಾರು ಹಳ್ಳಗಳು ಕೂಡಿ ನದಿಯಾಗುವಂತೆ ಹಲವಾರು ನದಿಗಳು ಕೂಡಿ ಒಂದು ಸಮುದ್ರವಾಗುವಂತೆ ಗ್ರಾಮ ಅಧ್ಯಯನಕ್ಕೆ ವಿಷಯಗಳ ಮಹಾಪೂರವೇ ಇರುತ್ತದೆ. ಅದನ್ನು ನಾವು ನೋಡುವ ರೀತಿ ಅಧ್ಯಯನದ ವಿಷಯವಸ್ತುವಾಗಿದೆ. ಆ ಹಿನ್ನೆಲೆಯಲ್ಲಿ ನಾನು ಕಡಲಬಾಳು ಗ್ರಾಮವನ್ನು ಅಧ್ಯಯನ ಮಾಡುತ್ತಾ ಹೋದಂತೆ, ನಾನು ಸಮುದ್ರದ ನೀರನ್ನು ಬಟ್ಟಲಿನಿಂದ ಅಳೆಯುತ್ತಿದ್ದೇನೆ ಎಂಬ ಭಾವ ಬಂತು. ಹೀಗೆ ಗ್ರಾಮದ ಅಧ್ಯಯನದ ಹರಿವು ನನಗೆ ಅಧ್ಯಯನ ಮಾಡುತ್ತಾ ಹೋದಂತೆ ಅರಿವಾಯಿತು. ಆ ಹಿನ್ನೆಲೆಯಲ್ಲಿ ನೋಡಿದಾಗ ಈ ಅಧ್ಯಯನವು ಕಡಲಬಾಳು ಬಗೆಗಿನ ಶೋಧದಲ್ಲಿ ಪರಿಪೂರ್ಣ ಅಧ್ಯಯನವಲ್ಲ. ಕಂಡುಬಂದ ವಿಷಯಗಳನ್ನು ಕ್ಷೇತ್ರಕಾರ್ಯದಲ್ಲಿ ನೋಡುತ್ತಾ ಹೋದಂತೆ ಪ್ರಸ್ತುತ ಅಧ್ಯಯನದ ಪ್ರತಿಯೊಂದು ಅಧ್ಯಾಯಗಳು ಒಂದೊಂದು ಮಹಾಪ್ರಬಂಧಕ್ಕೆ ಆಹಾರ ವಸ್ತುಗಳಾಗುತ್ತವೆ ಎಂದು ಹೇಳಬಹುದು. ಆದ್ದರಿಂದ ಕಡಲಬಾಳು ಗ್ರಾಮ ಅಧ್ಯಯನವು ಗ್ರಾಮದ ಬಹುಪಾಲು ವಿಷಯಗಳನ್ನು ಸಂಕ್ಷಿಪ್ತವಾಗಿ ಸಂಗ್ರಹಿಸಿದ ಮಾಹಿತಿ ಪ್ರಧಾನವಾಗಿರುತ್ತದೆ.

ನಾವು ಜನ ಸಮುದಾಯ ಬದುಕಿನಲ್ಲಿ ಬರುವಂತಹ ಆಚರಣೆ ಅವರು ಆಚರಣೆ ಮಾಡಿಕೊಂಡು ಬಂದಂತಹ ರೀತಿ ನೀತಿಗಳು ಇವುಗಳನ್ನೆಲ್ಲ ಒಳಗೊಂಡಿರುವುದಾಗಿ ಸಂಸ್ಕೃತಿಯೂ ನಮಗೆ ಸುಂದರವಾದ ಬದುಕನ್ನು ಬೆಳಗಲು ಸಹಾಯಕವಾಗಿದೆ. ನಾವು ಎಷ್ಟೇ ವಿದ್ಯಾವಂತ ಬುದ್ಧಿವಂತರಾದೂ ನಮಗೆ ವಿದ್ಯೆಯ ಜೊತೆಗೆ ಸಂಸ್ಕೃತಿಯು ಬೇಕು. ಸಂಸ್ಕೃತಿ ಇಂದು ನಿನ್ನೆಯದಲ್ಲ. ಅದು ಅನಾದಿಕಾಲದಿಂದಲೂ ಇರುವಂತಹ ಬಂದಿರುವುದಾಗಿದೆ. ದ್ರಾವಿಡರ ಜೀವನ ವಿಧಾನಗಳಿಂದ ಪ್ರಾರಂಭವಾದ ಈ ದೇಶದ ಸಂಸ್ಕೃತಿ ಸಮಾನತೆಯಿಂದಲೇ ಸಹೋದರತೆ

ಇದ್ದ ಸಮಾಜದಲ್ಲಿ, ವರ್ಣಸಮುದಾಯತೆ ವ್ಯವಸ್ಥೆಯು ಉಂಟಾಗಿ ಶೋಷಣೆಯ ಭೂತಾಕಾರವಾಗಿ ಬೆಳೆದುಕೊಂಡು ಪ್ರತಿಯೊಂದು ಹಳ್ಳಿಗಳಲ್ಲಿ ಗ್ರಾಮಗಳಲ್ಲಿ ಬೇರು ಬಿಟ್ಟಿದೆ. ಕಡಲಬಾಳು ಗ್ರಾಮವನ್ನು ಸಹ ಒಳಗೊಂಡಿದೆ. ಅಲ್ಲಿನ ಜನರು ರಾಜಕೀಯ ಧಾರ್ಮಿಕ ಸಾಮಾಜಿಕ ಸ್ಥಿತಿಯನ್ನು ಅವಲಂಬಿಸಿರುವಿಕೆಯನ್ನು ಕಾಣಬಹುದಾಗಿದೆ. ಈ ಕಡಲಬಾಳು ಗ್ರಾಮ ವಿವಿಧ ಸಮುದಾಯಗಳನ್ನು ಹೊಂದಿದ್ದು, ಗ್ರಾಮದ ಸಾಂಸ್ಕೃತಿಕ ಸಮೃದ್ಧಿಗೆ ಎಲ್ಲರ ಕೊಡುಗೆ ಇದೆ. ಪ್ರತಿ ಸಮುದಾಯಗಳಿಗೂ ಬೇರೆ ಬೇರೆ ಬೀದಿಗಳಿದ್ದ ಮನೆಗಳು ಅಂತಸ್ತಿಗೆ ತಕ್ಕಂತೆ ಮನೆಯನ್ನು ಕಟ್ಟಿಸಿಕೊಂಡಿದ್ದಾರೆ. ಆಧುನಿಕತೆಗೆ ತಕ್ಕಂತೆ ಭವ್ಯವಾದ ನಗರದಲ್ಲಿ ಮನೆಗಳಾಗಿರುವುದು, ಬಿಲ್ಡಿಂಗ್‌ಗಳು ಹೆಚ್ಚಾಗುತ್ತವೆ. ಇವು ಸುವ್ಯವಸ್ಥೆಯನ್ನು ಹೊಂದಿವೆ. ಸಮಾಜದಲ್ಲಿರುವ ಎಲ್ಲ ಸಂಸ್ಥೆಗಳು ತಮ್ಮ ಸಂಬಂಧಪಟ್ಟವರನ್ನು ಬೇರೆಯವರು ನೆರೆ ಹೊರೆ ಬಂಧು ಬಳಗ ಸ್ನೇಹಿತರು ಶತ್ರುಗಳ ರಕ್ತ ಸಂಬಂಧಿಗಳು ಇದೇ ಸಾಮಾಜಿಕ ಭೇದಗಳು ಹುಟ್ಟಿ ಹಾಕಿವೆ ಎಂದು ತಿಳಿಯಬಹುದು. ಒಂದು ಕುಟುಂಬ ವ್ಯವಸ್ಥೆ ಅಪ್ಪ–ಅಮ್ಮ, ಅಕ್ಕ–ತಂಗಿ, ಅಣ್ಣ–ತಮ್ಮ ಮುಂತಾದವರ ಸಂಬಂಧ ಇಲ್ಲಿನ ಕುಟುಂಬ ವ್ಯವಸ್ಥೆ. ಪಿತೃಪ್ರಧಾನ ಮಾತೃಪ್ರಧಾನ ಕುಟುಂಬಗಳಿವೆ. ತಂದೆಯು ಮನೆಯ ಯಜಮಾನನಾಗಿದ್ದರೆ. ಕುಟುಂಬದಲ್ಲಿ ಅಂತಿಮ ತೀರ್ಮಾನ ತೆಗೆದೆಕೊಳ್ಳುವಲ್ಲಿ ತಂದೆಯ ಪಾತ್ರ ವಿಶಿಷ್ಟವಾಗಿದೆ. ವಿವಾಹ ಮತ್ತು ಕುಟುಂಬ ಇಲ್ಲಿನ ಸಮಾಜದ ಮೂಲ ಭೂತ ಹಕ್ಕು ಹಾಗೇ ಅವಶ್ಯಕ ಅನಿವಾರ್ಯ ಸಂಸ್ಥೆಗಳು. ಪ್ರಸ್ತುತ ಪರಿಸರದಲ್ಲಿನ ವಿವಾಹ ಪದ್ಧತಿಗಳು ಹಲವು ವೈಶಿಷ್ಟ, ಹಲವು ರೀತಿ ವೈವಿಧ್ಯತೆ ಹೊಂದಿರುವುದು ಸಾಂಸ್ಕೃತಿಕ ದೃಷ್ಟಿಯಿಂದ ತುಂಬಾನೇ ಉಪಯೋಗವಾಗಿದೆ. ಈ ಗ್ರಾಮದಲ್ಲಿ ಅತಿಮುಖ್ಯವಾಗಿ ಎಲ್ಲಾ ಸಂಪ್ರದಾಯ ಸಮಾನತೆಯಿಂದ ಕೂಡಿದೆ. ಕೃಷಿ, ಹೈನುಗಾರಿಕೆ, ವ್ಯಾಪಾರ ಕಡಲಬಾಳು ಗ್ರಾಮದ ಬಹುಮುಖ್ಯ ಆರ್ಥಿಕ ಮೂಲದಲ್ಲಿ ಒಂದಾಗಿದೆ. ಬಹು ಜನ ಜೀವನಾಧಾರ ಆಗಿದೆ. ಈ ಗ್ರಾಮದಲ್ಲಿ ಯೋಗ್ಯವಾದ ಭೂಮಿಯೂ ಇದೆ. ದೇಸೀ ಜ್ಞಾನಕ್ಕೆ ಪೂರಕವಾದ ನಿಸರ್ಗದ ಸಮತೋಲನಕ್ಕೆ ಕಾರಣವಾದ ಸಂಪ್ರದಾಯ ಕೃಷಿ ಪದ್ಧತಿಯೂ ಇದೆ. ನೇಗಿಲು ಉಳುಮೆ ಮಾಡುವುದು ಕಡಿಮೆ. ಸಾಂಪ್ರದಾಯಿಕ ಆಚರಣೆಗಳು ಕೆಲವು ಬದಲಾವಣೆಗಳೊಂದಿಗೆ ಇಂದಿಗೂ ಜೀವಂತವಾಗಿದೆ. ಹೈನುಗಾರಿಕೆ ಮತ್ತೊಂದು ಆರ್ಥಿಕ ಮೂಲವಾಗಿದೆ. ಕಡಲಬಾಳು ಗ್ರಾಮದಲ್ಲಿ ಹಾಲು ಉತ್ಪಾದನಾ ಸಹಕಾರಿ ಸಂಘ ಇದೆ.

ಈ ಗ್ರಾಮಕ್ಕೆ ಪ್ರತಿನಿತ್ಯ ದೇವಸ್ಥಾನಕ್ಕೆ ಭೇಟಿ ನೀಡುವ ಭಕ್ತಾದಿಗಳು ದಿನೇ ದಿನೇ ಹೆಚ್ಚಾಗುತ್ತಿದ್ದಾರೆ. ವಾರಗಳಲ್ಲಿಯು ಭಕ್ತರ ಸಂಖ್ಯೆಯು ಜಾಸ್ತಿ ದಾಡುತ್ತದೆ. ಹೂ, ಹಣ್ಣು, ಪೂಜೆ ವಸ್ತುಗಳನ್ನು ಸಹ ಮಾರಾಟ ಮಾಡುತ್ತಿದ್ದರು. ಇಲ್ಲಿ ಜನಪದ ಸಾಹಿತ್ಯದಲ್ಲಿ ಹೆಣ್ಣು ಮಕ್ಕಳಿಗೆ ಪ್ರಧಾನ ಪಾತ್ರ, ಅವರ ಜೀವನದ ಅಪಾರ ನಂಬಿಕೆ ಮೇಲೆ ಮಹೇಶ್ವರ, ಬಸವಣ್ಣ,

